ಮೈಸೂರು ವಿಶ್ವವಿದ್ಯಾನಿಲಯ ಕನ್ನಡ ಗ್ರಂಥಮಾಲೆ — ೧೯

# ವಚನಧರ್ಮಸಾರ






ಮೈಸೂರು
ಮೈಸೂರು ವಿಶ್ವವಿದ್ಯಾನಿಲಯದಿಂದ ಪ್ರಕಟಿಸಲ್ಪಟ್ಟಿದೆ
೧೯೪೨

[ ಬೆಲೆ: ರೂ. ೧—೪—೦

ಮೈಸೂರು ವಿಶ್ವವಿದ್ಯಾನಿಲಯ ಕನ್ನಡ ಗ್ರಂಥಮಾಲೆ—೧೯

ಪ್ರಧಾನ ಸಂಪಾದಕ

ರಾಜಸೇವಾಸಕ್ತ ಬಿ. ಎಂ. ಶ್ರೀಕಂಠಯ್ಯ, ಎಂ.ಎ., ಬಿ.ಎಲ್.

# ವಚನಧರ್ಮಸಾರ




ಲೇಖಕರು

ಎಂ. ಆರ್. ಶ್ರೀನಿವಾಸಮೂರ್ತಿ, ಬಿ.ಎ.

ಮೈಸೂರು:

ಮೈಸೂರು ವಿಶ್ವವಿದ್ಯಾನಿಲಯ

೧೯೪೩

# ಮುನ್ನುಡಿ

'ವಚನಧರ್ಮಸಾರ' ದಲ್ಲಿ ಸುಮಾರು ಎಂಟುನೂರು ವಚನಗಳನ್ನು ಸಂಗ್ರಹಿಸಿ, ಶಿವಶರಣರು ಸಾರಿದ ವಿಶ್ವವ್ಯಾಪ್ತಿಯುಳ್ಳ ಧರ್ಮದ ತಿರುಳನ್ನು ತೆಗೆಯಲು ಪ್ರಯತ್ನಪಟ್ಟಿದೆ. ವಚನಗಳು ಶಾಸ್ತ್ರವೂ ಅಹುದು; ಸಾಹಿತ್ಯವೂ ಅಹುದು. ಕನ್ನಡಸಾಹಿತ್ಯದ ಜೀವರತ್ನಗಳಾಗಿಯೂ, ಕನ್ನಡ ನುಡಿಯ ಚೆಲುವುಗಳಾಗಿಯೂ ಬೆಳಗುವ ಈ ಹಿರಿಮೆಯ ಮಾತುಗಳನ್ನು ಕನ್ನಡಿಗರೆಲ್ಲರೂ ಸವಿದು, ತಮ್ಮ ಹಿಂದಿನ ಇತಿಹಾಸದ ಉಜ್ವಲತೆಯನ್ನು ಅನುಭವಿಸಬೇಕೆಂಬ ಉದ್ದೇಶದಿಂದ ಈ ಗ್ರಂಥವನ್ನು ಬರೆದಿದೆ.

ಗ್ರಂಥಕರ್ತರಾದ ಶ್ರೀ. ಶ್ರೀನಿವಾಸಮೂರ್ತಿಯವರು ಕನ್ನಡಿಗರಿಗೆ ಹೊಸಬರಲ್ಲ. ಇವರ ವಿಶಾಲವಾದ ಭಾವನೆಗಳೂ, ಆಳವಾದ ವ್ಯಾಸಂಗವೂ, ರಮ್ಯಶೈಲಿಯೂ ಪ್ರಸಿದ್ಧವಾಗಿವೆ. ವೀರಶೈವಸಾಹಿತ್ಯವನ್ನು ಇವರು ವಿಶ್ವಾಸ ಗೌರವಗಳಿಂದ ದೀರ್ಘಕಾಲ ಪರಿಶೀಲಿಸಿದ್ದಾರೆ: ತಮ್ಮ ಜೀವನವನ್ನೇ ಈ ಪ್ರೇಮಶ್ರಮಕ್ಕೆ ಅರ್ಪಿಸಿದ್ದಾರೆ ಎಂದು ಹೇಳಿದರೂ ಹೇಳಬಹುದು. ಭಕ್ತಿಭಾಂಡಾರಿಬಸವಣ್ಣನವರು, ಪ್ರಭುಲಿಂಗಲೀಲೆಯಸಂಗ್ರಹ, ನಾಗರಿಕ ಮುಂತಾದ ಗ್ರಂಥಗಳೂ ವೀರಶೈವಕವಿಗಳ ವಿಮರ್ಶೆಗಳೂ ಇವರ ಪರಿಶೋಧನೆ, ಅಭಿರುಚಿ, ಸರ್ವಸಹಾನುಭೂತಿಗಳಿಗೆ ನಿದರ್ಶನಗಳಾಗಿ ಕನ್ನಡಿಗರ ಆದರಣೆಗೆ ಪಾತ್ರವಾಗಿವೆ. ಇಂತಹ ಹಿರಿಯ ಸಾಹಿತಿಗಳು ವಿಶ್ವವಿದ್ಯಾಲಯಕ್ಕಾಗಿ ಈ ಗ್ರಂಥವನ್ನು ರಚಿಸಿಕೊಟ್ಟದ್ದಕ್ಕಾಗಿ ನಾವು ಅವರಿಗೆ ಚಿರಋಣಿಗಳಾಗಿದ್ದೇವೆ.

ಶರಣಸಾಹಿತ್ಯ ಹುಟ್ಟಿದ ಕಾಲ, ಮಹಾಪುರುಷರಾದ ಪ್ರಮುಖ ಶರಣರು, ಅವರ ವ್ಯಕ್ತಿತ್ವ, ಉಪದೇಶ, ವೀರಶೈವ ಮತದ ವೈಶಿಷ್ಟ್ಯಗಳಾದ ಅಷ್ಟಾವರಣ· ಷಟ್ಸ್ಥಲಸಿದ್ಧಾಂತಗಳ ಪ್ರತಿಪಾದನೆ, ಸಾಮಾನ್ಯವಾಗಿ ವಚನಗಳಲ್ಲಿ ತಿಳಿಯುವ ನೀತಿ, ಸ್ತ್ರೀಯರ ಸ್ಥಾನ, ಸಮಾಜಧ್ಯೇಯಗಳು, ಅವುಗಳ ಕಾವ್ಯಗುಣ—ಈ ವಿಷಯಗಳನ್ನು ಈ ಗ್ರಂಥದಲ್ಲಿ ವಿವರಿಸಿದೆ. ಬಸವಣ್ಣ, ಚೆನ್ನಬಸವಣ್ಣ, ಅಲ್ಲಮಪ್ರಭು, ಸಿದ್ಧರಾಮ, ಮಹದೇವಿಯಕ್ಕ ಈ

ಅಯ್ಯನವರನ್ನು ಆಯ್ದು, ಅವರನ್ನು ಶರಣರಿಗೆಲ್ಲಾ ಹಿರಿಯ ಪ್ರತಿನಿಧಿಗಳಾಗಿ ಭಾವಿಸಿ, ಅವರ ಮೂಲಕವೇ ಹೆಚ್ಚಾಗಿ ಶರಣಧರ್ಮವನ್ನು ತೋರಿಸಿದೆ. ೧೨ ನೆಯ ಶತಮಾನದ ಮಧ್ಯಭಾಗದ ಸಮಾಜದ ರಚನೆಯನ್ನೂ, ಶರಣರು ಸಾಧಿಸಿದ ಸುಧಾರಣೆ ಕ್ರಾಂತಿಗಳನ್ನೂ, ಅವರ ನಿರ್ಭಯ, ನಿರ್ದಾಕ್ಷಿಣ್ಯವಾದ ವಿಚಾರಪರತೆಯನ್ನೂ ವಿಮರ್ಶಿಸಿದೆ. ಮುತ್ತಿನ ಮಣಿಯಂತೆ ಹೊಳೆಯುವ ತಿಳಿಗನ್ನಡದ ನಡೆಯನ್ನೂ, ಎಲ್ಲಜನಕ್ಕೂ ಬೆಳಕನ್ನು ಬೀರಬೇಕೆಂಬ ದೊಡ್ಡ ನೋಟವನ್ನೂ ಸ್ಪಷ್ಟಪಡಿಸಿದೆ.

ವಚನಗಳ ತಾತ್ಪರ್ಯವನ್ನೂ, ಅವುಗಳಿಂದ ಹೊರಡುವ ಅಭಿಪ್ರಾಯಗಳನ್ನೂ ಗ್ರಂಥಕರ್ತರು ಹೊಸದೃಷ್ಟಿಯಿಂದ ನೋಡುತ್ತಿದ್ದಾರೆ. ಈ ರೀತಿ ವಚನಗಳನ್ನು ಓದುವುದು ಸಂಪ್ರದಾಯದೃಷ್ಟಿಗೆ ಕೆಲವು ಕಡೆ ಸರಿ ಹೋದೀತೋ ಹೇಗೋ. ಭಿನ್ನಾಭಿಪ್ರಾಯವಿದ್ದ ಕಡೆ ಸಮಾಧಾನಚಿತ್ತದಿಂದ ಸಹೃದಯರು ವಿಮರ್ಶಿಸುವರೆಂದು ನಿರೀಕ್ಷಿಸಬಹುದಾಗಿದೆ.

ಲೋಕದ ಮತಗಳಲ್ಲಿ ಕೇವಲ 'ಮತ'ಗಳೂ, ಮತೀಯಾಂಶಗಳೂ, ಪುರಾಣ ಕಥೆಗಳೂ, ಪುರಾತನರ ಜೀವನ ಚರಿತ್ರೆಗಳೂ, ತತ್ವವಿಚಾರಗಳಲ್ಲಿ ವೈಶಿಷ್ಟ್ಯಗಳೂ, ಸಂಸ್ಕಾರ ಪ್ರಕ್ರಿಯೆಗಳೂ ಮುಂತಾದ ವಿಚಾರಗಳು ಸೇರಿರುತ್ತವೆ. ಇವುಗಳಲ್ಲಿ ಹಲವು ಸಮಾಜವನ್ನು ಒಡೆಯುತ್ತವೆ: ಬೇರೆ ಬೇರೆ ಗುಂಪುಗಳಾಗಿ ವಿಂಗಡಿಸುತ್ತವೆ. ಜ್ಞಾನದೃಷ್ಟಿಯಿಂದ ವಿಚಾರ ಮಾಡತಕ್ಕವನಿಗೆ, ತತ್ವಕಾಮನಿಗೆ, ಇವೆಲ್ಲಾ ಬೇಕಾದ ಸಂಗತಿಗಳೇ. ಇವಕ್ಕೂ ಮೇಲಾಗಿ ಮಾನವನು ಮಾನವಕುಲಕ್ಕೆ ಹೊಂದಿಕೊಂಡು, ತನ್ನ ಆತ್ಮಶುದ್ಧಿಯನ್ನೂ, ಎಲ್ಲರ ಪ್ರೇಮಸಂಬಂಧವನ್ನೂ ಬೆಳಸಿಕೊಂಡು "ಇಲ್ಲಿಯೂ ಅಲ್ಲಿಯೂ ಸಲ್ಲುವಂತೆ" ಬಾಳುವುದೇ ಮುಖ್ಯ ಗುರಿಯಾಗಿರಬೇಕು. ಆದುದರಿಂದಲೇ 'ಮತ'ಕ್ಕಿಂತಲೂ 'ಧರ್ಮ' ದೊಡ್ಡಮಾತು. ಮತ ಕಾದಿ ಮಡಿದರೆ, ಧರ್ಮ ಕೂಡಿಸಿ ಬದುಕಿಸುತ್ತದೆ. ಅಹಂಕಾರ, ಪ್ರತಿಷ್ಠೆ, ವಾದ, ತಾನೇ ಸರಿ ಎಂಬ ಹಟ ಒಂದು: ವಿನಯ, ಸೇವೆ, ತ್ಯಾಗ, ಸಾಮರಸ್ಯ, ಗಾಳಿಯಂತೆ ಎಲ್ಲರಿಗೂ ಜಾಗ ಬಿಡತಕ್ಕ, ಎಲ್ಲರಿಗೂ ಉಸಿರಾಗತಕ್ಕ, ದೊಡ್ಡ ಗುಣ ಮತ್ತೊಂದು. ಲೋಕಕಲ್ಯಾಣಕ್ಕೆ, ಭವರೋಗ

ವೈದ್ಯಕ್ಕೆ, ಧರ್ಮ, ಸನಾತನಧರ್ಮ, ವಿಶ್ವದರ್ಶನಧರ್ಮ ಎಷ್ಟು ಅಗತ್ಯ ವೆಂದು ಎಲ್ಲ ಮತೀಯರೂ ತಿಳಿಯಬೇಕಾದ ಅಗತ್ಯ ಈಗ ಒದಗಿದೆ.

ಸತ್ಯ, ಸೌಂದರ್ಯ, ಸ್ವಾತಂತ್ರ್ಯ, ಸಹಾನುಭೂತಿ, ಸರ್ವಸಮತಿ — ಇವೆಲ್ಲಾ ಸದ್ಧರ್ಮದ ಲಕ್ಷಣಗಳು. ಚಿನ್ನದೊಡನೆ ಕೂಡುವುದು ಚಿನ್ನ — ಹಿತ್ತಾಳೆಯಲ್ಲ; ಪಾದರಸದೊಡನೆ ಹೊಂದಿಕೊಳ್ಳುವುದು ಪಾದರಸ, ಕಸ ವಲ್ಲ. ತೂರಬೇಕು, ಸೋಸಬೇಕು, ಒರೆಗಲ್ಲಿಗೆ ತೀಡಬೇಕು ನೋಡಬೇಕು. ಎಲ್ಲಕಡೆಯಿಂದಲೂ ಒಳ್ಳೆಯದನ್ನು ತುಂಬಿಕೊಳ್ಳಬೇಕು. ಅಗ್ಗೆ ನಮ್ಮ ಪ್ರಾರ್ಥನೆ ನಿಜ:—

ಅಸತೋ ಮಾ ಸದ್ಗಮಯ
ತಮಸೋ ಮಾ ಜ್ಯೋತಿರ್ಗಮಯ
ಮೃತ್ಯೋರ್ಮಾ ಅಮೃತಂ ಗಮಯ

ಒಂದು ಮತ, ಧರ್ಮ, ಪ್ರಪಂಚದ ಒಂದು ಭಾಗದಲ್ಲಿ ಮಾತ್ರ ನಿಂತಿರಬಹುದು; ಮತ್ತೊಂದು ಪ್ರಪಂಚದಲ್ಲೆಲ್ಲಾ ಹರಡಿ ಬೆಳೆಯುತ್ತಿರ ಬಹುದು. ಆದರೆ ಬೆಲೆ ಜನಸಂಖ್ಯೆಯ ಮೇಲೆ, ವಿಸ್ತೀರ್ಣದ ಮೇಲೆ ನಿಂತಿಲ್ಲ. ಬೆಲೆ ಬೆಲೆಯ ಮೇಲೆ ನಿಂತಿದೆ. ವಚನಧರ್ಮದ ಧರ್ಮಸಾರ ಯಾರಿಗೂ ಸತ್ಯವೇ, ಯಾರಿಗೂ ಧರ್ಮವೇ. ಈ ಮಹಾವಾಕ್ಯಗಳಿಗಿಂತ ಹೆಚ್ಚಿನ ಧರ್ಮ, ಸತ್ಯ ಎಲ್ಲಿ ಕಾಣಬಹುದು?—

ದೇವನೊಬ್ಬ, ನಾಮ ಹಲವು.
ದಯವಿಲ್ಲದ ಧರ್ಮವಾವುದಯ್ಯಾ?
ಅಯ್ಯಾ ಎಂದಡೆಸ್ವರ್ಗ, ಎಲವೋ ಎಂದಡೆ ನರಕ.
ನೊಂದ ನೋವ ನೋಯದವರೆತ್ತ ಬಲ್ಲರು?
ಕಳಬೇಡ, ಕೊಲಬೇಡ, ಹುಸಿಯ ನುಡಿಯಲು ಬೇಡ, ಮುನಿಯ ಬೇಡ, ಅನ್ಯರಿಗೆ ಅಸಹ್ಯಪಡಬೇಡ, ತನ್ನ ಬಣ್ಣಿಸಬೇಡ, ಇದಿರ ಹಳಿಯಲು ಬೇಡ, ಇದೇ ಅಂತರಂಗ ಶುದ್ಧಿ, ಇದೇ ಬಹಿರಂಗ ಶುದ್ಧಿ, ಇದೇ ನಮ್ಮ ಕೂಡಲ ಸಂಗಮ ದೇವನ ನೊಲಿಸುವ ಪರಿ.

ಹರ ತನ್ನ ಭಕ್ತರ ತಿರಿವಂತೆ ಮಾಡುಪ. ಒರೆದು ನೋಡುವ ಸುವರ್ಣದ ಚಿನ್ನದಂತೆ, ಅರೆದು ನೋಡುವ ಚಂದನದಂತೆ, ಅರಿದು ನೋಡುವ ಕಬ್ಬಿನ ಕೋಲಿನಂತೆ. ಬೆದರದೆ ಬೆಚ್ಚದೆ ಇದ್ದಡೆ ಕರವಿಡಿದೆತ್ತಿಕೊಂಬ ನಮ್ಮ ರಾಮನಾಥ.

ಕೊಂದಡೆ ಶರಣೆಂಬುದ ಮಾಣೆ,

ಹುತ್ತವ ಬಡಿದಡೆ ಹಾವು ಸಾಯಬಲ್ಲುದೇ, ಅಯ್ಯ ?

ಹಾವಿನ ಬಾಯ ಹಲ್ಲು ಕಳೆದು ಹಾವನಾಡಿಸಬಲ್ಲರೆ ಹಾವಿನ ಸಂಗವೇ-ಲೇಸು ಕಂಡಯ್ಯ, ಕಾಯದ ಸಂಗವೇ ಲೇಸು ಕಂಡಯ್ಯ,

ಕರಗಿಸಿ ಎನ್ನ ಮನದ ಕಾಳಿಕೆಯ ಕಳೆಯಯ್ಯಾ ! ಒರೆಗೆ ಬಣ್ಣಕ್ಕೆ ತಂದೆನ್ನ ಪುಟವಿಕ್ಕಿ ನೋಡಯ್ಯಾ ! ಕಡಿಪಕ್ಕೆ ಬಡಿಪಕ್ಕೆ ತಂದೆನ್ನ ಕಡಿಯಾಣಿಯ ಮಾಡಿ ನಿಮ್ಮ ಶರಣರ ಪಾದಕ್ಕೆ ತೊಡಿಗೆಯ ಮಾಡಿ ಸಲಹು ಕೂಡಲ ಸಂಗಮದೇವಾ !

ಶಿವನೊಡವೆಯ ಶಿವನಿಗೊಪ್ಪಿಸಿ.

ಇದೇ ಶರಣರ ಧರ್ಮಸಾರ. ಇದೇ ಶಿವಕುಲದ ಶಿವಪಥ. ಶಿವಂ ಭೂಯಾತ್.

— ಶ್ರೀ

# ಪೀಠಿಕೆ

ವಚನಧರ್ಮಸಾರವೆಂಬ ಈ ಗ್ರಂಥವನ್ನು ಬರೆಯುವ ಕೆಲಸವನ್ನು ಮೈಸೂರು ವಿಶ್ವವಿದ್ಯಾನಿಲಯದವರು ನನಗೆ ವಹಿಸಿಕೊಟ್ಟದ್ದಕ್ಕಾಗಿ ನಾನು ಅವರಿಗೆ ಬಹಳ ಕೃತಜ್ಞನಾಗಿದ್ದೇನೆ. ಸಾಮಾನ್ಯ ಜನರ ದೃಷ್ಟಿಯಿಂದ ಈ ಗ್ರಂಥವನ್ನು ಬರೆಯಲಾಗಿದೆಯೇ ಹೊರತು ಸಿದ್ಧಾಂತ ಪ್ರತಿಪಾದನೆಯ ಪಂಡಿತ ದೃಷ್ಟಿಯಿಂದ ಇದನ್ನು ಬರೆದಿಲ್ಲ. ದೇವರು, ಭಕ್ತಿ, ಜ್ಞಾನ, ಮೊದಲಾದ ವಿಚಾರಗಳಲ್ಲಿ ವಚನಕಾರರು ಯಾವ ಅಭಿಪ್ರಾಯಗಳನ್ನು ವ್ಯಕ್ತಗೊಳಿಸಿದ್ದಾರೆ ಎಂಬುದನ್ನೂ ಸಮಾಜ ರಚನೆಯನ್ನು ಅವರು ಹೇಗೆ ಉದ್ದೇಶಿಸಿದ್ದಾರೆ ಎಂಬುದನ್ನೂ ತೋರಿಸುವುದಕ್ಕೆ ಈ ಗ್ರಂಥದಲ್ಲಿ ಪ್ರಯತ್ನ ಪಟ್ಟಿದೆ.

ರಾವ್‌ಬಹದ್ದೂರ್ ಪಿ. ಜಿ. ಹಳಕಟ್ಟಿಯವರು ವಚನ ಗ್ರಂಥಗಳಲ್ಲಿ ಮುಖ್ಯವಾದುವನ್ನೆಲ್ಲ ಪ್ರಕಟಪಡಿಸಿ ಕನ್ನಡಿಗರಿಗೆ ದೊಡ್ಡ ಉಪಕಾರ ಮಾಡಿದ್ದಾರೆ. ಸಾಹಿತ್ಯದ ದೃಷ್ಟಿಯಿಂದಲೂ ಮತಧರ್ಮದ ದೃಷ್ಟಿಯಿಂದಲೂ ಹೊಸದೊಂದು ಬೆಳಕು ಕನ್ನಡನಾಡಿನಲ್ಲಿ ಹರಡಿದೆ. ವಿವಿಧ ಮತಗಳೆಂಬ ಬಾಹ್ಯರೂಪಗಳು ಕಂಡು ಬರುತ್ತಿದ್ದರೂ ಒಳಗಿರುವ ಆತ್ಮ ಒಂದೇ ಎಂಬುದು ವಚನಧರ್ಮಸಾರದಿಂದ ತಿಳಿದು ಬರುತ್ತದೆ. ಬಸವಣ್ಣನವರು, ಅಲ್ಲಮಪ್ರಭು, ಮಹದೇವಿಯಕ್ಕ, ಕನ್ನಡಿಗರು ಹೆಮ್ಮೆಪಡಬಹುದಾದ ಮಹಾವ್ಯಕ್ತಿಗಳು.

ವಚನಗಳನ್ನು ತಪ್ಪುಗಳಿಲ್ಲದಂತೆಯೂ, ಒಬ್ಬರದು ಮತ್ತೊಬ್ಬರದಾಗಿ ಸೇರಿಹೋಗದಂತೆಯೂ, ಚೆನ್ನಾಗಿ ಶೋಧಿಸಿ ವಿಂಗಡಿಸಿ ಮುದ್ರಿಸಬೇಕಾದ ಅತ್ಯಗತ್ಯವಾದ ಕೆಲಸ ಒಂದಿದೆ. ಈಗ ಪ್ರಕಟವಾಗಿರುವ ಬಸವೇಶ್ವರನ ವಚನಗಳಲ್ಲಿಯ ಕೆಲವು ವಚನಗಳಿಗೂ ವಚನಶಾಸ್ತ್ರಸಾರದಲ್ಲಿ ಪ್ರಕಟವಾಗಿರುವ ಬಸವಣ್ಣನವರ ಅದೇ ವಚನಗಳಿಗೂ ಪಾಠಭೇದಗಳು ಕಂಡು ಬರುತ್ತವೆ. ಹೀಗೆಯೇ ಇತರ ವಚನಕಾರರ ವಚನಗಳಲ್ಲಿಯೂ ಪಾಠ

ಭೇದವಿದೆ. ಶೂನ್ಯಸಂಪಾದನೆ, ಲಿಂಗ ಲೀಲಾವಿಲಾಸ ಚಾರಿತ್ರ, ಗಣಭಾಷ ರತ್ನಮಾಲೆ, ಎಂಬ ಗ್ರಂಥಗಳಲ್ಲಿ ಬರುವ ಕೆಲವು ವಚನಗಳಿಗೂ ವಚನ ಶಾಸ್ತ್ರಸಾರದ ಅದೇ ಕೆಲವು ವಚನಗಳಿಗೂ ಪಾಠಭೇದವಿದೆ. ಆದುದರಿಂದ ವಚನಗಳನ್ನು ಉದ್ಧರಿಸುವಾಗ ಬಹಳ ಕಷ್ಟಪಡಬೇಕಾಯಿತು. ಸಾಮಾನ್ಯ ವಾಗಿ ವಚನಶಾಸ್ತ್ರಸಾರವನ್ನೂ ಆಯಾ ವಚನಕಾರರ ವಚನಗ್ರಂಥ ಗಳನ್ನೂ ಅನುಸರಿಸಿ ಯುಕ್ತವಾದ ಪಾಠವನ್ನು ಇಟ್ಟುಕೊಂಡು ಈ ಗ್ರಂಥದಲ್ಲಿ ವಚನಗಳನ್ನು ಉದ್ಧರಿಸಲಾಗಿದೆ.

ರಾವ್‌ಬಹದ್ದೂರ್ ಪಿ. ಜಿ. ಹಳಕಟ್ಟಿಯವರು ಪ್ರಕಟಪಡಿಸಿರುವ ಗ್ರಂಥಗಳನ್ನು ಧಾರಾಳವಾಗಿ ಉಪಯೋಗಿಸಿಕೊಂಡಿರುವುದರಿಂದ ಅವರಿಗೆ ನನ್ನ ಕೃತಜ್ಞತೆಯನ್ನು ಸೂಚಿಸಬೇಕಾಗಿದೆ. ಎರಡನೆಯದಾಗಿ, ರಾಜ ಸೇವಾಸಕ್ತ ಬಿ. ಎಂ. ಶ್ರೀಕಂಠಯ್ಯ ಎಂ.ಎ., ಬಿ.ಎಲ್., ಅವರು ಅನೇಕ ಉಪಯುಕ್ತವಾದ ಸಲಹೆಗಳನ್ನು ಕೊಟ್ಟು ಬಹಳ ಉಪಕಾರಮಾಡಿದ್ದಾರೆ. ಅವರ ಸಹಾಯ ಪ್ರೋತ್ಸಾಹಗಳಿಲ್ಲದೆ ಈ ಗ್ರಂಥ ಈ ರೂಪದಲ್ಲಿ ಬರುತ್ತಿರ ಲಿಲ್ಲ. ಅವರಿಗೆ ನನ್ನ ಕೃತಜ್ಞತೆಯನ್ನು ಸಲ್ಲಿಸುತ್ತೇನೆ. ಈ ಪುಸ್ತಕವನ್ನು ಮುದ್ರಣ ಮಾಡುವುದರಲ್ಲಿ ನಾನು ಕೊಟ್ಟ ಹಲವು ತೊಂದರೆಗಳನ್ನು ಸೈರಿಸಿಕೊಂಡು, ಇದನ್ನು ಅಂದವಾಗಿ ಮುದ್ರಣ ಮಾಡಿಕೊಟ್ಟ ಕರ್ಣಾಟಕ ಪಬ್ಲಿಷಿಂಗ್ ಹೌಸ್ ಅಚ್ಚುಕೂಟದವರಿಗೂ ನನ್ನ ಕೃತಜ್ಞತೆಗಳನ್ನು ಸಲ್ಲಿಸುತ್ತೇನೆ.

ಎಂ. ಆರ್. ಶ್ರೀ.

# ಆಕರಗಳ ಪಟ್ಟಿ

| ಗ್ರಂಥ | ಸಂಕೇತ |
| --- | --- |
| ಅಂಬಿಗರ ಚೌಡಯ್ಯನ ವಚನಗಳು | ಅಂ. ಚೌ. ವ. |
| ಚೆನ್ನಬಸವೇಶ್ವರನ ವಚನಗಳು | ಚೆ. ಬ. ವ. |
| ದೇವರ ದಾಸಿಮಯ್ಯನ ವಚನಗಳು | ದೇ. ದಾ. ವ. |
| ಪ್ರಭುದೇವರ ವಚನಗಳು | ಪ್ರ. ದೇ. ವ. |
| ಬಸವೇಶ್ವರನ ವಚನಗಳು | ಬ. ವ. |
| ಮಹದೇವಿಯಕ್ಕನ ವಚನಗಳು | ಮ. ದೇ. ವ. |
| ಮಹಾಂತ ಶಿವಯೋಗಿಗಳ ಗೀತೆ | |
| ಮುಪ್ಪಿನ ಷಡಕ್ಷರಿಯ ವಚನ | |
| ಶೂನ್ಯಸಂಪಾದನೆ | ಶೂ. ಸಂ. |
| ವಚನ ಶಾಸ್ತ್ರಸಾರ ಭಾಗ ೧. ಪೂರ್ವಾರ್ಧ | ವ. ಶಾ. ಸಾ. ಭಾಗ ೧ (ಪೂ.) |
| ,, ,, ಉತ್ತರಾರ್ಧ | ವ. ಶಾ. ಸಾ. ಭಾಗ ೧ (ಉ.) |
| ಸ್ವತಂತ್ರ ಸಿದ್ಧ ಲಿಂಗೇಶ್ವರನ ವಚನಗಳು | ಸ್ವ. ಸಿ. ವ. |
| ಸಿದ್ಧರಾಮೇಶ್ವರನ ವಚನಗಳು | ಸಿ. ರಾ. ವ. |
| ಸಿದ್ಧೇಶ್ವರನ ವಚನಗಳು | ಸಿ. ವ. |
| ಕಣ್ಣಪ್ಪನ ರಗಳೆ | |
| ಚೆನ್ನಬಸವಪುರಾಣ | |
| ಚೆನ್ನಯ್ಯನ ರಗಳೆ | |
| ಪ್ರಬುದ್ಧ ಕರ್ಣಾಟಕ | |
| ಪ್ರಭುದೇವರ ರಗಳೆ | |
| ಬಸವರಾಜದೇವರ ರಗಳೆ | |
| ಪ್ರಭುಲಿಂಗಲೀಲೆಯ ಸಂಗ್ರಹ | |
| ಮಾನಕಂಜರ ರಗಳೆ | |
| ರುದ್ರಪಶುಪತಿಯ ರಗಳೆ | |
| ಸಿಂಗಿರಾಜ ಪುರಾಣ | |
| ಸಿದ್ಧರಾಮ ಚಾರಿತ್ರ | |

ವೀರಶೈವಾಮೃತ ಮಹಾಪುರಾಣ
ಈಶೋಪನಿಷತ್ತು
ಕಠೋಪನಿಷತ್ತು
ಕೇನೋಪನಿಷತ್ತು
ಬೃಹದಾರಣ್ಯಕೋಪನಿಷತ್ತು
ಮುಂಡಕೋಪನಿಷತ್ತು
ಭಗವದ್ಗೀತೆ
ಸಿದ್ಧಾಂತ ಶಿಖಾಮಣಿ.
ಶ್ರೀಕರ ಭಾಷ್ಯ

---

# ಅಂಕಿತಗಳ ವಿವರ

| | |
|---|---|
| ಅಖಂಡೇಶ್ವರಾ .. | ಷಣ್ಮುಖಸ್ವಾಮಿ |
| ಅಜಗಣ್ಣ .. | ಮುಕ್ತಾಯಕ್ಕ |
| ಅಪ್ರಮಾಣ ಕೂಡಲ ಸಂಗಮದೇವಾ .. | ? |
| ಅಮರಗುಂಡದ ಮಲ್ಲಿಕಾರ್ಜುನಾ .. | ಪುರದ ನಾಗಣ್ಣ |
| * ಅಮರೇಶ್ವರ ಲಿಂಗ .. | ಆಯದಕ್ಕಿ ಮಾರಯ್ಯ |
| ಅಂಬಿಗರ ಚೌಡಯ್ಯ .. | ಚೌಡಯ್ಯ |
| ಆತುರ ವೈರಿ ಮಾರೇಶ್ವರಾ .. | ನಗಿ ಮಾರಿತಂದೆ |
| ಈಶಾನ್ಯಮೂರ್ತಿ ಮಲ್ಲಿಕಾರ್ಜುನ ಲಿಂಗ .. | ಶಿವಲೆಂಕ ಮಂಚಣ್ಣ |
| ಉಳಿಯುಮೇಶ್ವರಾ .. | ಚಿಕ್ಕಣ್ಣ |
| ಎನ್ನಯ್ಯ ಪ್ರಿಯ ಇಮ್ಮಡಿ ನಿಃಕಳಂಕ ಮಲ್ಲಿಕಾರ್ಜುನಾ | ಮಹಾದೇವಿ (ಮೋಳಿಗೆ ಮಾರಯ್ಯನ ಪತ್ನಿ) |
| ಕದಿರ ರೆಮ್ಮೆಯೊಡೆಯ ಗುಮ್ಮೇಶ್ವರಾ .. | ಕದಿರ ಕಾಯಕದ ರೆಮ್ಮವ್ವೆ |
| ಕಪಿಲ ಸಿದ್ಧ ಮಲ್ಲಿಕಾರ್ಜುನಾ .. | ಸಿದ್ಧರಾಮ |
| ಕಯ್ಯುಳಿಗತ್ತಿ ಅಡಿಗೂಂಟಿ ಕೆಡೆಯಾಗಬೇಡ | |
| ಅರಿ ನಿಜಾತ್ಮರಾಮ ರಾಮನಾ .. | ಮಾದಾರ ಚೆನ್ನಯ್ಯ |
| ಕಲಿದೇವರ ದೇವಾ .. | ಮಡಿವಳ ಮಾಚಿದೇವ |
| ಕಾಡಿನೊಳಗಾದ ಶಂಕರ ಪ್ರಿಯ ಚೆನ್ನಕದಂಬಲಿಂಗ | |
| ನಿರ್ಮಾಯ ಪ್ರಭುವೇ .. | ಕಾಡಸಿದ್ಧೇಶ್ವರ |
| ಕಾಲಾಂತಕ ಭೀಮೇಶ್ವರ ಲಿಂಗ .. | ಢಕ್ಕೆಯ ಬೊಮ್ಮಣ್ಣ |
| ಕಾಮಭೀಮ ಜೀವನದೊಡೆಯ .. | ಒಕ್ಕಲು ಮುದ್ದಯ್ಯ |
| ಕೂಡಲ ಚೆನ್ನ ಸಂಗಮದೇವ .. | ಚೆನ್ನಬಸವ |
| ಕೂಡಲ ಸಂಗಮ ದೇವ .. | ಬಸವಣ್ಣ |
| ಗುಹೇಶ್ವರಾ .. | ಅಲ್ಲಮಪ್ರಭು |
| ಚೆನ್ನ ಮಲ್ಲಿಕಾರ್ಜುನ .. | ಉಡುತಡಿಯ ಮಹದೇವಿಯಕ್ಕ |

---

* ಅಮುಳೇಶ್ವರ ಲಿಂಗ ಎಂದೂ ಇದೆ. ಶೂನ್ಯಸಂಪಾದನೆಯಲ್ಲಿ ಈ ಅಂಕಿತ ಆಯದಕ್ಕಿ ಮಾರಯ್ಯನದೆಂದು ತಿಳಿಸಿದೆ. ವಚನ ಶಾಸ್ತ್ರಸಾರದಲ್ಲಿ ಹೆಸರನ್ನು ತಿಳಿಸಿಲ್ಲ.

| | | |
|---|---|---|
| ಚೆನ್ನ ಬಸವಣ್ಣ ಪ್ರಿಯ ಕಮಳೇಶ್ವರ ಲಿಂಗ | .. | ಅಮ್ಮಿದೇವಯ್ಯ |
| * ಚೆನ್ನಯ್ಯ ಪ್ರಿಯ ದೂಳ | .. | ಮಾದಾರ ದೂಳಯ್ಯ |
| ಚಂದೇಶ್ವರ ಲಿಂಗ | .. | ದಸರಯ್ಯ |
| ಧರ್ಮೇಶ್ವರಾ | .. | ಹೆಂಡದ ಮಾರಯ್ಯ |
| ನಿಜಗುರು ಸ್ವತಂತ್ರ ಸಿದ್ಧ ಲಿಂಗೇಶ್ವರಾ | .. | (ಸ್ವತಂತ್ರ) ಸಿದ್ಧ ಲಿಂಗೇಶ್ವರ |
| ನಿಷ್ಕಳಂಕ ಮಲ್ಲಿಕಾರ್ಜುನ | .. | ಮೋಳಿಗೆಯ ಮಾರಯ್ಯ |
| ಬಿಡಾಡಿ | .. | ಬೊಂತಾದೇವಿ |
| ಮಹಾಲಿಂಗ ಗುರು ಶಿವಸಿದ್ಧೇಶ್ವರ ಪ್ರಭುವೇ | .. | ತೋಂಟದ ಸಿದ್ಧಲಿಂಗಯತಿ |
| ‡ ಮಾರಯ್ಯ ಪ್ರಿಯ ಅಮಳೇಶ್ವರ ಲಿಂಗ | .. | ಲಕ್ಕಮ್ಮ (ಆಯದಕ್ಕಿ ಮಾರಯ್ಯನ ಪತ್ನಿ) |
| ರಾಮನಾಥಾ | .. | ದೇವರ ದಾಸಿಮಯ್ಯ |
| ರೇಕಣ್ಣ ಪ್ರಿಯ ನಾಗಿನಾಥಾ | .. | ಬಹುರೂಪಿ ಚೌಡಯ್ಯ |
| ಶಂಭು ಜಕ್ಕೇಶ್ವರಾ | .. | ಸತ್ಯಕ್ಕ |
| ಸಕಳೇಶ್ವರ ದೇವ | .. | ಸಕಳೇಶ ಮಾದರಸ |
| ಸದಾಶಿವಮೂರ್ತಿಲಿಂಗ | .. | ಅರುವಿನ ಮಾರಿತಂದೆ |
| † ಸಂಗಯ್ಯ | .. | ನೀಲಲೋಚನೆ |
| ಸಿಮ್ಮಲಿಗೆಯ ಚೆನ್ನರಾಮ | .. | ಚಂದಿಮರಸು |
| ಸೊಡ್ಡಳಾ | .. | ಸೊಡ್ಡಳ ಬಾಚರಸ |
| ಸೌರಾಷ್ಟ್ರ ಸೋಮನಾಥಾ | .. | ಆದಯ್ಯ |

---

* ವಚನಶಾಸ್ತ್ರಸಾರದಲ್ಲಿ 'ಕಾಮಧೂಮ ಧೂಳೇಶ್ವರ ಲಿಂಗ' ಎಂದಿದೆ. ನಾವು ಉದಾಹರಿಸಿರುವ ವಚನದಲ್ಲಿ 'ಚೆನ್ನಯ್ಯ ಪ್ರಿಯ ದೂಳ' ಎಂದು ಅಂಕಿತವಿದೆ.

‡ ವಚನಶಾಸ್ತ್ರಸಾರದಲ್ಲಿ ಈ ಅಂಕಿತ ಆಯದಕ್ಕಿ ಮಾರಯ್ಯನದೆಂದು ತಿಳಿಸಿದೆ. ಆದರೆ ಶೂನ್ಯಸಂಪಾದನೆಯಲ್ಲಿ ಇದು ಆಯದಕ್ಕಿ ಮಾರಯ್ಯನ ಪತ್ನಿಯಾದ ಲಕ್ಕಮ್ಮನದೆಂದು ಹೇಳಿದೆ. ಶೂನ್ಯ ಸಂಪಾದನೆಯಲ್ಲಿರುವುದು ಸರಿಯೆಂದು ನಮಗೆ ತೋರುತ್ತದೆ.

† ಶೂನ್ಯಸಂಪಾದನೆಯಲ್ಲಿಯೂ ವಚನಶಾಸ್ತ್ರಸಾರದಲ್ಲಿಯೂ 'ಸಂಗಯ್ಯ' ಎಂಬ ಅಂಕಿತ ನೀಲಲೋಚನೆಯದೆಂದು ತಿಳಿಸಿದೆ. ವಚನಶಾಸ್ತ್ರಸಾರದಲ್ಲಿ 'ಬಸವಪ್ರಿಯ ಕೂಡಲ ಸಂಗಮದೇವಾ' ಎಂಬ ಅಂಕಿತ ನೀಲಾಂಬಿಕೆಯದೆಂದು ಬೇರೆ ಹೇಳಿದೆ. ನೀಲಾಂಬಿಕೆ, ನೀಲಲೋಚನೆ ಇಬ್ಬರೂ ಒಂದೇ ವ್ಯಕ್ತಿಯೆಂದೂ ಆ ವ್ಯಕ್ತಿ ಬಸವಣ್ಣನವರ ಎರಡನೆಯ ಹೆಂಡತಿಯೆಂದೂ ನಾವು ಅಭಿಪ್ರಾಯಪಡುತ್ತೇವೆ. 'ಬಸವಪ್ರಿಯ ಕೂಡಲ ಸಂಗಮ ದೇವ' ಎಂಬುದು ಬೇರೆಯವರ ಅಂಕಿತವಾಗಿರಬೇಕು.

# ವಿಷಯ ಸೂಚಿಕೆ

# ಒಪ್ಪೋಲೆ

| ಪುಟ | ಪಂಕ್ತಿ | ತಪ್ಪು | ಒಪ್ಪು |
|---|---|---|---|
| ೨೦ | ೯ | ಪ್ರಾಣ | ಘ್ರಾಣ |
| ,, | ೯ | ಫ್ರಾಣಿಸ | ಘ್ರಾಣಿಸ |
| ೨೬ | ೨೩ | ವಿಶ್ವವವ | ವಿಶ್ವವ |
| ೨೭ | ೬ | ಬೆರೆಗಾದೆನ್ನೈ | ಬೆರಗಾದೆನ್ನೈ |
| ,, | ೧೧ | ಮರೀಚನಂತೆ | ಮರೀಚಿಯಂತೆ |
| ೩೪ | ೧೪ | ದಾಸಾನುದಾಸು | ದಾಸಾನುದಾಸ |
| ೪೪ | ೧೯ | ಊರಬಿಟ್ಟು | ಊರಹೊದ್ದಿ |
| ೫೦ | ೨ | ಮುಸದಲಗಾಗಿ | ಮುಸೆದಲಗಾಗಿ |
| ೬೬ | ೮ | ಪಾರಮಾರ್ಥ | ಪರಮಾರ್ಥ |
| ೭೯ | ೧೨ | ಫನ | ಘನ |
| ೮೦ | ೨೬ | ಜಂತ್ರವ ಅಡಿಗಲ್ಲನೊಡ್ಡಿ | ಜಂತ್ರವ ಹಣ್ಣೆ ಅಡಿಗಲ್ಲನೊಡ್ಡಿ |
| ,, | ೨೭ | ಹಣ್ಣೆ, ಬಿದ್ದಂತೆ | ಬಿದ್ದಂತೆ |
| ೧೦೬ | ೨೦ | ಅಲಿಗೊಳಲುಬೇಡ | ಆಳಿಗೊಳಲುಬೇಡ |
| ೨೨೯ | ೧೭ | ಅಂಜನವ ನೆಚ್ಚು ಕೊಂಬುದು | ಅಂಜನವನೆಚ್ಚು ಕೊಂಬುದು |
| ೨೪೪ | ೧೬ | ಜೀವಿಸುವೆನಯಾ ? | ಜೀವಿಸುವೆನಯ್ಯಾ ? |
| ೨೫೦ | ೧೦ | ಮುಳಗು | ಮುಳುಗು |
| ೨೫೧ | ೧೨ | ಬ್ರಹ್ಮಾದಿಗಳವಲ್ಲ | ಬ್ರಹ್ಮಾದಿಗಳಿಗಳವಲ್ಲ |
| ೨೫೩ | ೧೯ | ಸಾಗರವಪುವಯ್ಯಾ | ಸಾಗರವಪ್ಪುವಯ್ಯಾ |
| ೨೭೨ | ೯ | ನೊಲ್ಲದಿಪ್ಪುದೇನೇಮ | ನೊಲ್ಲದಿಪ್ಪುದೇ ನೇಮ |

# ವಚನಧರ್ಮಸಾರ

---

## ೧ನೆಯ ಪ್ರಕರಣ

## ವಚನಧರ್ಮದ ಉದಯ

ಕನ್ನಡ ಸಾಹಿತ್ಯ ಪ್ರಪಂಚದಲ್ಲಿ ವಿಹರಿಸುತ್ತ ಬರುವಾಗ ಒಂದು ಕಡೆ ತಪೋವನವನ್ನು ಪ್ರವೇಶಿಸಿದಂತೆಯೂ, ಸಿದ್ಧ ಸಾಧಕ ಋಷಿಗಳ ಸಂದರ್ಶನ ಪಡೆದು, ಅವರ ಉದಾತ್ತಜೀವನ ಧರ್ಮಬೋಧೆಗಳಿಂದ ನಮ್ಮ ಅಂತರಂಗ ಪರಿಶುದ್ಧವಾದಂತೆಯೂ, ಆತ್ಮನ ಬಂಧನಗಳು ಕಳಚಿಬಿದ್ದು ನಾವು ಮುಕ್ತ ರಾದಂತೆಯೂ, ಒಂದು ದಿವ್ಯವಾದ ಆನಂದಾನುಭವ ಉಂಟಾಗುತ್ತದೆ. ಇಲ್ಲಿ ಪಟ್ಟಣವಾಸದ ಗೊಂದಲವಿಲ್ಲ, ರಾಜಾಸ್ಥಾನದ ವೈಭವ ದೃಶ್ಯಗಳಿಲ್ಲ. ತಪೋವನದ ಸಹಜ ಶಾಂತಿ, ಪರಸ್ಪರ ಪ್ರೇಮ, ಸಮತಾಭಾವ, ಸ್ವಾತಂತ್ರ್ಯ ಇವು ಮೂರ್ತಿಮತ್ತಾಗಿ ಕಾಣುತ್ತವೆ. ಆರಣ್ಯಕಗಳಲ್ಲಿ ಉಪನಿಷತ್ತಿನ ದರ್ಶನ ವನ್ನು ಕಂಡಂತೆ, ಇಲ್ಲಿ ವಚನಧರ್ಮದ ದರ್ಶನವನ್ನು ಕಾಣುತ್ತೇವೆ. ಸತ್ಯದ ಹಂಬಲು ಸಾಹಿತ್ಯವಾಗಿ, ಸತ್ಯಾನ್ವೇಷಣ ಸಿದ್ಧಾಂತವಾಗಿ, ಸತ್ಯ ಸಾಕ್ಷಾತ್ಕಾರವೇ ದರ್ಶನವಾಗಿ ನಮಗೆ ಆನಂದವನ್ನುಂಟುಮಾಡುತ್ತವೆ.

ವಚನಸಾಹಿತ್ಯವೇ ತಪೋವನದ ಈ ಉಪನಿಷತ್ಸಾಹಿತ್ಯ. ವಚನ ಕಾರರೇ ಉಪನಿಷತ್ಕರ್ತೃಗಳಾದ ಮಹರ್ಷಿಗಳು. ಇಲ್ಲಿ “ಗುಹ್ಯಾತ್ ಗುಹ್ಯ ತರ”ವಾದ ರಹಸ್ಯಗಳೂ ಮುಚ್ಚುಮರೆಗಳೂ ಇಲ್ಲ; ವರ್ಣವ್ಯತ್ಯಾಸಗಳಿಂದಾ ಗಲಿ ಲಿಂಗಭೇದದಿಂದಾಗಲಿ ಅಧಿಕಾರಿ ಅನಧಿಕಾರಿ ಎಂಬ ತಾರತಮ್ಯವಿಲ್ಲ; ವೇದಗಳು ಹೆಚ್ಚೋ ಆಗಮಗಳು ಹೆಚ್ಚೋ ಎಂಬ ತರ್ಕ ವಿತರ್ಕಗಳೂ ಇಲ್ಲ.

೧. “ವೇದ ವೇದಾಂತಗಳಿಂದ ಸಿದ್ಧ ಸಿದ್ಧಾಂತಗಳಿಂದ ಎಲ್ಲಿ ನೋಡಿದರೂ ಒಂದೇ ಭೇದ. ಅರಿದಲ್ಲಿ ಮಲಕ್ಕೆ ಹೊರಗು, ಮರೆದಲ್ಲಿ ಮಲಕ್ಕೆ ಒಳಗು, ಅರಿವು ಮರವು ನಿಂದಲ್ಲಿ ಸದಾಶಿವ ಮೂರ್ತಿಯ ಲಿಂಗದ ಬೆಳಗು”

---

೧. ವ. ಶಾ. ಸಾ. ಭಾಗ ೧, ಪೂ. ಪುಟ ೫೧.

ಹೀಗೆ ಎಲ್ಲರ ಮುಂದಿರುವ ಪ್ರಶ್ನೆಯೂ ಒಂದೇ, ಅವಕ್ಕೆ ಉತ್ತರವೂ ಒಂದೇ, ಎಂಬ ಘೋಷಣೆ ಇಲ್ಲಿ ಕೇಳಬರುತ್ತದೆ.

ಆತ್ಮನಲ್ಲಿ ಗಂಡು ಹೆಣ್ಣುಗಳೆಂಬ ಭೇದ ಹೇಗಿಲ್ಲವೋ ಹಾಗೆಯೆ ಆತ್ಮಜ್ಞಾನಕ್ಕೂ ಈ ಗಂಡು ಹೆಣ್ಣುಗಳ ಭೇದವಿಲ್ಲ. ಸ್ತ್ರೀ ಶೂದ್ರಾದಿಗಳು ಪ್ರಪತ್ತಿಮಾರ್ಗದಿಂದ ಮೋಕ್ಷಪಡೆಯಬಹುದೆಂದೂ, ಜ್ಞಾನಮಾರ್ಗಕ್ಕೆ ಅವರಿಗೆ ಅಧಿಕಾರವಿಲ್ಲೆಂದೂ, ಹೇಳುವ ಸಂಕುಚಿತ ಮನೋಭಾವನೆ ಇಲ್ಲಿಲ್ಲ.

೨. "ಮೊಲೆ ಮುಡಿ ಬಂದರೆ ಹೆಣ್ಣೆಂಬರು; ಗಡ್ಡಮೀಸೆ ಬಂದರೆ ಗಂಡೆಂಬರು.
ನಡುವೆ ಸುಳಿವಾತ್ಮನು ಗಂಡೂ ಅಲ್ಲ, ಹೆಣ್ಣೂ ಅಲ್ಲ, ಕಾಣಾ ರಾಮನಾಥಾ"

ಆದುದರಿಂದ ವೇದಗಳ ಕಾಲದ ಶಾಂಡಿಲಿ, ಗಾರ್ಗಿ ಮೊದಲಾದವರಂತೆ, ಮುಕ್ತಾಯಕ್ಕ, ಮಹದೇವಿಯಕ್ಕ ಮೊದಲಾಗಿ ಹೆಂಗಸರು ಆತ್ಮಜಿಜ್ಞಾಸ ಮಾಡುವವರಾಗಿ ವಚನಸಾಹಿತ್ಯದಲ್ಲಿ ದೊರೆಯುತ್ತಾರೆ.

ಜ್ಞಾನಮಾರ್ಗಕ್ಕೆ ತಳಹದಿಯನ್ನು ಹಾಕಿದ ಉಪನಿಷತ್ಕರ್ತೃಗಳಿಗೆ ಕರ್ಮಕಾಂಡ ಹಿನ್ನೆಲೆಯಾಗಿತ್ತು. ಆದುದರಿಂದ ಹೊಸಬೆಳಕನ್ನು ಕಂಡವರಲ್ಲಿ, ಕಂಡು ಸಾರಿದವರಲ್ಲಿ, ಆ ಮಹರ್ಷಿಗಳೇ ಮೊದಲಿಗರು. ವಚನಕಾರರು ತಲೆಯೆತ್ತುವ ಕಾಲಕ್ಕೆ ಉಪನಿಷತ್ತುಗಳು ಹಿನ್ನೆಲೆಯಾಗಿದ್ದುವು. ಆದುದರಿಂದ ಪರವಸ್ತು, ಜೀವ, ಸೃಷ್ಟಿ, ಮೊದಲಾದ ವಿಚಾರಗಳೆಲ್ಲ ಚರ್ಚೆಯಾಗಿ ಹೊಸಬೆಳಕು ಹರಡಿ, ಎಲ್ಲವೂ ಕಾಣುವಂತಿದ್ದುವು. ಇವುಗಳನ್ನು ಕೆಲವರು ಬಳಸಿಕೊಂಡಿರಬಹುದು. ಆದರೆ ವಚನಕಾರರು ಸ್ವತಂತ್ರವಾಗಿಯೂ ಸತ್ಯಶೋಧನೆಗೆ ಪ್ರಯತ್ನಪಟ್ಟವರಾದ್ದರಿಂದ, ಅವರ ಅನುಭವ ವಚನಗಳು ಉಪನಿಷತ್ತಿನ ವಚನಗಳನ್ನು ಹೋಲುತ್ತವೆ. ಈ ವಚನಕಾರರಲ್ಲಿ ಎಲ್ಲರೂ ಒಂದೇ ಪಂಥವನ್ನು ಹಿಡಿದವರಲ್ಲ, ಒಂದೇ ಮಟ್ಟಕ್ಕೆ ಏರಿದವರೂ ಅಲ್ಲ. ಸಿದ್ಧಾಂತರಚನೆಮಾಡಬೇಕೆಂಬ ಕಲ್ಪನೆಯಾದರೂ ಮೊದಲಿನ ವಚನಕಾರರಲ್ಲಿರಲಿಲ್ಲ. ಆದುದರಿಂದ ಉಪನಿಷತ್ತುಗಳ ಆಧಾರದಿಂದ ಹೇಗೆ ವಿವಿಧ ಸಿದ್ಧಾಂತಗಳನ್ನು ಕಲ್ಪಿಸಿಕೊಳ್ಳಬಹುದಾಗಿದೆಯೋ ಹಾಗೆಯೇ ಮೊದಲಿನ

---

೨. ವ. ಶಾ. ಸಾ. ಭಾಗ ೧, ಪೂ. ಪುಟ ೨೨.

ವಚನಸಾಹಿತ್ಯದಿಂದಲೂ ವಿವಿಧ ಸಿದ್ಧಾಂತಗಳನ್ನು ಕಲ್ಪಿಸಿಕೊಳ್ಳ ಬಹುದಾಗಿದೆ. ವಚನಕಾರರು ಹೀಗೆ ಬೇರೆ ಬೇರೆ ಮಟ್ಟಗಳಲ್ಲಿರುವುದರಿಂದ ಈ ಸಾಹಿತ್ಯದಲ್ಲಿ ಜೀವಕಳೆಯಿದೆ, ವಿವಿಧ ಸಿದ್ಧಾಂತಗಳಿಗೆ ಎಡೆಕೊಟ್ಟಿರು ವುದರಿಂದ ಈ ಸಾಹಿತ್ಯ ಅಮೂಲ್ಯವಾಗಿದೆ.

ಕರ್ಮಕಾಂಡದಲ್ಲಿ ತಿರುಳನ್ನು ಕಾಣದೆ ಜ್ಞಾನಮಾರ್ಗಕ್ಕೆ ಆ ಮಹರ್ಷಿ ಗಳು ಪ್ರವೇಶಿಸಿದರು. ಹಿಂದಿನ ಶೈವಪಂಥಗಳಲ್ಲಿ ತಿರುಳನ್ನು ಕಾಣದೆ ಷಟ್ಸ್ಥಲಮಾರ್ಗಕ್ಕೆ ಈ ವಚನಕಾರರು ಪ್ರವೇಶಿಸಿದರು.

೩. "ಶೈವ ಸ್ಸೆವೆರಗಾದ, ಪಾಶುಪತಿ ಪಥವನರಿಯ, ಕಾಳಾಮುಖಿ ಕಂಗೆಟ್ಟೆ, ಮಹಾ ವ್ರತಿ ಮದವೇರಿದ, ಸಂನ್ಯಾಸಿ ಪಾಷಂಡಿಯಾದ, ಕಾಲಿ ಮರುಳಾಗಿ ಹೋದ, ಈ ಆರು ಭಕ್ತಿಸ್ಥಲಕ್ಕೆ ಸಲ್ಲವು ಕೇಳಿರಣ್ಣಾ"

ಎಂದು ಚೆನ್ನಬಸವಣ್ಣ ಹೇಳಿರುವುದರಿಂದ ಈ ಶೈವಪಂಥಗಳಾವುವು ಎಂಬುದನ್ನು ತಿಳಿಯಬಹುದಾಗಿದೆ. ಇವುಗಳಲ್ಲಿ 'ಶೈವ' ಎನ್ನುವುದು ಸದ್ಯೋಜ್ಯೋತಿ, ಭೋಜರಾಜ, ಮೊದಲಾದವರಿಂದಲೊ ಅವರ ಹಿಂದಿನ ವರಿಂದಲೊ ರೂಢಿಗೆ ಬಂದ ಶೈವಸಿದ್ಧಾಂತವಾಗಿರಬಹುದು; ಅಥವಾ ಕಾಶ್ಮೀರ ಶೈವಸಿದ್ಧಾಂತವಾಗಿರಬಹುದು; ಒಂದು ವೇಳೆ ತಮಿಳುನಾಡಿನಲ್ಲಿ ಪ್ರಚಾರವಾಗಿದ್ದ ಶೈವವಾಗಿದ್ದಿದ್ದರೂ ಇರಬಹುದು. ಆದರೆ ಈ ಪಂಥಗಳು ತತ್ತ್ವತಃ ಆಗಮಗಳಿಂದ ಉಗಮವಾದುವು. ಪಾಶುಪತ ಮತವಾದರೋ ಬಹಳ ಪ್ರಾಚೀನವಾದುದೂ ಭರತಖಂಡದಲ್ಲಿ ಹೆಚ್ಚಾಗಿ ವ್ಯಾಪಿಸಿದ್ದುದೂ ಆಗಿತ್ತು. ವೀರಶೈವದ ಕೆಲವು ಮುಖ್ಯ ಲಕ್ಷಣಗಳನ್ನು ಆ ಹಿಂದಿನ ಪಾಶು ಪತದಲ್ಲಿ ಕಾಣಬಹುದಾಗಿದೆ. ಮಹಾಭಾರತದ ಕಾಲದಿಂದ ಹಿಡಿದು ಅವರ ನಿಸ್ಸಂದಿಗ್ಧವಾದ ಕುರುಹುಗಳನ್ನು ವಚನಕಾರರ ಕಾಲದವರೆಗೂ, ಇಲ್ಲಿಯ ವರೆಗೂ, ಕಾಣಬಹುದಾಗಿದೆ. ಗಣಭಾಷ್ಯರತ್ನಮಾಲಾದಿ ಗ್ರಂಥಗಳಲ್ಲಿ ವಚನಗಳಿಗೆ ಪುಷ್ಟಿಕೊಡುವುದಕ್ಕಾಗಿಯೋ ಅನ್ಯಮತಖಂಡನೆಗಾಗಿಯೋ ಉದ್ಧರಿಸಿರುವ ವಾಯವೀಯ ಸಂಹಿತಾದಿಗಳ ಶ್ಲೋಕಗಳು ಪಾಶುಪತ

೩. ಚ. ಬ. ವ. ಪುಟ ೩೩. (ಪಾಠ ವ್ಯತ್ಯಾಸವಿದೆ)

ಪಕ್ಷಪಾತಿಗಳಾಗಿಯೇ ಇವೆ. ವೀರಶೈವದ ಪ್ರಾಚೀನತೆಯನ್ನು ಸ್ಥಾಪಿಸ ಹೋಗುವವರು ಈ ಪಾಶುಪತವನ್ನೇ ಬಹುವಾಗಿ ಆಶ್ರಯಿಸಬೇಕಾಗಿದೆ. ಹೀಗಿದ್ದರೂ "ಪಾಶುಪತಿ ಪಥವನರಿಯ" ಎಂದು ಚೆನ್ನಬಸವಣ್ಣನು ಅದನ್ನು ತಿರಸ್ಕರಿಸಿದ್ದಾನೆ.

ಈ ಶೈವಪಂಥಗಳನ್ನು ಹೀಗೆ ತಿರಸ್ಕರಿಸುವುದಕ್ಕೆ ಅವುಗಳಲ್ಲಿ ಬಂದು ಸೇರಿಕೊಂಡ ದುರಾಚಾರಗಳು ಮುಖ್ಯಕಾರಣವಾಗಿದ್ದಿರಬೇಕು. ಶಿವನ ಘೋರರೂಪದ ಉಪಾಸನೆಯಲ್ಲಿ ಘೋರವಿಧಿಗಳೇನಕ ಕಾಪಾಲಾದಿ ಮತಗಳಲ್ಲಿ ಕಂಡು ಬರುತ್ತವೆ. ಪಾಶುಪತದಲ್ಲಿ ವಿಧಿಸಿರುವ ಆಚರಣೆಗಳು ಕೂಡ ಅತಿಮಾರ್ಗಿಕ ಲಕ್ಷಣಗಳನ್ನೇ ತೋರಿಸುತ್ತವೆ. ತತ್ತ್ವಜ್ಞಾನವೂ ತತ್ತ್ವಸಿದ್ಧಿಯೂ ಹಿಂದಕ್ಕೆ ಬಿದ್ದು ಆಚರಣೆಗಳಿಂದ ದುರಾಚಾರಗಳು ಪ್ರಬಲಿಸುತ್ತಿದ್ದಾಗ ಆ ಮತಗಳನ್ನು ಖಂಡಿಸಬೇಕಾದುದು ಕರ್ತವ್ಯ; ವೈದಿಕ ಮತದ ಪ್ರಾಬಲ್ಯದಿಂದ ವರ್ಣವ್ಯತ್ಯಾಸಗಳು ಪಾಶುಪತದಲ್ಲಿ ಸೇರಿಕೊಂಡು ಹಿಂದಿನ ಆಶಯಗಳಿಗೆ ಭಂಗವನ್ನು ತರುತ್ತಿದ್ದಾಗ, ಆ ಪ್ರಯತ್ನಗಳನ್ನು ಮುರಿದು ಪರಿಶುದ್ಧಗೊಳಿಸುವುದು ಧರ್ಮ; ಪರಮಾತ್ಮನ ಸೌಮ್ಯರೂಪದ ಉಪಾಸನೆಯನ್ನು ಬಿಟ್ಟು, ಆತನ ಕರುಣೆ ಅನುಗ್ರಹಗಳನ್ನು ಮರೆತು, ಅಡ್ಡದಾರಿಯಲ್ಲಿ ಕೊಂಡೊಯ್ಯುವ ಪಂಥಗಳನ್ನು ಅವು ಯಾವ ಹೆಸರಿನವಾಗಿದ್ದರೂ ಅವುಗಳನ್ನು ಖಂಡಿಸುವುದು ಮಹದುಪಕಾರ. ಆದುದರಿಂದ ವಚನಕಾರರು ಈ ಪಂಥಗಳ ಮೇಲೆ ದಾಳಿಯೆತ್ತಿ ಅವುಗಳನ್ನು ನಿರ್ಮೂಲಗೊಳಿಸಿದರು. ಆ ಮತಗಳು ಆಸ್ತಿಕ ಮತಗಳೇ ಆಗಿದ್ದುದರಿಂದ ವಾದಮಾಡಿ ದೇವರಿದ್ದಾನೆಂದು ಹೊಸದಾಗಿ ಸ್ಥಾಪಿಸಬೇಕಾಗಿರಲಿಲ್ಲ; ಪರವಸ್ತುವಿನ ಸ್ವರೂಪವನ್ನು ತಿಳಿಸಬೇಕಾಗಿತ್ತು; ಬೀಭತ್ಸ ಕರ್ಮಗಳಿಂದ ಪರಮಾತ್ಮನು ಒಲಿಯುವುದಿಲ್ಲವೆಂದು ಹೇಳಬೇಕಾಗಿತ್ತು; ಆತನ ಅನುಗ್ರಹಸಂಪಾದನೆಗೆ ನಿಷ್ಕಲವಾದ ನಿಷ್ಕಲ್ಮಷವಾದ ಭಕ್ತಿ ಅತ್ಯಾವಶ್ಯಕವೆಂದು ತೋರಿಸಬೇಕಾಗಿತ್ತು; ಆತ್ಮಜ್ಞಾನದಿಂದ ಮುಕ್ತಿಯಾಗಬೇಕೆಂದು ಮನದಟ್ಟು ಮಾಡಿಸಬೇಕಾಗಿತ್ತು. ಆದುದರಿಂದ ಮೊದಲಿನ ವಚನಕಾರರು ಹೆಚ್ಚಾಗಿ ಸಿದ್ಧಾಂತದ ಗೋಜಿಗೆ ಹೋಗಲಿಲ್ಲ. ಸತ್ಕ್ರಿಯಾಚರಣೆ, ಅಂತರಂಗ ಶುದ್ಧಿ, ಶುದ್ಧ

ಚಾರಿತ್ರ್ಯ, ಇವುಗಳನ್ನೇ ಒತ್ತಿ ಒತ್ತಿ ಹೇಳಿ ಆಚಾರವೇ ಲಿಂಗವೆಂದು ತಳಹದಿಯನ್ನು ಭದ್ರಪಡಿಸಿದರು; ಸ್ವಂತ ಆಚರಣೆಯಿಂದಲೂ ಪುರಾತನರ ಉದಾಹರಣೆಗಳಿಂದಲೂ ಭಕ್ತಿಯ ಹುಚ್ಚು ಹಿಡಿಸಿದರು, ಜ್ಞಾನಜ್ಯೋತಿಯನ್ನು ಬೆಳಗಿದರು.

ಹೀಗೆ ಕಳೆಗಳನ್ನು ಕಿತ್ತು, ಕೃಷಿಮಾಡಿ ಪಾಶುಪತಕ್ಷೇತ್ರದಲ್ಲಿ ವಚನಧರ್ಮದ ಸಸಿಗಳನ್ನು ಕಾಣಿಸಿದರು. ವಚನಧರ್ಮದ ಉದಯ ಈ ಸಸಿಗಳ ಉದಯದಂತೆ. ವಚನಧರ್ಮ ಹೊಸತೆಂದರೆ ಹೊಸತು, ಹಳತೆಂದರೆ ಹಳತು. ಹೀಗೆ ಕಳೆಗಳನ್ನು ಕಿತ್ತದ್ದು ಯಾವಾಗ? ಕೃಷಿಮಾಡಿ ತೋರಿದ್ದು ಯಾವಾಗ? ಎಂಬ ಪ್ರಶ್ನೆಗಳಿಗೆ ಉತ್ತರ ಹೆಚ್ಚುಕಡಮೆ ಸ್ಪಷ್ಟವಾಗಿದೆ. ವಚನಕಾರರ ಕಾಲದಲ್ಲಿ ಇವು ನಡೆದವು. ಮತತತ್ತ್ವಗಳು, ಸಿದ್ಧಾಂತದ ಮೂಲಗಳು ಹಿಮಾಚಲಕ್ಕೂ ಹಿಂದಿನವಾಗಿರಬಹುದು. ಚೆನ್ನಬಸವಣ್ಣನು ಕರಣ ಹಸುಗೆಯಲ್ಲಿ ಹೇಳುವ

೪. "ಮೊದಲು ನಿಷ್ಕಲಬ್ರಹ್ಮವು. ಆ ನಿಷ್ಕಲ ಬ್ರಹ್ಮದಿಂದ ಜ್ಞಾನ ಚಿತ್ತು. ಆ ಚಿತ್ತಿನಿಂದ ಚಿನ್ನಾದ ಚಿದ್ಬಿಂದು ಚಿತ್ಕಳೆಗಳು ಹುಟ್ಟಿದುವು........ಆ ಸದಾಶಿವನ ಸದ್ಯೋಜಾತಾದೀಶಾನಾಂತ್ಯಮಾದ್ಯೈದು ವದನಂಗಳಿಂದ ಹುಟ್ಟಿದ ಪೃಥಿವ್ಯಾದಿ ಐದು ತತ್ತ್ವಂಗಳೇಕೀಕರಿಸಿ ಚತುರ್ದಶ ಭುವನ ಚರಾಚರ ಪ್ರಾಣಂಗಳ ಸಮೂಹವನ್ನುಳ್ಳ ವಿಶ್ವೋತ್ಪತ್ತಿಯಾದ ಕಾರಣ ಜಗದುತ್ಪತ್ತಿಗೆ ಮೂಲಕಾರಣವಾಗಿರುವಂಥಾದ್ದೇ ಸದಾಶಿವಮೂರ್ತಿಯು"

ಎಂಬ ಸೃಷ್ಟಿಕ್ರಮ ಅಸತ್ತಿನಿಂದ ಸತ್ತಿನ ಉತ್ಪತ್ತಿ ಎಂದು ಋಗ್ವೇದದಲ್ಲಿರುವುದನ್ನು ಹೋಲಬಹುದು. ಪಂಚಭೂತಗಳ ಉತ್ಪತ್ತಿ ಮೊದಲೆಂದೂ ಆ ಮೇಲೆ ಅಂತಃಕರಣಾದಿಗಳ ಉತ್ಪತ್ತಿಯೆಂದೂ ಚೆನ್ನಬಸವನು ಹೇಳಿದಂತೆಯೇ ಮಹಾಭಾರತದಲ್ಲಿ ನಿರೂಪಿತವಾಗಿರಬಹುದು. ಆದುದರಿಂದ ಈ ತತ್ತ್ವಗಳ ಪ್ರಾಚೀನತೆಯನ್ನು ನಾವು ಚರ್ಚಿಸಹೋಗುವುದಿಲ್ಲ. ನಮ್ಮ ಸಾಹಿತ್ಯದಲ್ಲಿ ಕಂಡು ಬಂದ, ಮತ್ತೆ ಯಾವ ಸಾಹಿತ್ಯದಲ್ಲಿಯೂ ಕಾಣದ, ವಚನಧರ್ಮೋದಯವನ್ನು ಮಾತ್ರ ಇಲ್ಲಿ ಪ್ರಸ್ತಾಪಿಸುತ್ತೇವೆ.

ಈ ಸಂದರ್ಭದಲ್ಲಿ ಹಲವರ ಹೆಸರುಗಳು ನಮ್ಮ ಜ್ಞಾಪಕಕ್ಕೆ ಬರುತ್ತವೆ. ಪಂಚಾಚಾರ್ಯರು ಯುಗಯುಗದಲ್ಲಿಯೂ ಅವತರಿಸಿ ವೀರಶೈವಧರ್ಮವನ್ನು ಉದ್ಧಾರಮಾಡುವರು ಎಂಬ ನಂಬಿಕೆ ವೀರಶೈವರಲ್ಲಿದೆ. ಹಿಂದಿನ ಮೂರು ಯುಗಗಳ ಮಾತನ್ನು ಈಗ ನಾವು ಆಡುವುದಿಲ್ಲ. ಈ ಯುಗದಲ್ಲಿ ರೇವಣಸಿದ್ಧರು ಕೊಲ್ಲಿಪಾಕಿಯಲ್ಲಿಯೂ, ಮರುಳಸಿದ್ಧರು ವಟಕ್ಷೇತ್ರದಲ್ಲಿಯೂ, ಪಂಡಿತಾರಾಧ್ಯರು ಸುಧಾಕುಂಡದಲ್ಲಿಯೂ, ಏಕೋರಾಮರು ದ್ರಾಕ್ಷಾರಾಮದಲ್ಲಿಯೂ, ವಿಶ್ವಾರಾಧ್ಯರು ವಾರಾಣಸಿಯಲ್ಲಿಯೂ ಸ್ಥಾವರ ಲಿಂಗಗಳಿಂದ ಉದ್ಭವಿಸಿ ಕ್ರಮವಾಗಿ ರಂಭಾಪುರಿ, ಉಜ್ಜಯಿನಿ, ಶ್ರೀಗಿರಿ, ಹಿಮವತ್‌ಕೇದಾರ ಮತ್ತು ಕಾಶಿಗಳಲ್ಲಿ ಮಠಗಳನ್ನು ಸ್ಥಾಪಿಸಿರುವರೆಂದು ತಿಳಿಯುತ್ತದೆ. ಇವರ ಕಾಲಗಳ ವಿಚಾರದಲ್ಲಿ ನಾವು ಏನನ್ನೂ ನಿಷ್ಕೃಷ್ಟವಾಗಿ ಹೇಳುವ ಹಾಗಿಲ್ಲ. ವಚನಧರ್ಮದ ಉದಯಕ್ಕೆ ಇವರುಗಳಿಂದ ಎಷ್ಟರಮಟ್ಟಿಗೆ ಸಹಾಯವಾಗಿದೆ ಎಂಬುದನ್ನೂ ನಮಗೆ ಉಪಲಬ್ಧವಾಗಿರುವ ವಚನಸಾಹಿತ್ಯದಿಂದ ನಿಷ್ಕರ್ಷಿಸುವ ಹಾಗಿಲ್ಲ. ಶೈವಸಿದ್ಧಾಂತಕಾರರಲ್ಲಿ ಈಶಾನಶಿವ, ಅಘೋರಶಿವ, ತ್ರಿಲೋಚನಶಿವಾದಿ ಶೈವಾಚಾರ್ಯರು ನಮಗೆ ಗೋಚರಿಸುತ್ತಾರೆ. ಆದರೆ ಆ ಶೈವಸಿದ್ಧಾಂತದಲ್ಲಿ ಷಟ್ಸ್ಥಲ, ಏಕೋತ್ತರಶತಸ್ಥಲಗಳ ಪ್ರಸ್ತಾಪವಿಲ್ಲ. ಸ್ವಪ್ರಭಾನಂದ ಶಿವಾಚಾರ್ಯಪ್ರಣೀತ ಶಿವಾದ್ವೈತಮಂಜರೀ, ಶಿವಯೋಗಿ ಶಿವಾಚಾರ್ಯ ಪ್ರಣೀತ ಸಿದ್ಧಾಂತಶಿಖಾಮಣಿ ಎಂಬ ಗ್ರಂಥಗಳಲ್ಲಿ ಕ್ರಮವಾಗಿ ಷಟ್ಸ್ಥಲ, ಏಕೋತ್ತರಶತಸ್ಥಲಗಳ ವಿವರಣೆಗಳಿವೆ. ರೇಣುಕಾಚಾರ್ಯರು (ರೇವಣಸಿದ್ಧರು) ಅಗಸ್ತ್ಯರಿಗೆ ಉಪದೇಶಿಸಿದ ಏಕೋತ್ತರಶತಸ್ಥಲವನ್ನೇ ತಾನು ಸಂಗ್ರಹಿಸಿರುವುದಾಗಿ ಶಿವಾಚಾರ್ಯನು ಹೇಳುವುದರಿಂದ, ಶೈವಸಿದ್ಧಾಂತದ ಒಂದು ಶಾಖೆ ಷಟ್ಸ್ಥಲ ಏಕೋತ್ತರಶತಸ್ಥಲಗಳನ್ನು ಪ್ರತಿಪಾದಿಸುವುದಾಗಿ ಮತ್ತೊಂದು ಪಂಗಡದ ಶೈವಾಚಾರ್ಯರಿಂದ ಪ್ರಸಿದ್ಧಿಗೆ ಬಂದಿರಬೇಕು. ಪಂಚಾಚಾರ್ಯರು ಕನ್ನಡನಾಡಿನವರೇ? ಕನ್ನಡಿಗರೇ? ಕನ್ನಡದಲ್ಲಿ ವಚನಗಳನ್ನು ಬರೆದಿದ್ದಾರೆಯೆ? ಎಂಬ ಪ್ರಶ್ನೆಗಳಿಗೆ ಉತ್ತರವನ್ನು ಖಚಿತವಾಗಿ ಹೇಳಲಾರೆವು. ವಚನಕಾರರಂತೆ ಅವರು ವಿಚಾರವಾದಿಗಳಾಗಿದ್ದರೆಂದು ಹೇಳಲು ಸಾಧ್ಯವಿಲ್ಲ. ವಚನಕಾರರಂತೆ ಅವರು ಜನಜಂಗುಳಿಯೊಡನೆ

ಸೇರಿ ನೀತಿಯನ್ನು ಹೇಳಿ, ತತ್ತ್ವವನ್ನು ತಿಳಿಸಿ, ಡೊಂಕುಗಳನ್ನು ತಿದ್ದಿ, ದುರಾಚಾರಗಳನ್ನು ಖಂಡಿಸಿ ಮನುಷ್ಯರೊಡನೆ ಮನುಷ್ಯರಾಗಿ ವ್ಯವಹರಿಸಿದ ರೆಂದು ಹೇಳಲೂ ಸಾಧ್ಯವಿಲ್ಲ. ಅವರು ಏನಿದ್ದರೂ ಸಂಪ್ರದಾಯ ಶರಣರು, ಕೇವಲ ಅಧ್ಯಾತ್ಮ ಪ್ರಪಂಚದವರು, ಸಂಸ್ಕೃತಾಭಿಮಾನಿಗಳು, ಹಲವು ಭಾಷ್ಯಗಳನ್ನು ಬರೆದು ಸಿದ್ಧಾಂತವನ್ನು ಸ್ಥಾಪಿಸಿ ಆಚಾರ್ಯಪದವಿಯಲ್ಲಿರ ತಕ್ಕವರು.*

ಮಲ್ಲಿಕಾರ್ಜುನ ಪಂಡಿತನು ಬರೆದನೆಂದು† ಪ್ರತೀತಿಯಿರುವ "ಶಿವ ತತ್ತ್ವಸಾರವು" ಎಂಬ ತೆಲುಗು ಗ್ರಂಥದಲ್ಲಿ ಬಸವಣ್ಣನವರ ಉಲ್ಲೇಖ ವಿದೆ. ಬಸವಣ್ಣನವರ ಭಕ್ತಿಯನ್ನೂ ಭಕ್ತಿಮಾರ್ಗವನ್ನೂ ತಾನು ಮೆಚ್ಚುವು ದಾದರೂ ತಾನು ಹಿಡಿದಿದ್ದ ಜ್ಞಾನಮಾರ್ಗವನ್ನು ಕೈಬಿಡಲಾರೆನೆಂದು ಹೇಳಿಕೊಂಡಿದ್ದಾನೆ. ಭಕ್ತರೆಲ್ಲ ಒಂದೇ ಜಾತಿ, ಲಿಂಗಧಾರಿಗಳೆಲ್ಲ ಒಂದೇ ಜಾತಿ, ಎಂಬ ಬಸವಣ್ಣನವರ ಪಂಥವನ್ನು ನೋಡಿ, ತಾನು ಅಷ್ಟುದೂರ ಹೋಗಲು ಸಿದ್ಧನಾಗಿಲ್ಲವೆಂದೂ ತೋರಿಸಿಕೊಂಡಿದ್ದಾನೆ. ವಚನಗಳಲ್ಲಿ ಕೂಡ ಶೈವಗುರುವಿನಿಂದಾದ ದೀಕ್ಷೆಯನ್ನು ಅಲ್ಲಗಳೆಯುವುದು ಸರಿಯಲ್ಲ ವೆಂದು ಕೆಲವರು ವಾದಿಸಿದ್ದಾರೆ. ಆದುದರಿಂದ ವಚನಧರ್ಮೋದಯ ವಾಗುವಾಗ ಸ್ವಲ್ಪ ಭಾಗಗಳನ್ನು ಒಪ್ಪಿ ಬೆಂಬಲ ಕೊಟ್ಟವರೂ, ಸಂಪೂರ್ಣ ವಾಗಿ ಒಪ್ಪಿ ಬೆಂಬಲ ಕೊಟ್ಟವರೂ, ಇದ್ದರೆಂದು ತೋರುತ್ತದೆ. ವಚನ ಕಾರರಲ್ಲಿ ಕೆಲವರು ಮಂದಪಕ್ಷದವರಾಗಿಯೂ, ಕೆಲವರು ಉಗ್ರಪಕ್ಷದವ

---

* ಅಲ್ಲಲ್ಲಿ ದೊರೆಯುವ ಕೆಲವು ವಚನಗಳು ಪಂಚಾಚಾರ್ಯರದೆಂದೇ ತೀರ್ಮಾನಿ ಸುವುದಾದರೆ ಮೇಲಿನ ನಮ್ಮ ಅಭಿಪ್ರಾಯ ಸ್ವಲ್ಪ ಮಾರ್ಪಾಟಾಗಬೇಕಾಗುತ್ತದೆ.

† ಪಾಲ್ಕುರಿಕೆ ಸೋಮನಾಥನು ತೆಲುಗಿನಲ್ಲಿ ಬರೆದಿರುವ ಪಂಡಿತಾರಾಧ್ಯ ಚರಿತ್ರೆ ಯಿಂದ ಹಲವು ಪದ್ಯಗಳನ್ನು ತೆಗೆದುಕೊಂಡು ಅವುಗಳಿಗೆ ಇನ್ನೂ ಕೆಲವನ್ನು ಸೇರಿಸಿ ಪಂಡಿತಾರಾಧ್ಯರ "ಶಿವತತ್ತ್ವಸಾರವು" ಎಂಬ ಗ್ರಂಥವಾಗಿರಬಹುದೆಂದೂ, ಅದನ್ನು ಪಂಡಿತಾರಾಧ್ಯರೇ ಬರೆದಿರಲಾರರೆಂದೂ ಡಾ|| ನಾರಾಯಣರಾಯರು ಅಭಿಪ್ರಾಯ ಪಡುತ್ತಾರೆ (ಪ್ರ.ಕ. ಸಂಪುಟ ೨೧, ಸಂಚಿಕೆ ೪). ಈ ವಿಷಯದಲ್ಲಿ ಇನ್ನೂ ಚರ್ಚೆಗಳು ನಡೆಯುತ್ತಲಿವೆ.

ರಾಗಿಯೂ, ಕೆಲವರು ಮಧ್ಯಸ್ಥ ಪಕ್ಷದವರಾಗಿಯೂ ಕಂಡುಬರುತ್ತಾರೆ. ಇವುಗಳೆಲ್ಲ ಜೀರ್ಣೋದ್ಧಾರಕಾಲದ ಸಹಜವೈಶಿಷ್ಟ್ಯಗಳು.

ವಚನಧರ್ಮೋದಯ ಶಕ್ತಿಯುಕ್ತವಾಗಿದ್ದಿತೆಂಬುದರಲ್ಲಿ ಲೇಶವೂ ಸಂದೇಹವಿಲ್ಲ. ಹಿಂದಿನ ದುರಾಚಾರದ ದುಷ್ಟಪದ್ಧತಿಗಳ ಶೈವಪಂಥಗಳನ್ನು ಇದು ಅಡಗಿಸಿಯೇ ಬಿಟ್ಟಿತು. ಕನ್ನಡನಾಡಿನ ಇತಿಹಾಸವನ್ನು ನೋಡಿದರೆ ಕ್ರಿ. ಶ. ೧೧-೧೨ ನೆಯ ಶತಮಾನಗಳಲ್ಲಿ ಕಾಳಾಮುಖ ಶಾಖೆಯವರು ಪ್ರಬಲರಾಗಿದ್ದರೆಂಬುದು ತಿಳಿಯುತ್ತದೆ. ಆ ಮಠಗಳಲ್ಲಿದ್ದ ಆಚಾರ್ಯರು "ಯಮ ನಿಯಮ ಸ್ವಾಧ್ಯಾಯ ಧ್ಯಾನ ಧಾರಣ ಮೌನಾನುಷ್ಠಾನ ಜಪ ತಪ ಸಮಾಧಿ ಶೀಲಗುಣಸಂಪನ್ನ''ರಾಗಿಯೂ ವಸ್ತುತಃ "ಸಕಲಾಗಮಾಚಾರ್ಯ" ರಾಗಿಯೂ ಇದ್ದರು. ಅವರದು ಸ್ವಂತ ಪಾಂಡಿತ್ಯದ ಪ್ರಭಾವವೊಂದೇ ಅಲ್ಲ. ಅವರು ರಾಜಗುರುಗಳಾಗಿಯೂ ಪ್ರಬಲರಾಗಿಯೂ ಪ್ರತಿಷ್ಠಾವಂತ ರಾಗಿಯೂ ಇದ್ದರು. ಇಂಥವರ ಮೇಲೆಲ್ಲ ದಾಳಿಮಾಡಿ ವಚನಧರ್ಮದಲ್ಲಿ ಸೇರಿಕೊಳ್ಳುವಂತೆ ಮಾಡಿದ್ದು ನಿಜವಾಗಿಯೂ ದೊಡ್ಡ ಸಾಹಸದ ಪ್ರಕರಣ. ಕ್ರಿ. ಶ. ೧೪ನೆಯ ಶತಮಾನ ಮುಗಿಯುವ ಹೊತ್ತಿಗೆ ಈ ಕಾಳಾಮುಖ ಮಠಗಳು ಹೇಳಹೆಸರಿಲ್ಲದೆ ಅದೃಶ್ಯವಾಗಿ ಹೋದುದು ಪರಮಾಶ್ಚರ್ಯ ಪ್ರಕರಣ. ಈ ದಿಗ್ವಿಜಯ ಪ್ರಕರಣದಲ್ಲಿ ಮಹಾನಾಯಕರಾಗಿದ್ದ ಮೂವರು ಅತಿರಥರು ಬಸವಣ್ಣ, ಚೆನ್ನಬಸವಣ್ಣ ಮತ್ತು ಅಲ್ಲಮಪ್ರಭು. ಬ್ರಹ್ಮಾಸ್ತ್ರ, ವೈಷ್ಣವಾಸ್ತ್ರ, ಪಾಶುಪತಾಸ್ತ್ರಗಳು ಏಕಕಾಲದಲ್ಲಿ ಶತ್ರು ಸೈನ್ಯಗಳ ಮೇಲೆ ಪ್ರಯೋಗವಾದಂತೆ ಪರಿಣಾಮವಾಯಿತು. ಆದರೆ ಪ್ರಳಯ ಕಾಲದ ಅಂಧಕಾರವನ್ನು ಅವರು ಬರಗೊಡಿಸಲಿಲ್ಲ. ವೀರಶೈವದ ಪರಿ ಭಾಷೆಯಲ್ಲಿ ಹೇಳಬಹುದಾದರೆ ಬಸವಣ್ಣ ಇಷ್ಟಲಿಂಗವಾಗಿ, ಚೆನ್ನ ಬಸವಣ್ಣ ಪ್ರಾಣಲಿಂಗವಾಗಿ, ಅಲ್ಲಮಪ್ರಭು ಭಾವಲಿಂಗವಾಗಿ, ಜ್ಯೋತಿ ರ್ಮಯವಾದ ಮಹಾಲಿಂಗದ ಮೂರು ಮುಖಗಳಂತೆ ವಚನಧರ್ಮದ ಮೂರು ಮುಖಗಳಾಗಿ ಕಾಂತಿಯನ್ನು ಬೀರಿದರು. ದಾರಿತಪ್ಪಿದ್ದವರು ಧರ್ಮಮಾರ್ಗಕ್ಕೆ ಬರುವಂತಾಯಿತು. ಹಾಗೆ ಬಂದವರನ್ನು ಆದರದಿಂದ ಧರ್ಮದಲ್ಲಿ ಸೇರಿಸಿಕೊಂಡರು. ಯಾವ ಪಕ್ಷಪಾತವನ್ನೂ ಮಾಡಲಿಲ್ಲ.

ಸಾಮಾನ್ಯರು ಎಷ್ಟೋ ಸೇರಿದರು; ಸಿದ್ಧರಾಮನಂಥ ಪ್ರಸಿದ್ಧಗುರುಗಳೂ ಬಂದು ಸೇರಿದರು; ಗಂಡಸರಷ್ಟೇ ಅಲ್ಲ, ಮಹದೇವಿಯಕ್ಕನಂತೆ ಹೆಂಗಸರೂ ಸೇರಿದರು. ಮೇಲೆ ಹೇಳಿದ ಮೂವರು ಮಹಿಮಾಪುರುಷರ ಜೊತೆಗೆ ಈ ಇಬ್ಬರನ್ನೂ ಸೇರಿಸಿದರೆ ವಚನಧರ್ಮದ ಸ್ವರೂಪ ಸಂಪೂರ್ಣವಾಗುತ್ತದೆ. ಈ ಐವರ ವಚನಗಳಲ್ಲಿ, ಸಾಧನೆಯ ಕ್ರಮಗಳಲ್ಲಿ, ವಚನಧರ್ಮದ ಒಂದೊಂದು ಮುಖ ಕಂಡುಬಂದರೂ, ಅವೆಲ್ಲ ಸಮರಸದಿಂದ ಹೊಂದಿಕೊಂಡು ಏಕಹೃದಯದ ಏಕಮೂರ್ತಿಯಾಗಿಯೇ, ಪಂಚಸಾದಾಖ್ಯಗಳ ಸದಾಶಿವಲಿಂಗದಂತೆ ಇದೆ.

ಈಗ ತಿಳಿದಮಟ್ಟಿಗೆ ಇವರೆಲ್ಲರೂ ಕ್ರಿ. ಶ. ೧೧ನೆಯ ಶತಮಾನದ ಉತ್ತರಾರ್ಧ, ಮತ್ತು ಆದರ ಈಚೆಯ ಕಾಲದವರು. ಸೂರ್ಯೋದಯಕ್ಕೆ ಮೊದಲಿನ ಅರುಣೋದಯದಂತೆ ಮೊದಲು ಶೈವಧರ್ಮೋದಯವಾಗಿ, ಪರಾಶಕ್ತಿಯ ಸ್ಫುರಣಗಳಂತೆ ವಚನಧರ್ಮಸ್ಫುರಣಗಳು ಶಿವಯೋಗಿ ಮಲ್ಲರಸ, ಅನಿಮಿಷಯ್ಯ, ದೇವರದಾಸಿ, ಮೊದಲಾದವರಲ್ಲಿ ತೋರಿಬಂದಿವೆ. ಬಸವಣ್ಣನವರನ್ನು ನೋಡುವುದಕ್ಕೆ ಹಲವರು ಮಹಿಮಾಪುರುಷರು ಕಲ್ಯಾಣಕ್ಕೆ ಬಂದರೆಂದು ಬಸವಪುರಾಣಾದಿಗಳಿಂದ ತಿಳಿಯುತ್ತದೆ. ಅವರಲ್ಲಿ ಕೆಲವರಾದರೂ ಅಜ್ಞಾತವಾಗಿ ವಚನಧರ್ಮಾನುಷ್ಠಾನ ಮಾಡುತ್ತಿದ್ದವರಾಗಿರಬಹುದು. ಈ ಅನುಮಾನ ಪ್ರಕರಣದ ಪ್ರಭೃತಿಗಳೆಲ್ಲ ಬಸವಣ್ಣನವರ ದೆಸೆಯಿಂದ ಕಲ್ಯಾಣದಲ್ಲಿ ಕೇಂದ್ರೀಕರಿಸಿದರು. ಅಲ್ಲಿಯ ಶಿವಾನುಭವ ಮಂಟಪದಲ್ಲಿ "ಆತ್ಮ ಆತ್ಮ ಮಥನಿಸಿ" ಅನುಭಾವ ಹುಟ್ಟಿತು, ವಚನಧರ್ಮ ಪ್ರಕಾಶಿಸಿತು. ಯಾರುಯಾರಲ್ಲಿ ವಚನಧರ್ಮಪ್ರೇಮ ಗುಪ್ತವಾಗಿ ಸುಪ್ತವಾಗಿ ಇದ್ದಿತೋ, ಅದೆಲ್ಲವೂ ಚೇತನಗೊಂಡು ಹರಿಯತೊಡಗಿತು. ಈ ಪ್ರಕಾಶ, ಈ ಪ್ರವಾಹ, ಕನ್ನಡನಾಡಿನಲ್ಲಿ ತಲೆದೋರಿದುವು. ಕನ್ನಡ ಭಾಷೆಯ ಕಿರಣಗಳಿಂದ, ಕನ್ನಡ ಭಾಷಾವಾಹಿನಿಯಿಂದ ಬೆಳಕು ಹರಡಿತು, ಬೆಳೆ ಎದ್ದಿತು. ಸ್ವತಂತ್ರವಿಚಾರವಾದಿಗಳ ಇಂತಹ ದೊಡ್ಡ ಗುಂಪು ತಮಿಳುನಾಡಿನಲ್ಲಾಗಲಿ ತೆಲುಗುನಾಡಿನಲ್ಲಾಗಲಿ ಇದಕ್ಕೆ ಹಿಂದೆ ಕಾಣಿಸಿಲ್ಲ, ಆಗಲೂ ಕಾಣಲಿಲ್ಲ. ತಮಿಳುನಾಡಿನಲ್ಲಿ ತಲೆದೋರಿದ ಶೈವಭಕ್ತಿ ಪ್ರವಾಹ ಸ್ತೋತ್ರಗೀತಗಳನ್ನು ಬೆಳಸಿತು, ಅರುವತ್ತುಮೂರು ಪುರಾತನರ

ಕಥೆಗಳನ್ನು ಆರಳಿಸಿತು. ಈ ತಮಿಳು ಕ್ರಾಂತಿಯ ಪ್ರಭಾವವನ್ನು ವಚನಕಾರರಲ್ಲಿ ಕಾಣಬಹುದಾದರೂ ವಚನಕಾರರ ವಿಚಾರವಾದ, ಸ್ಥಾವರಲಿಂಗ ಪೂಜೆಯ ಖಂಡನೆ, ಮೊದಲಾದುವನ್ನು ಆ ತಮಿಳು ಕ್ರಾಂತಿಯಲ್ಲಿ ಕಾಣಲಾಗುವುದಿಲ್ಲ. ತೆಲುಗುನಾಡಿನಲ್ಲಿ ಆರಾಧ್ಯಸಂಪ್ರದಾಯ ಪ್ರಬಲಿಸಿತು. ಇದರ ಪ್ರಭಾವವೂ ಕನ್ನಡನಾಡಿಗೆ ಹರಿದುಬಂದಿತು. ಹೀಗೆ ಈ ಎಲ್ಲ ಪ್ರಭಾವಗಳ ಫಲವಾಗಿ ಕನ್ನಡನಾಡಿನಲ್ಲಿ ದೊಡ್ಡ ಕ್ರಾಂತಿಯುಂಟಾಯಿತು ಎಂದು ಹೇಳಬಹುದು. ಆದರೆ ವಚನಸಾಹಿತ್ಯ ಎರವಲು ತಂದದ್ದಲ್ಲ, ಅದು ಕನ್ನಡದ ಸ್ವಾರ್ಜಿತ ಸ್ವತ್ತು; ವಚನಕಾರರು ಸಂಸ್ಕೃತದ ಆಚಾರ್ಯರಲ್ಲ, ಅವರು ಅಚ್ಚಕನ್ನಡದ ಬೇಸಾಯಗಾರರು.

ಈ ಹೊಸ ಹುರುಪಿನ ಮುಂದಾಳುಗಳು ಸಂಪ್ರದಾಯಕ್ಕಿಂತ ಅನುಭವ ಜ್ಞಾನಕ್ಕೆ ಹೆಚ್ಚು ಪ್ರಾಮುಖ್ಯತೆಯನ್ನು ಕೊಟ್ಟರು. ವಚನಧರ್ಮದೊಳಗೆ ದೇಶಕಾಲಾದಿಗಳ ವ್ಯತ್ಯಾಸವಿಲ್ಲದೆ ಎಲ್ಲರಿಗೂ ಅನ್ವಯಿಸುವ ವಿಶ್ವಧರ್ಮವೊಂದು ಸೇರಿಕೊಂಡಿತು. ಈ ವಚನಧರ್ಮದ ಹೃದಯವನ್ನು, ವಚನಕಾರರ ಕೆಚ್ಚನ್ನು, ಮುಂದಿನ ಪ್ರಕರಣಗಳಲ್ಲಿ ವಿವರಿಸಲು ಪ್ರಯತ್ನಿಸುತ್ತೇವೆ.

---

## ೨ನೆಯ ಪ್ರಕರಣ

# ವಚನಗಳ ಪ್ರಾಶಸ್ತ್ಯ

ವೇದ, ಉಪನಿಷತ್ತು, ಆಗಮ, ಪುರಾಣ—ಇವು ಎಲ್ಲ ವೈದಿಕ ಮತಗಳಿಗೂ ಧರ್ಮಗಳಿಗೂ ತಳಹದಿಯೆಂದು ಭರತಖಂಡದಲ್ಲಿ ಅವುಗಳಿಗೆ ಗೌರವವಿದೆ. ಸ್ಮೃತಿಗಳಲ್ಲಿ "ವೇದೋ ಧರ್ಮಮೂಲಂ", "ವೇದೋಖಿಲಂ ಧರ್ಮ ಮೂಲಂ", "ವೇದಶಾಸ್ತ್ರಂ ಸನಾತನಂ" ಎಂದು ಆರ್ಯ ಋಷಿಗಳು ಹೇಳಿದ್ದಾರೆ. ಇನ್ನೊಂದು ಕಡೆ

"ಪಕ್ಷೈಃ ಶೈವಾದಿಭಿರ್ದಿವ್ಯೈರಾಗಮೈಃ ಪಾಶಮೋಚಕೈಃ।
ವಿಶಿಷ್ಟಭೋಗ ವಿಭವ ಶಿವತ್ವ ಫಲದಾಯಿಭಿಃ"

ಎಂದು ಆಗಮುಗಳಿಗೆ ಪ್ರಾಶಸ್ತ್ಯವನ್ನು ಹೇಳಿದ್ದಾರೆ. ಸೂತಪೌರಾಣಿಕನು

"ವಕ್ಷ್ಯಾಮಿ ಪರಮಂ ಪುಣ್ಯಂ ಪುರಾಣಂ ವೇದಸಂಮಿತಂ।
ಶಿವಜ್ಞಾನಾರ್ಣವಂ ಸಾಕ್ಷಾದ್ಭುಕ್ತಿ ಮುಕ್ತಿ ಫಲಪ್ರದಂ"

ಎಂದು ಪುರಾಣಗಳ ಮಹತ್ವವನ್ನು ಸಾರಿದ್ದಾನೆ. ಆಚಾರ್ಯರುಗಳು ವೇದಾದಿಗಳನ್ನು ಆಶ್ರಯಿಸಿಯೇ ತಮ್ಮ ತಮ್ಮ ಸಿದ್ಧಾಂತಗಳನ್ನು ಸ್ಥಾಪಿಸಿದ್ದಾರೆ. ವಚನಗಳಲ್ಲಿಯೂ ಕೆಲವುಕಡೆ, ಮೂಲಕರ್ತೃವೇ ಬರೆದುದೋ ಪ್ರಕ್ಷಿಪ್ತವಾದುದೋ, ಅಂತೂ ವೇದೋಪನಿಷತ್ತು ಪುರಾಣಾಗಮುಗಳಿಂದ ಯಥೇಚ್ಛವಾಗಿ ವಾಕ್ಯಗಳನ್ನು ಉದ್ಧರಿಸಿದ್ದಾರೆ. ಹೀಗಿದ್ದರೂ,

೫. "ವೇದಂಗಳ ಹಿಂದೆ ಹರಿಯದಿರು, ಹರಿಯದಿರು. ಶಾಸ್ತ್ರಂಗಳ ಹಿಂದೆ ಸುಳಿಯದಿರು, ಸುಳಿಯದಿರು. ಪುರಾಣಂಗಳ ಹಿಂದೆ ಬಳಸದಿರು, ಬಳಸದಿರು. ಆಗಮಂಗಳ ಹಿಂದೆ ತೊಳಲದಿರು, ತೊಳಲದಿರು. ಸೌರಾಷ್ಟ್ರ ಸೋಮೇಶ್ವರನ ಕೈಪಿಡಿದು ಶಬ್ದಜಾಲಂಗಳಿಗೆ ಬಳಲದಿರು, ಬಳಲದಿರು"

ಎಂದು ವಚನಕಾರರು ಎಚ್ಚರಿಸಿರುವುದು ಆಶ್ಚರ್ಯವಲ್ಲವೆ? ಅವುಗಳನ್ನೇಕೆ ಆಶ್ರಯಿಸಬಾರದು? ಮತ್ತೆ ಯಾವುದನ್ನು ಆಶ್ರಯಿಸಬೇಕು? ವೇದಾದಿ

---

೫. ವ. ಶಾ. ಸಾ. ಭಾಗ ೧. ಪ್ರ. ಪುಟ ೩೫೭.

ಗಳು ಮಾನ್ಯಗಳೇ ಅಹುದು. ಆದರೆ ಆ ಶಬ್ದಜಾಲಗಳ ತೊಡಕಿನಲ್ಲಿ ಸಿಕ್ಕಿ ಬಿದ್ದು ಹೊರಕ್ಕೆ ಬರಲಾರಿರಿ. ಅವುಗಳಲ್ಲಿ ಹಲವು ವಿಚಾರಗಳಿವೆ. ಮುಖ್ಯವಾದುದು ಯಾವುದು? ಗುರಿ ಯಾವುದು? ನೇರದಾರಿ ಯಾವುದು? ಎಂಬಿವುಗಳನ್ನು ತಿಳಿಯದೆ ಹೋಗುವಿರಿ. ಅಡ್ಡದಾರಿಗಳಲ್ಲಿ ತೊಳಲಿ ಕಷ್ಟ ಪಡುವಿರಿ. ಆ ಅರ್ಥಗಳ ವಾಕ್ಯಾರ್ಥಗಳ ಸಿಕ್ಕಿನಲ್ಲಿ ಸಿಕ್ಕಿಕೊಂಡು, ಸಿಪ್ಪೆ ನಾರುಗಳನ್ನು ಬಿಡಿಸುವುದರಲ್ಲಿಯೂ, ಕರಟವನ್ನೊಡೆಯುವುದರಲ್ಲಿಯೂ ಆಯುಸ್ಸನ್ನು ಕಳೆದು, ಬೇಸತ್ತು, ತಿರುಳನ್ನು ಕಾಣದೆ ವ್ಯಥೆಪಡುವಿರಿ. ವೇದಾದಿಗಳ ಬತ್ತವನ್ನು ಕುಟ್ಟಿಕುಟ್ಟಿ, ಕಾಳನ್ನು ಕಾಣದೆ ನೋವುತಿಂದು ಬಳಲುವಿರಿ. ಎಲ್ಲವನ್ನೂ ಸುಲಭದಲ್ಲಿ ನಾವು ಹೇಳುತ್ತೇವೆ, ತೋರಿಸಿ ಕೊಡುತ್ತೇವೆ. ಆದುದರಿಂದ

೬. "ವೇದ ಶಾಸ್ತ್ರಾಗಮ ಪುರಾಣಂಗಳೆಂಬುವ ಕೊಟ್ಟಣವ ಕುಟ್ಟುತ್ತ ನುಚ್ಚುತಾಡು ಕಾಂಬೋ. ಅವನು ಕುಟ್ಟಲೇಕೆ? ಅತ್ತಿತ್ತ ಹರಿವ ಮನದ ಶಿರವನರಿಯಬಲ್ಲಡೆ ಬಟ್ಟಬಯಲು ಚೆನ್ನಮಲ್ಲಿಕಾರ್ಜುನಾ"

ಎಂಬಂತೆ ಕರ್ಮಕಾಂಡವನ್ನುಳಿದು ಚರ್ಯಾಪಾದವನ್ನುಳಿದು ನೋಡುವುದಾದರೆ, ಅರ್ಧಶ್ಲೋಕದಲ್ಲಿ ಎಲ್ಲ ಶಾಸ್ತ್ರಗಳ ಸಾರವನ್ನೂ "ಪರೋಪಕಾರಃ ಪುಣ್ಯಾಯ ಪಾಪಾಯ ಪರಪೀಡನಂ" ಎಂದು ಹೇಳಿದ ಹಾಗೆ ನಿಗಮಾಗಮಗಳ ಸಾರವೆಲ್ಲ "ಅತ್ತಿತ್ತ ಹರಿವ ಮನದ ಶಿರವನರಿಯಬಲ್ಲಡೆ ಬಟ್ಟಬಯಲು" ಎಂಬುದಾಗಿದೆ. ಮನೋಮಧ್ಯದ ದಿವ್ಯಮೂರ್ತಿಯನ್ನು ತಿಳಿಯಬೇಕು; ಆ ಮನಸ್ಸನ್ನೂ ಲಯಗೊಳಿಸಿ ಬಟ್ಟಬಯಲಾಗಬೇಕು. ನಾವು ಈ ಅಖಿಳಾಗಮಾರ್ಥವನ್ನು, ಶಾಸ್ತ್ರಗಳ ಸರ್ವ ಸಂಪತ್ತನ್ನು, ವೈದಿಕಾರ್ಥದ ಸಾರವನ್ನು, ಎಲ್ಲಧರ್ಮಗಳ ಪೆರ್ಮೆಯನ್ನು ತಿಳಿಸಿಕೊಡುತ್ತೇವೆ. ಶರಣರ ಅನುಭವಜ್ಞಾನಾಗ್ನಿಯಲ್ಲಿ ಕಳಪೆಗಳೆಲ್ಲ ಸುಟ್ಟು ಅಪರಂಜಿ ಮಾತ್ರ ಕಂಗೊಳಿಸುತ್ತದೆ; ಮಲಗಳು ಸುಟ್ಟು ಸಚ್ಚಿದಾನಂದಮೂರ್ತಿಯೊಂದು ಪ್ರಕಾಶಿಸುತ್ತದೆ.

೭. "ಮರ ಮರ ಮಥನಿಸಿ, ಕಿಚ್ಚು ಹುಟ್ಟಿ, ಸುತ್ತಣ ತರುಮರಾದಿಗಳ ಸುಡಲಾಯಿತ್ತು. ಆತ್ಮವಾತ್ಮ ಮಥನಿಸಿ ಅನುಭಾವ ಹುಟ್ಟಿ ತನುಗುಣಾದಿಗಳ ಸುಡಲಾ

೬. ವ. ಶಾ. ಸಾ. ಭಾಗ ೧. ಪೂ. ಪುಟ ೩೫೭.    ೭. ಮ. ದೇ. ವ. ಪುಟ ೧೭

ಯಿತ್ತು. ಇದು ಕಾರಣ ನಿಮ್ಮ ಅನುಭಾವಿಗಳ ಅನುಭವವ ತೋರಿ ಎನ್ನೊಡಲ ನುಳುಹಿಕೊಳ್ಳಾ ಚೆನ್ನಮಲ್ಲಿಕಾರ್ಜುನಾ"

ಎಂದು ಶರಣರಿಗೆ ಶರಣು ಬಂದು, ಅವರ ಪಂಥವನ್ನು ಹಿಡಿಯಿರಿ, ಅವರ ವಚನಾಮೃತವನ್ನು ಸವಿದು ಅಮೃತತ್ವವನ್ನು ಪಡೆಯಿರಿ. ಅನುಭವ ಜ್ಞಾನ ತನುಗುಣಾದಿಗಳನ್ನು ಸುಟ್ಟು ಲಿಂಗದ ಗುಣಗಳನ್ನು ದೊರಕಿಸಿ ಲಿಂಗದೇಹಿಯನ್ನಾಗಿ ಮಾಡುತ್ತದೆ. ವಚನಗಳಲ್ಲಿ ಶರಣರು ಐಕ್ಯರಾಗಿದ್ದಾರೆ. ವಚನಗಳು ಜ್ಞಾನಗುರು ಎದುರಿಗೆ ಬಂದು ಉಪದೇಶ ಮಾಡಿದಂತೆ. ಆ ಪರವಸ್ತುವನ್ನು ವೇದಗಳು ಕಾಣವು. "ವೇದಾತೀತ" ಎಂದು ಹೇಳಿಸಿಕೊಳ್ಳುವವನು ವೇದಗಳಲ್ಲಿ ದೊರೆಯುವನೆ? ಆದುದರಿಂದ "ವೇದಂಗಳ ಹಿಂದೆ ಹರಿಯದಿರು". ಶರಣರ ವಿಚಾರವಾದರೋ ಹೀಗಿದೆ.—

೮. "ವೇದಂಗಳಿಗೆ ಅಭೇದ್ಯನಾದ ಶಿವನ ಭೇದಿಸಿ ಕಂಡರು ನೋಡಾ ಶರಣರು. ಶಾಸ್ತ್ರಂಗಳಿಗಸಾಧ್ಯನಾದ ಶಿವನ ಸಾಧಿಸಿ ಕಂಡರು ನೋಡಾ ಶರಣರು. ಆಗಮಂಗಳು ಇತಿಹಾಸ ತರ್ಕಕ್ಕಸಾಧ್ಯನಾದ ಶಿವನ ಅರಸಿ ಕಂಡರು ನೋಡಾ ಶರಣರು. ಆಗನ್ನು ಅಪ್ರಮಾಣವಾದ ಪರಶಿವನ ಪ್ರಮಾಣಿಸಿ ಕಂಡರು, ಒಳಹೊಕ್ಕು ಬೆರಸಿದರು ನೋಡಾ ನಮ್ಮ ಶರಣರು ಅಖಂಡೇಶ್ವರಾ"

ಆದುದರಿಂದ ವೇದಾಗಮಗಳನ್ನು ಅನುಸರಿಸುವುದಕ್ಕಿಂತ ಶರಣರನ್ನು ಅನುಸರಿಸುವುದು ಬುದ್ಧಿವಂತರ ಕರ್ತವ್ಯ. ಶರಣರು ವೇದಾದಿಗಳಿಗಿಂತ ಬಲ್ಲಿದರು, ಪರಮಾತ್ಮನಿಗಿಂತಲೂ ಬಲ್ಲಿದರು. ಏಕೆಂದರೆ, ನೀವು ಯಾವ ದೇವರನ್ನು ಕಾಣಬೇಕೆಂದಿರುವಿರೋ, ಯಾವನಿಗಿಂತ ದೊಡ್ಡದು ಇಲ್ಲ ಎಂದು ತಿಳಿದಿರುವಿರೋ ಆ ದೇವರು ಎಲ್ಲಿದ್ದಾನೆ? ಏನಾಗಿದ್ದಾನೆ? ಎಂಬುದನ್ನು ನೋಡಿ.

೯. "ಸಮುದ್ರ ಘನವೆಂಬೆನೆ? ಧರೆಯ ಮೇಲಡಗಿತ್ತು. ಧರೆ ಘನವೆಂಬೆನೆ? ನಾಗೇಂದ್ರನ ಫಣಾಮಣಿಯ ಮೇಲೆ ಅಡಗಿತ್ತು. ನಾಗೇಂದ್ರ ಘನವೆಂಬೆನೆ? ಪಾರ್ವತಿಯ ಕಿರುಕುಣಿಯ ಮುದ್ರಿಕೆಯಾಯಿತ್ತು. ಅಂಥ ಪಾರ್ವತಿ ಘನವೆಂಬೆನೆ? ಪರಮೇಶ್ವರನ ಅರ್ಧಾಂಗಿಯಾದಳು. ಅಂಥ ಪರಮೇಶ್ವರ ಘನವೆಂಬೆನೆ? ನಮ್ಮ ಕೂಡಲಸಂಗನ ಶರಣರ ಮನದ ಕೊನೆಯ ಮೊನೆಯ ಮೇಲಡಗಿದನು"

---

೮. ವ. ಶಾ. ಸಾ. ಭಾಗ ೧. ಪೂ. ಪುಟ ೩೫೮. ೯. ಬ. ವ. ಪುಟ ೧೩೪.

ಆದುದರಿಂದ ಪರಮಾತ್ಮನನ್ನು ಅಲ್ಲಿ ಇಲ್ಲಿ ಹುಡುಕಿದರೆ ಫಲವಿಲ್ಲ. ಶರಣರ ಬಳಿಗೆ ಬನ್ನಿ. ತಮ್ಮ ಮನದ ಕೊನೆಯ ಮೊನೆಯ ಮೇಲಿಡ ಗಿರುವವನನ್ನು ನಿಮಗೆ ತೋರಿಸಿಕೊಡುತ್ತಾರೆ. ಆ ಪರಮಾತ್ಮನನ್ನು ನಿಮ್ಮಲ್ಲಿಯೇ, ನಿಮ್ಮ ಮನದ ಕೊನೆಯ ಮೇಲೆಯೇ ನೀವೇ ಕಾಣು ವಂತೆ ಶರಣರು ಮಾಡುತ್ತಾರೆ. ಶರಣರು ಮನುಷ್ಯತ್ವವನ್ನೂ ದೇವತ್ವ ವನ್ನೂ ಸಂಬಂಧಿಸಿಕೊಂಡು ಉಪದೇಶಮಾಡುವುದರಿಂದ, ತಾವು ಚರಿಸುವ ಮಾರ್ಗದಲ್ಲಿಯೇ ನಿಮ್ಮನ್ನು ಒಯ್ಯುವುದರಿಂದ ಅವರಿಗಿಂತ ಆಪ್ತರಾದವರು ದೊರೆಯರು, ಅವರ ವಚನಗಳಿಗಿಂತ ಹಿತವಾದುವು ದೊರೆಯವು.

೧೦. "ಆಪ್ಯರ ವಚನ ಪರುಷ ಕಂಡಯ್ಯ! ಸದಾಶಿವನೆಂಬ ಲಿಂಗವ ನಂಬುವುದು, ನಂಬಲೊಡನೆ ನೀ ನಿಜಾಯು ಕಂಡಯ್ಯ! ಅಧರಕ್ಕೆ ಕಹಿ, ಉದರಕ್ಕೆ ಸಿಹಿ, ಕೂಡಲ ಸಂಗನ ಶರಣರ ವಚನ ಬೇವ ಸವಿದಂತೆ"

ಅವಲೋಹವನ್ನು ಸುವರ್ಣವನ್ನಾಗಿ ಮಾಡಬಲ್ಲ ಪರುಷದಂತೆ, ಅಂಗವನ್ನು ಲಿಂಗವನ್ನಾಗಿ ಮಾಡಬಲ್ಲ ಶರಣರ ವಚನಗಳನ್ನು ನಂಬಿ ಸೇವಿಸಿ. ಭವರೋಗ ಪೀಡಿತರಾದ ನಿಮ್ಮ ಅಧರಕ್ಕೆ ಸ್ವಲ್ಪ ಕಹಿಯಾಗ ಬಹುದು, ಆದರೆ ಉದರಕ್ಕೆ ಸಿಹಿಯಾಗುತ್ತದೆ. ಬೇವ ಸವಿದವರು ವಜ್ರಕಾಯ ರಾಗಿ ಎಂದೆಂದಿಗೂ ರೋಗಾಧೀನರಾಗದಂತೆ ಶರಣರ ವಚನಗಳನ್ನು ಸವಿದವರು ನಿತ್ಯರಾಗಿ ಮುಕ್ತರಾಗಿ ಎಂದೆಂದಿಗೂ ಭವಕ್ಕೆ ಬಾರರು. ವಚನಗಳ ಸಹಾಯವಿಲ್ಲದಿದ್ದರೆ ನಾವು ಇವುಗಳನ್ನು ಸಾಧಿಸಲಾಗುವುದಿಲ್ಲವೆ? ಎಂದು ಕೇಳಬೇಡಿ.

೧೧. "ಪಾತಾಳದಗ್ಗವಣಿಯ ನೇಣಿಲ್ಲದೆ, ಸೋಪಾನದ ಬಲದಿಂದಲ್ಲದೆ ತೆಗೆಯಬಹುದೇ? ಶಬ್ದಸೋಪಾನವ ಕಟ್ಟಿ ನಡಸಿದವರು ಪುರಾತನರು. ದೇವಲೋಕಕ್ಕೆ ಬಟ್ಟೆ ಕಾಣರೋ. ಮರ್ತ್ಯಲೋಕದವರ ಮನದ ಮೈಲಿಗೆಯ ಕಳೆಯಲೆಂದು ಗೀತ ಮಾತೆಂಬ ಜ್ಯೋತಿಯ ಬೆಳಗಿಕೊಟ್ಟರು ಕೂಡಲ ಚೆನ್ನಸಂಗನ ಶರಣರು."

ತಾವು ಉದ್ಧಾರವಾದುದು ಹಾಗಿರಲಿ. ಕೇವಲ ಸ್ವಾರ್ಥಿಗಳಾಗದೆ, ಲೋಕದ ಜನರನ್ನೂ ಉದ್ಧಾರಮಾಡಲು ಶರಣರು ಈ ವಚನಸೋಪಾನ

೧೦. ಬ. ವ. ಪುಟ ೨೬.   ೧೧. ವ. ಶಾ. ಸಾ. ಭಾಗ ೧. ಪ್ರ. ಪುಟ ೩೫೩.

ವನ್ನು ಈ ವಚನಜ್ಯೋತಿಯನ್ನು ಕೊಟ್ಟಿದ್ದಾರೆ. ವಚನಗಳ ಸಹಾಯದಿಂದ ಸುಲಭದಲ್ಲಿ ಅನುಭವಾಮೃತವನ್ನು ಪಡೆಯಿರಿ, ಸುಮ್ಮನೆ ಬಗ್ಗಿ ಬಗ್ಗಿ ನೋಡಿ ಸೊಂಟವನ್ನು ನೋಯಿಸಿಕೊಳ್ಳಬೇಡಿ, ಮೇಲಕ್ಕೆ ಮುಖವೆತ್ತಿ ಗೋಣು ನೋಯಿಸಿಕೊಳ್ಳಬೇಡಿ, "ತಾಳಮರಕ್ಕೆ ಕೈಯ ನೀಡಿ ಗೋಣು ನೊಂದುವಯ್ಯ" ಎಂಬ ಅನುಭವವನ್ನು ತಿಳಿದುಕೊಳ್ಳಿ. ಆದುದರಿಂದ ವಚನಗಳನ್ನು ಬಿಟ್ಟು ಅನ್ಯಮಾರ್ಗದಲ್ಲಿ ಸಾಧಿಸಲಾಗುವುದಿಲ್ಲವೇ? ಎಂದು ಕೇಳಬೇಡಿ.

೧೨. "ಹಾಲತೊರೆಗೆ ಬೆಲ್ಲದಂತಹ ಕೆಸರು, ಸಕ್ಕರೆಯಂತಹ ಮಳಲು, ತವರಾಜದಂತಹ ನೊರೆತೆರೆಗಳು. ಇಂತಪ್ಪ ಆದ್ಯರ ವಚನವಿರಲು ಬೇರೆ ಬಾವಿಯ ತೋಡಿ ಉಪ್ಪನೀರ ಸವಿದಂತಾಯಿತ್ತಯ್ಯ ಎನ್ನ ಯುಕ್ತಿ. ನಿಮ್ಮ ವಚನಂಗಳ ಕೇಳದೆ, ಅನ್ಯಪುರಾಣಗಳ ಕೇಳಿ ಕೆಟ್ಟೆನಯ್ಯ ಕೂಡಲಸಂಗಮದೇವ."

ವಚನ ಸಾಹಿತ್ಯವಾಹಿನಿಯಲ್ಲಿ ಕಳಸೆಯೆಂಬುದಿಲ್ಲ. ಕೆಸರು, ಮಳಲು, ನೊರೆತೆರೆಗಳು, ಎಲ್ಲವೂ ಸಿಹಿ, ಎಲ್ಲವೂ ರುಚಿ, ಎಲ್ಲವೂ ಉಪಯೋಗಕ್ಕೆ ಬರತಕ್ಕವು. ಇಂತಹ ಸಾಹಿತ್ಯವಾಹಿನಿ ಎದುರಿಗೆ ಹರಿಯುತ್ತಿರುವಾಗ ಮತ್ತೆ ಬಾವಿಯನ್ನು ತೋಡಲೇಕೆ?

೧೩. "ಆದಿಪುರಾಣ ಅಸುರರಿಗೆ ಮಾರಿ, ವೇದಪುರಾಣ ಹೋತಿಂಗೆ ಮಾರಿ, ರಾಮಪುರಾಣ ರಕ್ಕಸರಿಗೆ ಮಾರಿ, ಭಾರತಪುರಾಣ ಗೋತ್ರಕ್ಕೆ ಮಾರಿ, ಇವೆಲ್ಲ ಪುರಾಣವು ಕರ್ಮಕ್ಕೆ ಮೊದಲು"

ಹೀಗೆ ಹಲವು ಪುರಾಣಗಳ ಸ್ವರೂಪವಿರುವುದರಿಂದ ಅವುಗಳನ್ನು ಕೇಳಿ ಕೆಟ್ಟುಹೋಗದೆ ವಚನಗಳನ್ನು ಕೇಳಿ ಬದುಕಿಕೊಳ್ಳಿ. ವಚನಗಳು ಇಹಪರಗಳೆರಡಕ್ಕೂ ಆವಶ್ಯಕ. ನಿಮ್ಮ ದೇಹರಥವನ್ನು ಸಂರಕ್ಷಿಸುವ, ಆತ್ಮರಥಿಯನ್ನು ಸುಖದಲ್ಲಿರಿಸುವ, ಸಾಧನಗಳೇ ವಚನಗಳು.

---

೧೨. ವ. ಶಾ. ಸಾ. ಭಾಗ ೧. ಪೂ. ಪುಟ೩೫೩.(ಬ.ವ.ಪುಟ ೪೩-ಪಾಠ ಭೇದವಿದೆ).

೧೩. ಬ. ವ. ಪುಟ ೪೫.

೧೪. "ಕಡೆಗೀಲಿಲ್ಲದೆ ಬಂಡಿ ಹೊಡೆಗೆಡುವುದು ಮಾಬುದೇ? ಕಡೆಗೀಲು ಬಂಡಿಗಾಧಾರ. ಕಡುದರ್ಪವೇರಿದ ಒಡಲೆಂಬ ಬಂಡಿಗೆ ಮೃಡಶರಣರ ನುಡಿಗಡಣವೇ ಕಡೆಗೀಲು ಕಾಣಾ ರಾಮನಾಥಾ"

ಎಂದು ಮತ್ತೊಂದು ಉಪಮಾನದಿಂದ, ದೃಷ್ಟಾಂತದಿಂದ, ವಚನಗಳ ಮಹತ್ವವನ್ನು ವಚನಕಾರರು ತಿಳಿಸಿದ್ದಾರೆ. ಇಹಲೋಕದಲ್ಲಿ ದಾರಿತಪ್ಪಿ ನಡೆಯದೆ, ಅಪಾಯಕ್ಕೊಳಗಾಗದೆ, ಕ್ಷೇಮದಿಂದ ಜೀವನ ಸಾಗಿಸುವುದಕ್ಕೊ ತಕ್ಕ ಲೌಕಿಕ ಧರ್ಮವನ್ನು ವಚನಗಳು ಬೋಧಿಸುತ್ತವೆ. ಕಡೆಗೀಲನ್ನು ಕಳಚಿದ ಬಂಡಿ ಏನಾಗಬಹುದು? ಬಂಡಿ ದೊಡ್ಡದಾಗಿದ್ದರೂ, ಕಡಾಣಿ ಚಿಕ್ಕದಾಗಿದ್ದರೂ ಕಡಾಣಿಯೇ ಬಂಡಿಗಾಧಾರ. ಅಹಂಕಾರದಿಂದ ಬೀಗಿ ಬೀಗಿ ಮುಂದುಗಾಣದೆ ಇಂದ್ರಿಯಾಧೀನವಾಗಿ ಹುಚ್ಚು ಹುಚ್ಚಾಗಿ ಹರಿಯ ಬಹುದಾದ ಒಡಲ ಬಂಡಿಗೆ ಶರಣರ ವಚನಗಳೆಂಬ ಕಡೆಗೀಲನ್ನು ಹಾಕಿದರೆ ಒಡಲ ಬಂಡಿ ಉಳಿದುಕೊಳ್ಳುತ್ತದೆ, ಅಲ್ಲದಿದ್ದರೆ ನರಕಕ್ಕೆ ಉರುಳಿಕೊಳ್ಳುತ್ತದೆ; ಪುನಃ ಎತ್ತಿ ನಿಲ್ಲಿಸಿದರೂ ಸ್ವಲ್ಪದೂರ ಹೋಗಿ ಮತ್ತೆ ಉರುಳಿ ಕೊಳ್ಳುತ್ತದೆ. ಹೀಗೆ ಭವಭವದಲ್ಲಿ ಬಂದು ಪಾಡುಪಡಬೇಕಾಗುತ್ತದೆ. ಎಷ್ಟು ಜನ್ಮಗಳು ಕಳೆದರೂ ಹೋಗಿ ನೆಲೆಯನ್ನು ಮುಟ್ಟಲಾರಿರಿ. ಮೃಡ ಶರಣರ ನುಡಿಗಡಣದ ಕೀಲಿದ್ದರೆ ಷಟ್ಸ್ಥಲಮಾರ್ಗದಲ್ಲಿ ನಿರುಪಾಧಿಕವಾಗಿ ಮುಂದುವರಿದು ಒಂದೇ ಜನ್ಮದಲ್ಲಿ ನೆಲೆಯನ್ನು ಸೇರುವಿರಿ, ಹುಟ್ಟು ಸಾವುಗಳು ತಪ್ಪುತ್ತವೆ. ಆತ್ಮಕಲ್ಯಾಣವನ್ನು ಬಯಸುವವರೆಲ್ಲ ಶರಣರ ನುಡಿಗಳನ್ನು ಬಯಸಬೇಕು. ಯಮನು ನಚಿಕೇತನನ್ನು ಕುರಿತು ಸಕಲೈಶ್ವರ್ಯವನ್ನು ಕೊಡುತ್ತೇನೆ, ಸಮಸ್ತ ಭೋಗಗಳನ್ನು ಕೊಡುತ್ತೇನೆ.—

* "ಯೇ ಯೇ ಕಾಮಾ ದುರ್ಲಭಾ ಮರ್ತ್ಯಲೋಕೇ।
ಸರ್ವಾನ್ ಕಾಮಾನ್ ಛನ್ದತಃ ಪ್ರಾರ್ಥಯಸ್ವ॥
ಇಮಾ ರಾಮಾಃ ಸರಥಾಃ ಸತೂರ್ಯಾ।
ನಹೀದೃಶಾ ಲಮ್ಭನೀಯಾ ಮನುಷ್ಯೈಃ॥
ಆಭಿರ್ಮತ್ಪ್ರತ್ತಾಭಿಃ ಪರಿಚಾರಯಸ್ವ।
ನಚಿಕೇತೋ ಮರಣಂ ಮಾನುಪ್ರಾಕ್ಷೀಃ॥

---

೧೪. ವ. ಶಾ. ಸಾ. ಭಾಗ ೧. ಪೂ. ಪುಟ ೩೫೩. * ಕಠೋಪನಿಷತ್.

ಎಂದು ಹೇಳಿದಾಗ ನಚಿಕೇತನು ಕೊಟ್ಟ ಉತ್ತರದಂತೆಯೇ ವಚನಕಾರರು ಕೂಡ

೧೫. "ಕರಿಯನಿತ್ತೊಡೆ ಒಲ್ಲೆ, ಸಿರಿಯನಿತ್ತೊಡೆ ಒಲ್ಲೆ, ಹಿರಿದಪ್ಪ ರಾಜ್ಯವಿತ್ತೊಡೆ ಒಲ್ಲೆ, ನಿಮ್ಮ ಶರಣರ ಸೂಳುನುಡಿಯ ಒಂದರಗಳಿಗೆ ಇತ್ತಡೆ ನಿನ್ನನಿತ್ತೆ ಕಾಣಾ ರಾಮನಾಥಾ"

ಎಂದು ಹೇಳಿದ್ದಾರೆ. ಒಂದರಗಳಿಗೆ ಶರಣರ ವಚನಗಳ ಅಭ್ಯಾಸ ಮಾಡಿದರೆ ಸಾಕು, ಪರವಸ್ತುವಿನ ಸಾಕ್ಷಾತ್ಕಾರವಾಗುತ್ತದೆ; ಆದುದರಿಂದ ಈ ವಚನಗಳಿಗಿಂತ ಅಮೂಲ್ಯವಾದುವು ಬೇರೊಂದಿಲ್ಲ ಎಂದು ವಚನಕಾರರು ಪ್ರತಿಪಾದಿಸಿ ವಚನಗಳಿಗೆ ಅತ್ಯುತ್ತಮಸ್ಥಾನವನ್ನು ದೊರಕಿಸಿ ವಚನ ಶಾಸ್ತ್ರಾಭ್ಯಾಸಕ್ಕೆ, ವಚನಧರ್ಮಪ್ರಸಾರಕ್ಕೆ, ಬಲವಾದ ಅಸ್ತಿಭಾರವನ್ನು ಹಾಕಿದರು. ವೇದಾಗಮಾದಿಗಳು ದೇವಭಾಷೆಯಲ್ಲಿ ರಚಿತವಾದುವು, ಸನಾತನವಾದುವೆಂದೂ ಅಪೌರುಷೇಯಗಳೆಂದೂ ಪ್ರಖ್ಯಾತಿಯನ್ನು ಪಡೆದಿರತಕ್ಕುವು, ಪರಮ ಪೂಜ್ಯವಾದುವು. ಇಂತಹ ಸಾಹಿತ್ಯದೊಡನೆ ಕನ್ನಡದ ವಚನಸಾಹಿತ್ಯ ಸ್ಪರ್ಧಿಸಿ ನೂತನ ಸೃಷ್ಟಿಯಾದರೂ ಬಹುಬೇಗ ವೀರಶೈವ ಮತಗಳಲ್ಲಿ ಮತತತ್ತ್ವ ನಿರೂಪಣೆಗೆ ಪ್ರಮಾಣವೆನಿಸಿ ಅಂಗೀಕಾರವಾಯಿತು. ಹೀಗೆ ಈ ಕನ್ನಡದ ಉಪನಿಷತ್ತುಗಳ ವ್ಯಾಸಂಗ ಹೆಚ್ಚಿತು. ಈ ವಚನಗಳ ಸಂಕಲನಗಳಾದುವು. ಅವುಗಳಿಗೆ ಟೀಕೆಗಳನ್ನು ಬರೆದರು. ಅವುಗಳಲ್ಲಿನ ಪುರಾತನರ ಕಥೆಗಳನ್ನು ಸಂಗ್ರಹಿಸಿದರು; ವಚನಕಾರರನ್ನು ಅವತಾರ ಪುರುಷರೆಂದು ಗೌರವಿಸಿದರು; ಅವರ ಪುರಾಣಗಳನ್ನು ರಚಿಸಿದರು. ವಚನಗಳನ್ನು ಸಂಭಾಷಣೆಯ ರೂಪವಲ್ಲ ಜೋಡಿಸಿ ಜೀವಕಳೆಯನ್ನು ತುಂಬಿದರು. ವಚನಶಾಸ್ತ್ರ ಪ್ರಮಾಣಗ್ರಂಥವೆಂದು ಸ್ಥಾಪಿಸುವುದಕ್ಕಾಗಿ ಪುರಾತನರ ವಚನಗಳಿಗೆ ಸರಿಹೊಂದುವ ಸಂಸ್ಕೃತಾಧಾರಗಳನ್ನು ಜೋಡಿಸಿ ಭಾಷಾಭೇದವೇ ಹೊರತು ಅಭಿಪ್ರಾಯಭೇದವಿಲ್ಲ

---

೧೫. ವ. ಶಾ. ಸಾ. ಭಾಗ ೧, ಪೂ. ಪುಟ ೩೫೩.

ವೆಂದು ಸಂಸ್ಕೃತಾಭಿಮಾನಿಗಳಿಗೆ ತೋರಿಸಿ ಕನ್ನಡದ ಗೌರವವನ್ನು ಹೆಚ್ಚಿಸಿದರು. ವಚನಸಾಹಿತ್ಯ ಅಪಾರವಾಗಿ ಬೆಳೆಯಿತು. ಸಿದ್ಧಾಂತ ಸ್ಥಿರಪಟ್ಟಿತು. ವೀರಶೈವರ ಜೀವನಕ್ಕೆ ಸಂಬಂಧಿಸಿದ ಸಮಸ್ತ ವಿಷಯಗಳೂ ವಚನಗಳಲ್ಲಿ ಅಡಕವಾದುವು: ಅವರ ಗೃಹ್ಯಸೂತ್ರಗಳು, ಧರ್ಮಸೂತ್ರಗಳು, ವೇದಾಂತ ಸೂತ್ರಗಳು, ಆಚಾರ ವ್ಯವಹಾರಗಳು, ಮತತತ್ತ್ವಗಳು, ಎಲ್ಲವೂ ಸೇರಿ ವಚನಸಾಹಿತ್ಯ ವೀರಶೈವಧರ್ಮಸಾಹಿತ್ಯವಾಗಿದೆ. ಈ ಧರ್ಮದಲ್ಲಿ ದೇವರು, ಭಕ್ತಿ, ಜ್ಞಾನ, ಮೊದಲಾದ ಆಧ್ಯಾತ್ಮ ವಿಚಾರಗಳೂ, ನೀತಿ, ಸಮಾಜ ರಚನೆ, ಸ್ತ್ರೀಯರ ಸ್ಥಾನ ಮೊದಲಾದ ಲೌಕಿಕ ವಿಚಾರಗಳೂ ನಿರೂಪಿತವಾಗಿರುವ ಕ್ರಮವನ್ನು ಮುಂದಿನ ಪುಟಗಳಲ್ಲಿ ವಿವರಿಸಿದ್ದೇವೆ.

---

೩ನೆಯ ಪ್ರಕರಣ

# ಪರವಸ್ತು—ದೇವರು

ಉಪನಿಷತ್ಕಾರರ ಮುಂದಿದ್ದ ಪ್ರಶ್ನೆಗಳೇ, ಸಮಸ್ಯೆಗಳೇ, ದೇಶ ಕಾಲಾದಿ ಭೇದಗಳಿಲ್ಲದೆ ಎಲ್ಲ ದರ್ಶನಕಾರರ ಮುಂದಿರುವ ಪ್ರಶ್ನೆಗಳು ಸಮಸ್ಯೆಗಳು. ಅವುಗಳಿಗೆ ವಚನಕಾರರು ಹೇಳಿರುವ ಉತ್ತರಗಳು ಉಪನಿಷತ್ಕಾರರ ಉತ್ತರಗಳೇ ಆಗಿವೆ. ಬಾಹ್ಯಪ್ರಪಂಚದ ವೈಚಿತ್ರ್ಯಗಳನ್ನು ನೋಡಿ ಆಶ್ಚರ್ಯಚಕಿತರಾಗಿ, ಕುತೂಹಲಾವಿಷ್ಟರಾಗಿ, ವಿಚಾರಪರರಾಗಿ ವಿಶ್ವದ ಮೂಲವನ್ನು, ಅದರ ಮರ್ಮವನ್ನು, ಕಂಡು ಹಿಡಿಯುವ ಪ್ರಯತ್ನವೊಂದು; ಮನುಷ್ಯನ ಇಂದ್ರಿಯಾದಿಗಳು ಮನಸ್ಸು ಪ್ರಾಣ—ಇವು ಹೇಗೆ ಕೆಲಸಮಾಡುತ್ತವೆ? ಇವುಗಳಿಗೆ ಚೈತನ್ಯವೆಲ್ಲಿಂದ ಬರುತ್ತದೆ? ಎಂದು ಆಲೋಚನೆಮಾಡಿ, ಅಂತರ್ಮುಖಿಗಳಾಗಿ, ಪ್ರತಿಬೋಧದಿಂದ ಆತ್ಮನನ್ನು ತಿಳಿಯುವ ಪ್ರಯತ್ನವೊಂದು; ಆ ವಿಶ್ವಾತ್ಮನಿಗೂ ಅಂತರಾತ್ಮನಿಗೂ ಇರುವ ಏಕಭಾವವನ್ನು, ಎಂದರೆ, ಬ್ರಹ್ಮಾಂಡ ಪಿಂಡಾಂಡಗಳಲ್ಲಿಯ ಚೈತನ್ಯಾತ್ಮರುಗಳ "ಏಕಮೇವಾದ್ವಿತೀಯಂ" ಎಂಬುದನ್ನು, ಅರ್ಥಮಾಡಿಕೊಳ್ಳುವ ಅನುಭವಿಸುವ ಪ್ರಯತ್ನವೊಂದು,—ಹೀಗೆ ಈ ಮೂರೂ ಪರವಸ್ತುವಿನ ಕಡೆಗೇ ಕೇಂದ್ರೀಕರಿಸಿವೆ.

* "ಕೇನೇಷಿತಂ ಪತತಿ ಪ್ರೇಷಿತಂ ಮನಃ ।
ಕೇನಪ್ರಾಣಃ ಪ್ರಥಮಃ ಪ್ರೈತಿಯುಕ್ತಃ ॥
ಕೇನೇಷಿತಾಂ ವಾಚಮಿಮಾಂ ವದನ್ತಿ ।
ಚಕ್ಷುಃ ಶ್ರೋತ್ರಂ ಕ ಉ ದೇವೋ ಯುನಕ್ತಿ ॥
ಶ್ರೋತ್ರಸ್ಯ ಶ್ರೋತ್ರಂ ಮನಸೋ ಮನೋ ಯದ್ ।
ವಾಚೋ ಹ ವಾಚಂ ಸ ಉ ಪ್ರಾಣಸ್ಯ ಪ್ರಾಣಃ ॥
ಚಕ್ಷುಷಶ್ಚಕ್ಷುರತಿ ಮುಚ್ಯ ಧೀರಾಃ ।
ಪ್ರೇತ್ಯಾಸ್ಮಾಲ್ಲೋಕಾದಮೃತಾ ಭವನ್ತಿ"

* "ಯತ್ಪ್ರಾಣೇನ ನಪ್ರಾಣತಿ ಯೇನ ಪ್ರಾಣಃ ಪ್ರಣೀಯತೇ ॥
ತದೇವ ಬ್ರಹ್ಮ ತ್ವಂ ವಿದ್ಧಿ ನೇದಂ ಯದಿದಮುಪಾಸತೇ ॥

---

* ಕೇನೋಪನಿಷತ್

ಯಾವುದು ಮನಸ್ಸು, ಪ್ರಾಣ, ಮಾತು—ಇವುಗಳಿಗೆ ಪ್ರೇರಕವಾಗಿದ್ದು ಅವುಗಳಿಂದ ಕೆಲಸ ಮಾಡಿಸುತ್ತದೆಯೊ, ಯಾವುದು ಕಣ್ಣು ಕಿವಿಗಳಿಗೆ ಆಜ್ಞೆ ಮಾಡುತ್ತದೆಯೊ, ಅದೇ ಪರಬ್ರಹ್ಮ. ಅದೇ ಪ್ರಾಣಕ್ಕೆ ಪ್ರಾಣ, ಕಣ್ಣಿಗೆ ಕಣ್ಣು, ಕಿವಿಗೆ ಕಿವಿ.

೧೬. "ತನುವಿಂಗೆ ತನುರೂಪಾಗಿ ತನುವಿಂಗಾಧಾರವಾದೆ. ಮನಕ್ಕೆ ಮನರೂಪಾಗಿ ಮನಕ್ಕೆ ನೆನಹಿನ ಶಕ್ತಿಯನಿತ್ತು ಮನಕ್ಕಾಧಾರವಾದೆ. ಪ್ರಾಣಕ್ಕೆ ಪ್ರಾಣರೂಪಾಗಿ ಪ್ರಾಣಕ್ಕಾಧಾರವಾದೆ....ನಿಜಗುರುಸ್ವತಂತ್ರಸಿದ್ಧಲಿಂಗೇಶ್ವರಾ"

೧೭. "ಕಣ್ಣೊಳಗೆ ಕಣ್ಣಿರ್ದು ಕಾಣಲರಿಯರಯ್ಯ! ಕಿವಿಯೊಳಗೆ ಕಿವಿಯಿರ್ದು ಕೇಳಲರಿಯರಯ್ಯ! ಘ್ರಾಣದೊಳಗೆ ಘ್ರಾಣವಿರ್ದು ಘ್ರಾಣಿಸಲರಿಯರಯ್ಯ! ಜಿಹ್ವೆಯೊಳಗೆ ಜಿಹ್ವೆಯಿರ್ದು ರುಚಿಸಲರಿಯರಯ್ಯ! ತ್ವಕ್ಕಿನೊಳಗೆ ತ್ವಕ್ಕಿರ್ದು ಸ್ಪರ್ಶನಮಾಡಲರಿಯರಯ್ಯ! ಪ್ರಾಣದೊಳಗೆ ಪ್ರಾಣವಿರ್ದು ಪ್ರಾಣನ ಪರಿಯನರಿಯರಯ್ಯ! ಕಾಯದೊಳಗೆ ಕಾಯವಿರ್ದು ಬಿಡದು ಬೇರಾಗದು. ಕೂಡಲ ಚೆನ್ನಸಂಗಮದೇವಾ ನೀವಿಕ್ಕಿದ ಅಣಕದ ತೊಡಕಿನ ಭೇದವ ಭೇದಿಸ ಬಾರದಯ್ಯ"

ಹೀಗೆ ಆಯಾ ಇಂದ್ರಿಯಗಳಿಗೆ ಚೈತನ್ಯದಾಯಕನಾಗಿ, ತಾನು ಮಾತ್ರ ಯಾವ ಇಂದ್ರಿಯಕ್ಕೂ ಗೋಚರಿಸದೆ ಆ ಪರಮಾತ್ಮನಿದ್ದಾನೆ.

೧೮. "ಅಡಬಾರದ ಬಯಲು, ನೋಡಬಾರದ ಬಯಲು, ನುಡಿಯ ಬಾರದ ಬಯಲು ಹಿಡಿಯ ಬಾರದ ಬಯಲು. ಈ ಒಡಲಿಲ್ಲದ ಬಯಲೊಳಗೆ ಅಡಗಿರ್ದ ಭೇದವ ಈ ಲೋಕದ ಜಡರೆತ್ತ ಬಲ್ಲರೈ ರಾಮನಾಥಾ"

೧೯. "ಕಣ್ಗೆ ಕಾಂಬಡೆ ರೂಪಲ್ಲ. ಕೈಗೆ ಸಿಲುಕುವಡೆ ದೇಹಿಯಲ್ಲ. ನಡೆದಡೆ ಗಮನಿಯಲ್ಲ. ನುಡಿದಡೆ ವಾಚಾಳನಲ್ಲ. ನಿಂದಿಸಿದವಗೆ ಹಗೆಯಲ್ಲ. ಹೊಗಳಿದವರಿಗೆ ಕೆಳೆಯಲ್ಲ. ಗುಹೇಶ್ವರನ ನಿಲವು ಮಾತಿನ ಮಾಲೆಗೆ ಸಿಲುಕುವುದೇ ಸಿದ್ಧರಾಮಯ್ಯ, ನೀನು ಮರುಳಾದೆಯಲ್ಲ!

ಹಾಗಾದರೆ ಒಡಲಿಲ್ಲದ ಬಯಲಿನ ಸ್ವರೂಪವೆಂತಹುದು? ಅದರೊಳಗೆ ಅಡಗಿರುವ ಭೇದವೆಂತಹುದು? ಶ್ರೋತ್ರಗೀತಗಳಿಗೆ ಪ್ರತ್ಯಕ್ಷನಾಗದ

---

೧೬. ಸ್ವ. ಸಿ. ವ ಪುಟ ೬೫. ೧೭. ಚ. ಬ. ವ. ಪುಟ ೯೦. (ಬ. ವ. ಪುಟ ೧೪೯ ರಲ್ಲಿಯೂ ಸ್ವಲ್ಪ ವ್ಯತ್ಯಾಸದಿಂದ ಈ ವಚನವಿದೆ) ೧೮. ವ.ಶಾ.ಸಾ.ಭಾಗ ೧.ಪೂ. ಪುಟ ೨೦. ೧೯. ವ. ಶಾ. ಸಾ. ಭಾಗ ೧. ಉ. ಪುಟ ೨೨೨.

ದೇಹವಿಲ್ಲದೆ ನಿರ್ದೇಹಿಯಾಗಿ ವಾಙ್ಮನಕ್ಕಗೋಚರನಾಗಿರುವ ಗುಹೇಶ್ವರನ ನಿಲವು ಎಂತಹುದು? ಗಾರ್ಗಿ ಯಾಜ್ಞ್ಯವಲ್ಕ್ಯರನ್ನು ಕುರಿತು, ವಿಶ್ವದ ಮೂಲವನ್ನು ಕೇಳಿದಾಗ, ಆಕಾಶಕ್ಕೂ ಆಧಾರವಾದುದು ಯಾವುದು? ಅದೆಲ್ಲಿಂದ ಬಂದಿತು? ಎಂದು ಕೇಳಿದಾಗ, ಬಂದ ಉತ್ತರದಂತೆಯೆ—

೨೦. "ಬ್ರಹ್ಮ ವಿಷ್ಣು ರುದ್ರ, ಈಶ್ವರ, ಸದಾಶಿವ ಪರಮೇಶ್ವರ ಎಂಬ ಸಂದಣಿ ತಲೆದೋರದ ಮುನ್ನ ಬಯಲೇ ಸ್ವರೂಪವಾಯಿತ್ತು. ಆ ಸ್ವರೂಪಿನ ನಡೆಯು ನುಡಿನುಡಿಸಬಾರದು. ನೋಡಬಾರದ ಬೆಳಗು, ಕೂಡಬಾರದ ಮೂರ್ತಿ ಅಖಂಡ ಅಪ್ರತಿಮ ಗುಹೇಶ್ವರಲಿಂಗದ ಬೆಳಗಿನ ಮೂಲವ ಲಿಂಗಸಂಗಿಗಳಲ್ಲದ ಮಿಕ್ಕಿನ ಅಂಗವಿಕಾರಿಗಳೆತ್ತ ಬಲ್ಲರು?"

ಎಂಬ ಉತ್ತರ ಬರುತ್ತದೆ. ಅದು ಎಲ್ಲಕ್ಕೂ ಮೂಲ, ಅದಕ್ಕೆ ಮೂಲವಿಲ್ಲ. ಅದು ಪರಮ ಸ್ವತಂತ್ರವಾದದ್ದು; ಅದಕ್ಕೆ ಅಧೀನವಾಗಿ, ಅದರ ಭಯದಿಂದ ಎಲ್ಲವೂ ನಡೆಯುತ್ತವೆ. ಆ ಪರವಸ್ತು ಮುವ್ವತ್ತಾರು ತತ್ತ್ವಗಳಿಗೆ ಮೀರಿದ್ದು, ನಿರಾಕಾರ, ನಿಷ್ಕಲ; ಅದಕ್ಕೆ ನಾಮರೂಪಕ್ರಿಯಾದಿಗಳಿಲ್ಲ; ಅದು ಬ್ರಹ್ಮ ವಿಷ್ಣು ರುದ್ರಾದಿಗಳಲ್ಲ.

* "ಅಶಬ್ದಮಸ್ಪರ್ಶಮರೂಪಮವ್ಯಯಂ |
ತಥಾऽರಸಂ ನಿತ್ಯಮಗನ್ಧವಚ್ಚಯತ್ ||
ಅನಾದ್ಯನಂತಂ ಮಹತಃ ಪರಂ ಧ್ರುವಂ |
ನಿಚಾಯ್ಯ ತನ್ಮೃತ್ಯುಮುಖಾತ್ಪ್ರಮುಚ್ಯತೇ" ||

ಎಂದು ಯಮನು ನಚಿಕೇತನಿಗೆ ಹೇಳಿದಂತೆ ಮಹತ್‌ತತ್ತ್ವಕ್ಕೆ ಮೀರಿದುದಾಗಿಯೂ, ನಿತ್ಯವಾಗಿಯೂ, ಅನಾದಿ ಅನಂತಗಳಾಗಿಯೂ ಧ್ರುವವಾಗಿಯೂ ಪರವಸ್ತು ಇದೆ.

೨೧. "ಆದಿ ಅನಾದಿ ಇಲ್ಲದಂದು ಹಮ್ಮು ಬಿಮ್ಮುಗಳಿಲ್ಲದಂದು ಸುರಾಳ ನಿರಾಳ ಇಲ್ಲದಂದು ಶೂನ್ಯ ನಿಶ್ಶೂನ್ಯವಿಲ್ಲದಂದು ಸಚರಾಚರವೆಲ್ಲ ರಚನೆಗೆ ಬಾರದಂದು ಗುಹೇಶ್ವರನೊಬ್ಬನೇ ಇದ್ದೆಯಲ್ಲ, ಇಲ್ಲದಂತೆ"

---

೨೦. ವ. ಶಾ. ಸಾ. ಭಾಗ ೧. ಪೂ. ಪುಟ ೮.
೨೧. ವ. ಶಾ. ಸಾ. ಭಾಗ ೧. ಪೂ. ಪುಟ ೨.

* ಕಠೋಪನಿಷತ್

೨೨. "ತಾಯಿತಂದೆಯಿಲ್ಲದ ಕಂದಾ! ನಿನಗೆ ನೀನೆ ಹುಟ್ಟಿ ಬೆಳೆದೆಯಲ್ಲ! ನಿನ್ನ ಪರಿಣಾಮವೇ ನಿನಗೆ ಪ್ರಾಣ ತೃಪ್ತಿಯಾಗಿ ಇದ್ದೆಯಲ್ಲಾ! ಭೇದಕರಿಗೆ ಅಭೇದ್ಯ ನಾಗಿ ನಿನ್ನ ನೀನೇ ಬೆಳಗುತಿದ್ದೆಯಲ್ಲಾ! ನಿನ್ನ ಚಾರಿತ್ರ ನಿನಗೆ ಸಹಜ ಗುಹೇಶ್ವರಾ"

'ನಿನ್ನ ನೀನೇ ಬೆಳಗುತಿದ್ದೆಯಲ್ಲಾ' ಎಂದು ವಚನಕಾರರು ಹೇಳಿ ಪರವಸ್ತುಸ್ವರೂಪವನ್ನು ಚೆನ್ನಾಗಿ ವ್ಯಕ್ತಗೊಳಿಸಿದ್ದಾರೆ. ಸೂರ್ಯಚಂದ್ರಾದಿ ಗಳು, ನಕ್ಷತ್ರಗಳು, ಅಗ್ನಿ, ಮೊದಲಾದುವುಗಳ ಯಾವ ಕಾಂತಿಯೂ ಅಲ್ಲಿಲ್ಲ. ಸ್ವಯಂಪ್ರಕಾಶಿತನು, ತನ್ನ ಬೆಳಕಿನಿಂದ ಉಳಿದುವೆಲ್ಲ, ಸೂರ್ಯ ಚಂದ್ರಾದಿ ಗಳೆಲ್ಲ ಬೆಳಗಬೇಕು. ಅವುಗಳ ಸೃಷ್ಟಿಯೇ ಇನ್ನೂ ಆಗಿಲ್ಲವಾದುದರಿಂದ —ಸಚರಾಚರವೆಲ್ಲ ರಚನೆಗೆ ಬಾರದೆಂದು—ಇನ್ನೂ ಯಾವ ಹೆಸರುಗಳೂ ಆಕಾರಗಳೂ ಕ್ರಿಯೆಗಳೂ ಇಲ್ಲವಾದುದರಿಂದ, ತನ್ನ ತಾನೇ ಬೆಳಗುತ್ತ ಲಿದ್ದಾನೆ.

"ತಮೇವ ಭಾನ್ತಮನುಭಾತಿ ಸರ್ವಂ!
ತಸ್ಯ ಭಾಸಾ ಸರ್ವಮಿದಂ ವಿಭಾತಿ"॥*

ಗ್ರಹನಕ್ಷತ್ರಾದಿಗಳು ರೂಪುಗೊಳ್ಳುವ ಮುನ್ನ ಅದೊಂದು ನಿರಾಕಾರದ ಜ್ಯೋತಿರ್ಮಯ ನೀಹಾರಕ ಸ್ಥಿತಿಯಲ್ಲಿ ಎಲ್ಲವೂ ಇರುವುವೆಂದೂ ಕಾಲ ಕ್ರಮದಲ್ಲಿ ಅಖಂಡವಾದ ಅತ್ಯದ್ಭುತವಾದ ನೀಹಾರಕದಿಂದ ಬೇರ್ಪಟ್ಟು ವಿವಿಧ ಬ್ರಹ್ಮಾಂಡಗಳಾಗಿ ತೋರಿಬರುವುವೆಂದೂ ಜ್ಯೋತಿಶ್ಶಾಸ್ತ್ರಜ್ಞರು ಹೇಳುತ್ತಾರೆ. ಹೀಗೆಯೇ ಬ್ರಹ್ಮ ವಿಷ್ಣು ರುದ್ರಾದಿಗಳು ಉತ್ಪನ್ನವಾಗುವ ಮೊದಲು ಪರವಸ್ತು ಜ್ಯೋತಿಯಾಗಿ ನೀಹಾರಕ ಸ್ಥಿತಿಯಲ್ಲಿರುವುದೆಂದು ಕಲ್ಪಿಸಿಕೊಳ್ಳಬಹುದಾಗಿದೆ. ಇಂಥ ಸ್ಥಿತಿಯಲ್ಲಿ

೨೩. "ಅಸುರರ ಮಾಲೆಗಳಿಲ್ಲ, ತ್ರಿಶೂಲ ಡಮರುಗವಿಲ್ಲ, ಬ್ರಹ್ಮ ಕಪಾಲವಿಲ್ಲ, ಭಸ್ಮ ಭೂಷಣನಲ್ಲ, ವೃಷಭವಾಹನನಲ್ಲ, ಋಷಿಗಳೊಡನಿದ್ದಾತನಲ್ಲ. ಎಸಗುವ ಸಂಸಾರದ ಕುರುಹಿಲ್ಲದಾತಂಗೆ ಹೆಸರಾವುದೂ ಇಲ್ಲವೆಂದನಂಬಿಗ ಚೌಡಯ್ಯ"

೨೪. "ಶೂನ್ಯಹೃದಯ ನಿಶ್ಶೂನ್ಯವಿಲ್ಲದಂದು, ಬ್ರಹ್ಮ ವಿಷ್ಣು ಮಹೇಶ್ವರರಿಲ್ಲದಂದು ಹದಿನಾಲ್ಕು ಭುವನ ದಿಗ್ವಳಯವಿಲ್ಲದಂದು, ಕೂಡಲ ಚೆನ್ನಸಂಗನೆಂಬ ಹೆಸರು ಮುನ್ನಿಲ್ಲದಂದು"

---

೨೨. ವ. ಶಾ ಸಾ. ಭಾಗ ೧. ಪೂ. ಪುಟ ೧೪. * ಕಠೋಪನಿಷತ್ತು

೨೩. ಅಂ. ಚೌ. ವ. ಪುಟ ೨. ೨೪. ವ. ಶಾ. ಸಾ. ಭಾಗ ೧. ಪೂ. ಪುಟ ೩.

೨೫. “ಅಯ್ಯಾ ನಾಟಕನಲ್ಲ, ಬೂಟಕನಲ್ಲ, ಶೀಲಿಗನಲ್ಲ, ಕಪಟನಾಟಕನಲ್ಲ, ರುಂಡ ಮಾಲಿಗ ಹುಲಿಚರ್ಮ ಗಜಚರ್ಮನಲ್ಲ, ದಕ್ಷಧ್ವರನಲ್ಲ, ತ್ರಿಪುರಾರಿಯಲ್ಲ, ನಂದಿ ವಾಹನನಲ್ಲ, ಗಿರಿಜಾವಲ್ಲಭ ಪಾರ್ವತೀಪ್ರಿಯನಲ್ಲ, ಯೋಗಿ ಜೋಗಿಯಲ್ಲ, ಶ್ರವಣ ಸಂನ್ಯಾಸಿಯಲ್ಲ, ಕಾಳಾಮುಖಿಯಲ್ಲ, ಪಾಶುಪತಿಯಲ್ಲ, ನೋಡಾ ನಿರವಯ(ವ) ಶೂನ್ಯಲಿಂಗಮೂರ್ತಿ ಗುಹೇಶ್ವರ ಲಿಂಗವು”

ಆದುದರಿಂದ ಪರವಸ್ತು—ದೇವರು, ಎನ್ನುವುದು ಬ್ರಹ್ಮನಲ್ಲ, ವಿಷ್ಣುವಲ್ಲ, ಮಹೇಶ್ವರನಲ್ಲ, ಇವುಗಳೆಲ್ಲರಿಗೂ ಮೀರಿದ್ದು. ಆಕಾಶದಲ್ಲಿ ಮೋಡಗಳಾಗಿ ಕಾಣುವ ಮೊದಲು ಹಬೆ ಅಗೋಚರವಾಗಿ, ಇಲ್ಲವೆಂದು ಹೇಳಲಿಕ್ಕಾಗದೆ ಇದ್ದುದಾಗಿ, ಇದೆಯೆಂದು ಹೇಳುವುದಕ್ಕಾಗದೆ ಅವ್ಯಕ್ತವಾಗಿ, ಹೇಗೆ ವರ್ಣನಾತೀತವಾಗಿರುವುದೋ ಹಾಗೆಯೇ ಎಲ್ಲ ದೇವರುಗಳ ಎಲ್ಲ ಸೃಷ್ಟಿಗಳ ಯಾವ ಕಲ್ಪಿತವೂ ಇಲ್ಲದೆ, ಆದರೆ ಎಲ್ಲಕ್ಕೂ ರೂಪು ಕೊಡುವ, ಚೈತನ್ಯ ಕೊಡುವ, ಪರವಸ್ತುವಾಗಿರುತ್ತದೆ.

ಆದುದರಿಂದ ಹರಿ ಹೆಚ್ಚೋ ಹರ ಹೆಚ್ಚೋ ಎಂದು ವಾದಮಾಡುವುದು ಮೂಢತನ; “ನಮ್ಮ ದೇವರೇ ಸತ್ಯದ ದೇವರು, ನಿಮ್ಮದೆಲ್ಲ ಅಸತ್ಯದ ದೇವರು” ಎಂದು ಮುಂತಾಗಿ ಸ್ವಮತಪ್ರಚಾರಕ್ಕಾಗಿ ಹೊರಡುವುದು ಅವಿವೇಕ. ಜ್ಞಾನಿಗಳಾದವರು ದೇವರ ಸತ್ಯಸ್ವರೂಪವನ್ನು ತಿಳಿದವರಾದ್ದರಿಂದ, ಒಂದು ಪಂಗಡದವರಿಗೆ ಮಾತ್ರವಲ್ಲ, ಒಂದು ಮತದವರಿಗೆ ಮಾತ್ರವಲ್ಲ, ಇಡಿಯ ವಿಶ್ವಕ್ಕೆ ಒಬ್ಬನೇ ದೇವರಿದ್ದಾನೆಂದು ಹೇಳುವರು. ಆದರೆ ಪರವಸ್ತುವನ್ನು ಹೀಗೆ ಗ್ರಹಿಸುವುದೂ, ಹೀಗೆ ಉಪಾಸನೆ ಮಾಡುವುದೂ, ಕೆಲವರಿಗೆ ಮಾತ್ರ ಸಾಧ್ಯ. ಸೃಷ್ಟಿಯ ಹಿಂದಕ್ಕೆ ಹೋಗದೆ, ಸೃಷ್ಟಿಯಲ್ಲಿ ದೇವರನ್ನು ಕಾಣುವುದು ಕೆಳಗಿನ ಮೆಟ್ಟಲಾಗಿದೆ. ಸೃಷ್ಟಿ ಸ್ಥಿತಿ ಲಯ, ಈ ಮೂರಕ್ಕೂ ಕಾರಣಕರ್ತನಾದ ದೇವರು, ತ್ರಿಮೂರ್ತ್ಯಾತ್ಮಕನಾಗಿ, “ಅಣೋರಣೀಯಾನ್, ಮಹತೋ ಮಹೀಯಾನ್” ಆಗಿದ್ದಾನೆ.

೨೬. “ಎಲ್ಲೆಲ್ಲಿ ನೋಡಿದಡಲ್ಲಲ್ಲಿ ನೀನೇ ದೇವಾ. ಪಿಂಡಾಂಡಗಳೊಳಗೆಲ್ಲ ನೀನೇ ದೇವಾ. ಮಹದಾಕಾಶ ರೂಪ, ನಿರುಪಾಧಿಕ ಪರಂಜ್ಯೋತಿ ನೀನೇ ದೇವಾ. ಉಪಮಾತೀತ ವಾಙ್ಮನಕ್ಕಗೋಚರ ನೀನೇ ದೇವಾ. ಸ್ವಾನುಭೂತಿ ಸ್ವರೂಪ ಶರಣಜನಮನೋವಲ್ಲಭ ನೀನೇ ದೇವಾ, ನಿಜಗುರುಸ್ವತಂತ್ರ ಸಿದ್ಧಲಿಂಗೇಶ್ವರಾ”

---

೨೫. ವ. ಶಾ. ಸಾ. ಭಾಗ ೧. ಪೂ. ಪುಟ ೧.    ೨೬. ಸ್ವ. ಸಿ. ವ. ಪುಟ ೯೬.

೨೭. ಅಣುವಿಂಗೆ ಅಣು, ಮಹತ್ತಿಂಗೆ ಮಹತ್ತಾಗಿ, ಎಣಿಸಬಾರದ ಬಹುಳ ಬ್ರಹ್ಮಕ್ಕೆ ಎಣೆಯಾವುದು ಹೇಳಾ? ಅಗಣಿತನಕ್ಷಯ, ಸರ್ವಜೀವಮನಃಪ್ರೇರಕ, ಸರ್ವಜ್ಞ, ಏಕೋದೇವ ಸಂವಿತ್ ಪ್ರಕಾಶ ಪರಮೇಶ್ವರನು ಮನವೆಂಬ ದರ್ಪಣದೊಳಗೆ ಚಿಂದ್ಘಾಕಾಶ ರೂಪವಾಗಿ ಬೆಳಗಿ ತೋರುವ ಶಿವನ ಅಂಪವ ತಿಳಿದು ನೋಡಿ ಕೂಡ ಬಲ್ಲಾತನೇ ಪರಶಿವಯೋಗಿ. ಆತ ಜನನ ಮರಣ ವಿರಹಿತ, ಆತನೇ ಸರ್ವಜ್ಞನು, ಆತನೇ ನಿಜಗುರುಸ್ವತಂತ್ರಸಿದ್ಧಲಿಂಗೇಶ್ವರನು ತಾನೇ ಬೇರಿಲ್ಲಾ".

೨೮. "ಮಣಿಗಳ ಸೂತ್ರದಂತೆ, ತ್ರಿನಯನ, ನೀನಿಪ್ಪೆಯಯ್ಯ. ಎಣಿಸುವಡೆ ತನು ಭಿನ್ನ, ಆತ್ಮನೊಬ್ಬನೇ. ಅಣುರೇಣು ಮಧ್ಯದಲ್ಲಿ ಗುಣಭರಿತ ನೀನೆಂದು ಮಣಿವುತಿರ್ಪೆನಯ್ಯಾ ರಾಮನಾಥಾ"

ಹೀಗೆ ಅಣುರೇಣುಗಳಲ್ಲಿಯೂ, ಪರ್ವತಾದಿಗಳಲ್ಲಿಯೂ, ಎಲ್ಲದರಲ್ಲಿಯೂ ವ್ಯಾಪಿಸಿಕೊಂಡಿರುವುದರಿಂದ, ಆ ಪರಮಾತ್ಮನಿಲ್ಲದೆಡೆಯಿಲ್ಲವಾದುದರಿಂದ

"ಈಶಾವಾಸ್ಯಮಿದಂ ಸರ್ವಂ ಯತ್ಕಿಂಚ ಜಗತ್ಯಾಂ ಜಗತ್" *

ಆಗಿರುವುದು. ಇದರಿಂದ ಮುಂದೆ ಒಬ್ಬ ವಿರಾಟ್‌ಪುರುಷನ ಕಲ್ಪನೆಯಾಗಿ ನಿರಾಕಾರವಾದುದಕ್ಕೆ ಆಕಾರ ದೊರೆತು ಉಪಾಸನೆಗೆ ಅನುಕೂಲವಾಗಿದೆ.

೨೯. "ಎತ್ತೆತ್ತ ನೋಡಿದಡತ್ತತ್ತ ನೀನೇ ದೇವಾ. ಸಕಲ ವಿಸ್ತಾರದ ರೂಹು ನೀನೇ ದೇವಾ, ವಿಶ್ವತೋ ಬಾಹು ನೀನೇ ದೇವಾ, ವಿಶ್ವತೋಚಕ್ಷು ನೀನೇ ದೇವಾ, ವಿಶ್ವತೋಮುಖ ನೀನೇ ದೇವಾ, ವಿಶ್ವತೋಪಾದ ನೀನೇ ದೇವಾ, ಕೂಡಲ ಸಂಗಮ ದೇವಾ"

ಆದರೆ ಈ ವಿರಾಟ್ ಪುರುಷತ್ವವು ಕ್ರಮವಾಗಿ ಮತದ ಛಾಯೆಯನ್ನೊಳಕೊಂಡು ಮಹೇಶ್ವರನ ಮೂಲರೂಪವಾಗಿ ಪರಿವರ್ತನ ಹೊಂದಿದೆ.

೩೦. ಪಾತಾಳದಿಂದ ಕೆಳಗೆ ಪಾದ, ಸುವರ್ಲೋಕದಿಂದ ಮೇಲೆ ಉತ್ತಮಾಂಗ. ಬ್ರಹ್ಮಾಂಡವೇ ಮಕುಟ, ಗಗನವೇ ಮುಖ, ಚಂದ್ರಾರ್ಕಾಗ್ನಿಗಳೇ ನೇತ್ರ, ದಶದಿಕ್ಕುಗಳೇ ಬಾಹುಗಳು, ಮಹದಾಕಾಶವೇ ಶರೀರ, ತರುಗಳೇ ತನೂರುಹ, ಶೂನ್ಯವೇ ಕರಸ್ಥಳದ ಲಿಂಗ, ನಕ್ಷತ್ರಗಳೇ ಪುಷ್ಪ, ನಿತ್ಯವೇ ಪೂಜೆ, ಮೇಘವೇ

---

೨೭. ಸ್ವ. ಸಿ. ವ. ಪುಟ ೯೫ ೨೮. ವ. ಶಾ. ಸಾ. ಭಾಗ ೧. ಪೂ. ಪುಟ ೨೨.
* ಈಶೋಪನಿಷತ್ತು ೨೯. ಬ. ವ. ಪುಟ ೭೯.
೩೦. ವ. ಶಾ. ಸಾ. ಭಾಗ ೧. ಪೂ. ಪುಟ ೧೦.

ಜಡೆ, ಬೆಳುದಿಂಗಳೇ ವಿಭೂತಿ, ಪರ್ವತಗಳೇ ರುದ್ರಾಕ್ಷಿ, ಪಂಚಬ್ರಹ್ಮವೇ ಪಂಚಾಕ್ಷರ, ತತ್ತ್ವಂಗಳೇ ಜಪಮಾಲೆ, ಮೇರುವೇ ದಂಡ, ಜಗವೇ ಕಂಥಾ, ಅನಂತನೇ ಕೌಪೀನ, ತ್ರಿಗುಣ ಒಂದಾದುದೇ ಕರ್ಪೂರ, ಚತುರ್ಯುಗಂಗಳೇ ಗಮನ, ಮಿಂಚೇ ಅಂಗರುಚಿ, ಸಿಡಿಲೇ ಧ್ವನಿ, ವೇದಾಗಮವೇ ವಾಕ್ಯ, ಜ್ಞಾನ ಮುದ್ರೆಯೇ ಉಪದೇಶ, ಪೃಥ್ವಿಯೇ ಸಿಂಹಾಸನ, ದಿವಾರಾತ್ರಿಯೇ ಅರಮನೆ, ಶಿವಜ್ಞಾನವೇ ಐಶ್ವರ್ಯ, ನಿರಾಳವೇ ತೃಪ್ತಿ, ಇಂಥ ಚೈತನ್ಯಜಂಗಮಕ್ಕೆ ನಾನು ನಮೋನಮೋ ಎನುತಿರ್ದೆನಯ್ಯ ಸೌರಾಷ್ಟ್ರ ಸೋಮೇಶ್ವರಾ''

ಹೀಗೆ ಪರಿವರ್ತನವಾಗಿ, ಸೃಷ್ಟಿ ತನ್ನ ದೇಹಭಾಗಗಳಾಗಿರುವಂತೆ ವಿರಾಟ್‌ರೂಪವಾಗಿದೆ. ಇಲ್ಲಿ ಹರಿಬ್ರಹ್ಮಾದಿ ದೇವತೆಗಳಿಗೆ ಉತ್ಪತ್ತಿ. ಪರಮೇಶ್ವರ, ಪರಶಿವ, ಎನ್ನುವವನೇ ದೇವರು. ಆತನು ಎಲ್ಲರಿಗಿಂತಲೂ ಹೆಚ್ಚು; ಅವನ ಸಮಾನರು ಯಾರೂ ಇಲ್ಲ. ತ್ರಿಮೂರ್ತಿಗಳಲ್ಲಿ ಒಬ್ಬನು ಮೇಲೆನಿಸಿ ಆ ಒಬ್ಬನು ಶಿವನಾಗಿ, ಉಳಿದವರೆಲ್ಲ ಆತನನ್ನು ಓಲೈಸಿ ಕೊಂಡಿರುವರೆಂದು ನಂಬಿಕೆ ಬಂದಿದೆ. ದೇವತೆಗಳಲ್ಲಿರುವ ಶಕ್ತಿಯನ್ನು ಕೊಟ್ಟವನು ಶಿವನು. ತನ್ನ ಶಕ್ತಿಯ ಒಂದಂಶವನ್ನು ಅವರಲ್ಲಿಟ್ಟಿರುವುದ ರಿಂದಲೇ ಅವರು ತಮ್ಮ ಕರ್ತವ್ಯಗಳನ್ನು ನಿರ್ವಹಿಸ ಬಲ್ಲವರಾಗಿದ್ದಾರೆ; ಮತ್ತು ಪರಬ್ರಹ್ಮದ ವಿಚಾರದಲ್ಲಿ ಹೇಳಿದ

* "ಭಯಾದಸ್ಯಾಗ್ನಿಸ್ತಪತಿ ಭಯಾತ್ತಪತಿ ಸೂರ್ಯಃ ।
ಭಯಾದಿಂದ್ರಶ್ಚ ವಾಯುಶ್ಚ ಮೃತ್ಯುರ್ಧಾವತಿ ಪಂಚಮಃ" ॥

ಎನ್ನುವುದೆಲ್ಲ ಶಿವನ ಪರವಾಗಿಯೇ ಪರಿಣಾಮ ಹೊಂದುತ್ತವೆ.

೩೧. "ನೆಲದೀಪದೊಡೆಯನು, ಜಲತಂಪಿನೊಡೆಯನು, ಹಿರಿಯಪೆಂಪಿನೊಡೆಯನು, ಅಗ್ನಿ ಉಷ್ಣದೊಡೆಯನು, ಚಂದ್ರಕಾಂತದೊಡೆಯನು, ಸೂರ್ಯಕಾಂತದೊಡೆ ಯನು, ಸಕಲ ದೈವಂಗಳಿಗೆ ಆಯುಷ್ಯ ಭಾಷೆಯ ಕೊಟ್ಟ ಭೋಗದೊಡೆ ಯನು ಜಗತ್ಪ್ರಭುನೊಡ್ಡಳಾ''

ನಮ್ಮ ಇಂದ್ರಿಯಗಳಲ್ಲಿರುವ ತತ್ತ್ವಾಭಿಮಾನಿಗಳು ಯಾವ ಶಕ್ತಿ ಯನ್ನು ತೋರುತ್ತಿರುವರೋ ಆ ಶಕ್ತಿಯೆಲ್ಲ ಮೂಲತಃ ಪರಮೇಶ್ವರನದು. ದೇವತೆಗಳು ಅಹಂಕಾರದಿಂದ ಮೈಮರೆತು ತಮ್ಮ ಶಕ್ತಿಯೆಂದು ಗರ್ವಿಸಿದರೆ ಅವರೂ ಕೂಡ ನಮ್ಮಂತೆಯೇ ಕೆಡುತ್ತಾರೆ. ಇಂದ್ರ ಅಗ್ನಿ ವಾಯುಗಳಿಗಿಂತ

* ಕಠೋಪನಿಷತ್ತು   ೩೧. ವ. ಶಾ. ಸಾ. ಭಾಗ ೧. ಪೂ. ಪುಟ ೧೩.

ಪ್ರಬಲನಾದವನು ಬೇರೊಬ್ಬನಿದ್ದಾನೆಂದೂ, ಆ ಬೇರೊಬ್ಬನೇ ಪರಬ್ರಹ್ಮವೆಂದೂ ಕೇನೋಪನಿಷತ್ತಿನಲ್ಲಿ ಹೇಳಿರುವ ಕಥೆ ಪ್ರಕಾರಾಂತರವಾಗಿ ಶಿವನ ಪರವಾಗಿ ಬಂದು, ಹರಿಬ್ರಹ್ಮಾದಿಗಳಿಗಿಂತ ಶಿವನು ಪ್ರಬಲನೆಂದು ಹಲವಾರು ಕಥೆಗಳು ಶೈವಪುರಾಣಗಳಲ್ಲಿ ಗೋಚರಿಸುತ್ತವೆ.

೩೨. "ಸರ್ಪನೂ, ಕೂರ್ಮನೂ, ದಿಕ್ಕರಿಗಳೆಂಟೂ, ಭೂಮಿಯ ಹೊತ್ತಿರ್ದಹರೆಂಬ ಅಹರ್ನಿಶ ಹೊತ್ತಿರ್ಪವರಿಗೆ ಅತ್ತಲಾಧಾರ, ಇತ್ತಲಾಧಾರ. ಉತ್ತರ ಕೊಡುವವರಿಗೆ ಇಕ್ಕುವೆ ಮುಡಿಗೆಯ, ಎತ್ತುವರುಳ್ಳೊಡೆ ತೋರಿರೈ ರಾಮನಾಥಾ"

ಆದಿಶೇಷ, ಆದಿಕೂರ್ಮ, ಅಷ್ಟದಿಗ್ಗಜಗಳು ತಮ್ಮ ಸ್ವಂತ ಶಕ್ತಿಯಿಂದ ಧರಿಸಿಲ್ಲ, ಶಿವನು ಕೊಟ್ಟ ಶಕ್ತಿಯಿಂದ ಹೊತ್ತುಕೊಂಡಿವೆ. ಆ ಶಿವನು ಹೀಗೆ ಸರ್ವಶಕ್ತನಾಗಿದ್ದಾನೆ. ಆತನ ಕೃತಿಗಳೂ ಸೃಷ್ಟಿಗಳೂ ಕೂಡ ಅತ್ಯಾಶ್ಚರ್ಯಕರವಾದುವು.

೩೩. "ಮರದೊಳಗಣ ಪತ್ರ ಫಲಂಗಳು ಮರ ಕಾಲವಶದಲ್ಲಿ ತೋರುವಂತೆ ಹರನೊಳಗಣ ಪ್ರಕೃತಿ ಸ್ವಭಾವಂಗಳು ಹರಭಾವದಿಚ್ಛೆಗೆ ತೋರುವುವು. ಲೀಲೆಯಾದೊಡೆ ಉಮಾಪತಿ, ಲೀಲೆ ತಪ್ಪಿದೊಡೆ ಸ್ವಯಂಭು ಗುಹೇಶ್ವರಾ"

ಮರದೊಳಗಣ ಚೈತನ್ಯದಿಂದ ಮರಕ್ಕೆ ಸೇರಿದಂತೆ ಪತ್ರಫಲಂಗಳು ಕಾಣಿಸಿಕೊಳ್ಳುತ್ತವೆ. ದೇವರು ಸೃಷ್ಟಿಲೀಲೆಯನ್ನು ಕೈಕೊಳ್ಳುವಾಗ ಉಮಾಪತಿಯಾಗಿ ಶಕ್ತಿಯನ್ನು ವ್ಯಕ್ತಿಗೊಳಿಸಿ, ಪ್ರಕೃತಿಯ ಸಾಹಚರ್ಯೆಯನ್ನು ಪಡೆಯುತ್ತಾನೆ; ಸೃಷ್ಟಿಸಂಹಾರ ಕಾಲದಲ್ಲಿ ಎಲ್ಲವನ್ನೂ ಸೆಳೆದುಕೊಂಡು ಪ್ರಕೃತಿಶಕ್ತಿಗಳು ಕಾಣದಂತೆ ಸ್ವಯಂಭುವಾಗಿ ನಿಲ್ಲುತ್ತಾನೆ.

೩೪. "ಘನಗಂಭೀರ ಮಹಾ ವಾರಿಧಿಯಲ್ಲಿ ಫೇನ ತರಂಗ ಬುದ್ಬುದಗಳುದಯವಲ್ಲದೆ, ಬೇರಾಗ ಬಲ್ಲವೇ? ಆತ್ಮನೆಂಬ ಅಂಬುಧಿಯಲ್ಲಿ ಸಕಲ ಬ್ರಹ್ಮಾಂಡ ಕೋಟಿಗಳಾದವಲ್ಲದೆ ಬೇರಾಗಬಲ್ಲವೇ? ಇದು ಬೇರೆಂಬ ಅರಿಮರುಳುಗಳನೇನೆಂಬೆ? ವಿಶ್ವವವನರಿದು ನೋಡಲು, ಸಿಮ್ಮಲಿಗೆಯ ಚೆನ್ನರಾಮನೆಂಬ ಲಿಂಗವು ಬೇರಿಲ್ಲ"

ಇದರಲ್ಲಿ ಅದ್ವೈತಭಾವವನ್ನು ನೋಡಬಹುದು. ಆದರೆ ಇತರ ವಚನಕಾರರು ಈ ಅಭಿಪ್ರಾಯವನ್ನು ಅನುಮೋದಿಸುವುದಿಲ್ಲ. ಅದನ್ನು

೩೨. ವ. ಶಾ. ಸಾ. ಭಾಗ ೧. ಪೂ. ಪುಟ ೧೫. ೩೩. ವ. ಶಾ. ಸಾ. ಭಾಗ ೧. ಪೂ. ಪುಟ ೪.
೩೪. ವ. ಶಾ. ಸಾ. ಭಾಗ ೧. ಪೂ. ಪುಟ ೫.

ಮುಂದಿನ ಪುಟಗಳಲ್ಲಿ ವಿವರಿಸುತ್ತೇವೆ. ಪರಮಾತ್ಮನೇ ವಿಶ್ವವಲ್ಲ; ಎಲ್ಲದರಲ್ಲಿಯೂ, ಎಲ್ಲರಲ್ಲಿಯೂ ಅಂತಸ್ಥನಾಗಿದ್ದಾನೆ. ಹೀಗೆ ಅಂತಸ್ಥನಾಗಿದ್ದು ದೊಡ್ಡ ಸಮಸ್ಯೆಯನ್ನು ತಂದೊಡ್ಡಿ ಆಟ ಕಟ್ಟಿಸುತ್ತಿದ್ದಾನೆ.

೩೫. "ಮರದೊಳಗಣ ಮಂದಾಗ್ನಿಯ ಉರಿಯದಂತಿರಿಸಿದೆ. ನೊರೆವಾಲೊಳಗೆ ತುಪ್ಪವ ಕಂಪಿಲ್ಲದಂತಿರಿಸಿದೆ. ಶರೀರದೊಳಗಾತ್ಮನ ಕಾಣದಂತಿರಿಸಿದೆ. ನೀ ಬೆರಸುವ ಭೇದಕ್ಕೆ ಬೆರಗಾದೆನ್ನೈ ರಾಮನಾಥಾ"

೩೬. "ಶಿಲೆಯೊಳಗಣ ಪಾವಕನಂತೆ, ಉದಕದೊಳಗಣ ಪ್ರತಿಬಿಂಬದಂತೆ, ಬೀಜದೊಳಗಣ ವೃಕ್ಷದಂತೆ, ಶಬ್ದದೊಳಗಣ ನಿಶ್ಶಬ್ದದಂತೆ ಗುಹೇಶ್ವರಾ ನಿಮ್ಮ ಶರಣ ಸಂಬಂಧ"

೩೭. "ನೆಲದ ಮರೆಯ ನಿಧಾನದಂತೆ, ಮುಗಿಲ ಮರೆಯಲಡಗಿರ್ದ ಮಿಂಚಿನಂತೆ, ಬಯಲ ಮರೆಯಲಡಗಿರ್ದ ಮರೀಚಿನಂತೆ, ಕಂಗಳ ಮರೆಯಲಡಗಿರ್ದ ಬೆಳಗಿನಂತೆ ಗುಹೇಶ್ವರಾ ನಿಮ್ಮ ನಿಲವು"

ಎಂದು ಹಲವು ಬಗೆಯ ಉಪಮಾನಗಳಿಂದ ಪರಮಾತ್ಮನು ಅಂತಸ್ಥನಾಗಿರುವುದನ್ನು ವರ್ಣಿಸಿದ್ದಾರೆ. ಮರ, ಶಿಲೆ, ಮೊದಲಾದುವನ್ನು ಉಜ್ಜುವಾಗ ಬೆಂಕಿಯುತ್ಪನ್ನವಾಗುವುದು ತಿಳಿದಿದೆಯಷ್ಟೆ. ಈ ಬೆಂಕಿ ಹೊರಗಡೆಯಿಂದ ಬಂದುದಲ್ಲ, ಒಳಗಿದ್ದುದೇ ಹೀಗೆ ವ್ಯಕ್ತವಾಯಿತು. ಪರಮಾತ್ಮ ನಮ್ಮಲ್ಲಿ ಪಿಂಡಸ್ಥವಾಗಿದ್ದಾನೆ; ಸಾಧನೆಯಿಂದ ಕಾಣಬಹುದಾಗಿದೆ. ಪರಮಾತ್ಮ ನಮ್ಮಲ್ಲಿ ಅಡಗಿದ್ದರೂ ನಮ್ಮ ಪ್ರಕೃತಿ ಧರ್ಮಗಳು ಆತನನ್ನು ಹೊದ್ದಲಾರವು, ನಮ್ಮ ಪುಣ್ಯಪಾಪಗಳು ಆತನನ್ನು ಬಾಧಿಸಲಾರವು. ನೀರಿನಲ್ಲಿ ಕಾಣುವ ಪ್ರತಿಬಿಂಬಕ್ಕೆ ನೀರಿನ ಗುಣಧರ್ಮಗಳು ಹೊದ್ದಲಾರವಷ್ಟೆ. ಪಿಂಡಸ್ಥವಾಗಿರುವ ಪರಮಾತ್ಮ ಭೂಗರ್ಭದಲ್ಲಿರುವ ನಿಕ್ಷೇಪದಂತೆ ಕಾಣದೆ ಇದ್ದಾನೆ. ದಿವ್ಯಪ್ರಭೆಯಿಂದ ಕೂಡಿದ ಮಿಂಚು ಜಲಭರಿತವಾದ ಮೇಘದಲ್ಲಡಗಿರುವಂತೆ, ಪ್ರಕೃತಿರಚನೆಯ ಈ ದೇಹದಲ್ಲಿ ಆ ದಿವ್ಯಕಳೆ ಇದೆ.

---

೩೫. ವ.ಶಾ.ಸಾ.ಭಾಗ ೧. ಪೂ. ಪುಟ ೨೧. ೩೬. ವ.ಶಾ.ಸಾ. ಭಾಗ ೧.ಪೂ. ಪುಟ ೧೯

೩೭. ವ. ಶಾ. ಸಾ. ಭಾಗ ೧. ಪೂ. ಪುಟ ೨೦.

೩೮. "ಒಡಲೊಳಗಣ ಕಿಚ್ಚು ಒಡಲ ಸುಡದ ಭೇದವ, ಕುಡಿದ ಉದಕದಲ್ಲಿ ಆ ಕಿಚ್ಚು ನಂದದ ಭೇದವ, ಮೃಡ ನೀ ಪ್ರಾಣ ಪ್ರಕೃತಿಯೊಳಗಡಗಿದ ಭೇದವ ಲೋಕದ ಜಡರೆತ್ತ ಬಲ್ಲರೈ ರಾಮನಾಥಾ"

ಪರಮಾತ್ಮ ಒಳಗಿದ್ದರೂ ಆತನು ನಿರ್ಬಾಧಿತನಾಗಿರುವನೆಂದೂ, ನಮ್ಮ ಪ್ರಾಣಪ್ರಕೃತಿಯ ಗುಣಗಳಿಗೆ ಚೈತನ್ಯದಾಯಕನಾಗಿದ್ದರೂ, ಆ ಗುಣಗಳಿಂದ ಆತನು ಹೊದ್ದಲ್ಪಡುವುದಿಲ್ಲವೆಂಬುದನ್ನೂ, ವಚನಕಾರರು ಸೊಗಸಾಗಿ ವಿವರಿಸಿದ್ದಾರೆ. ಉದರಾಗ್ನಿ ಒಳಗಿದ್ದರೂ ದೇಹವನ್ನು ಸುಡುವುದಿಲ್ಲ, ಕುಡಿದ ನೀರಿನಿಂದ ಆ ಉದರಾಗ್ನಿ ನಂದುವುದಿಲ್ಲ. ಹೀಗೆ ಪರಮಾತ್ಮನು ಎಲ್ಲ ದೇಹಗಳಲ್ಲಿದ್ದರೂ, ವಿಶ್ವಭರಿತನಾಗಿ ವಿಶ್ವಾಂತರ್ಯಾಮಿಯಾಗಿ ಎಲ್ಲದರಲ್ಲಿದ್ದರೂ, ದೇಹ ಪರಮಾತ್ಮನಲ್ಲ, ವಿಶ್ವವೂ ಪರಮಾತ್ಮನಲ್ಲ. ದೇಹ ನಷ್ಟವಾಗುತ್ತದೆ, ಪರಮಾತ್ಮ ನಷ್ಟವಾಗುವುದಿಲ್ಲ; ವಿಶ್ವಕ್ಕೆ ಪ್ರಳಯವುಂಟು, ಪರಮಾತ್ಮನಿಗೆ ಪ್ರಳಯವಿಲ್ಲ.

೩೯. "ಪರುಷದ ಪುತ್ಥಳಿಗೆ ಕಬ್ಬುನದ ಆಭರಣ ಉಂಟೇ ಅಯ್ಯಾ? ಲೋಕದೊಳಗೆ ಲಿಂಗ, ಲಿಂಗದೊಳಗೆ ಲೋಕವಾದೊಡೆ ಹಿಂದಣ ಪ್ರಳಯಂಗಳೇಕಾದವು? ಇನ್ನು ಮುನ್ನಿನ ಪ್ರಳಯಂಗಳಿಗೆಂತೋ? ಲೋಕ ಲೋಕದಂತೆ, ಲಿಂಗ ಲಿಂಗದಂತೆ, ಈ ಉಭಯದ ಭೇದವ ಗುಹೇಶ್ವರಾ ನಿಮ್ಮ ಶರಣನೇ ಬಲ್ಲ"

೪೦. "ಅದ್ವೈತವ ಸಾಧಿಸಿ ಸರ್ವವೂ ಶಿವನೆಂಬರು. ಎನಲಾಗದು, ಸರ್ವಕ್ಕೂ ಲಯಗಮನವುಂಟು, ಶಿವಂಗಿಲ್ಲವಾಗಿ. ಯಂತ್ರವಾಹಕನೆಲ್ಲಿಯೂ ಪರಿಪೂರ್ಣನಾಗಿಹನೆಂದಡೆ ಎಲ್ಲವೂ ಶಿವನಾಗಬಲ್ಲವೇ? ಆಗಲರಿಯವು. ನಿಜಗುರುಸ್ವತಂತ್ರ ಸಿದ್ಧಲಿಂಗೇಶ್ವರನು ಪದ್ಮಪತ್ರಜಲದಂತೆ ಹೊದ್ದಿಯೂ ಹೊದ್ದದಂತಿಹನು"

ಪರಮಾತ್ಮನು ಎಲ್ಲರೊಳಗೆ ಹೇಗೆ ಚಮತ್ಕಾರವಾಗಿ ಸೇರಿಕೊಂಡಿರುವನೊ ಹಾಗೆಯೇ ಬಾಹ್ಯಸೃಷ್ಟಿಯನ್ನೂ ಬಹು ಚಮತ್ಕಾರವಾಗಿ ಮಾಡಿದ್ದಾನೆ. ಈ ಸೃಷ್ಟಿಚಮತ್ಕಾರ ಶಿವನಿಗಲ್ಲದೆ ಉಳಿದ ದೈವಗಳಿಗಿಲ್ಲ.

೪೧. "ಶರಧಿಯ ಮೇಲೆ ಧರೆಯ ಕರಗದಂತಿರಿಸಿದೆ. ಅಂಬರಕ್ಕೆ ಗದ್ದುಗೆ ಬೋದಿಗೆ ಇಲ್ಲದಂತಿರಿಸಿದೆ. ಎಲೆ ಮೃಡನೇ, ನೀನಲ್ಲದೆ ಉಳಿದ ದೈವಂಗಳಿಗಹುದೇ ರಾಮನಾಥಾ"

---

೩೮. ವ. ಶಾ. ಸಾ. ಭಾಗ ೧. ಪೂ.೨೧. ೩೯. ವ. ಶಾ. ಸಾ. ಭಾಗ ೧. ಪೂ.೨೬.
೪೦. ವ.ಶಾ.ಸಾ. ಭಾಗ ೧. ಪೂ.ಪುಟ ೨೭. ೪೧. ವ.ಶಾ.ಸಾ.ಭಾಗ ೧. ಪೂ.ಪುಟ೧೫.

[ಶಿವನ ಮಹಿಮೆಯನ್ನು ಎಷ್ಟು ಕೊಂಡಾಡಿದರೂ ಸಾಲದು. ಸುತ್ತಲೂ ನೀರು, ಮಧ್ಯದಲ್ಲಿ ನೆಲ. ಅದು ಹೇಗೆ ಮಣ್ಣು ಕರಗಿ ಅದೃಶ್ಯವಾಗದೆ ಉಳಿದಿದೆ? ಮೇಲೆ ನೋಡಿದರೆ, ಆಕಾಶ ದೊಡ್ಡ ಗುಮ್ಮಟದಂತೆ ಕಾಣುತ್ತದೆ. ಆದರೆ ಅದನ್ನು ಧರಿಸಿರುವ ಯಾವ ಗದ್ದುಗೆಯೂ ಯಾವ ಬೋದಿಗೆಯೂ ಇಲ್ಲವಲ್ಲ! ಇದಕ್ಕಿಂತ ವಿಚಿತ್ರವುಂಟೆ? ಅನಂತಾಕಾಶದಲ್ಲಿ ಬ್ರಹ್ಮಾಂಡ ಕೋಟಿಗಳು ತೇಲಾಡುತ್ತ ಗಿರಗಿರನೆ ಸುತ್ತುತ್ತ ಬೀಳದೆ ಇರುವುವಲ್ಲ! ಶಿವನ ಶಕ್ತಿ ಅಂತಹುದು, ಶಿವನ ಆಜ್ಞೆ ಅಂತಹುದು. ಉಳಿದ ದೈವಗಳನ್ನೆಲ್ಲ ತನ್ನ ಕಟ್ಟಾಣತಿಯಲ್ಲಿಟ್ಟುಕೊಂಡಿರುವ ಆ ಶಿವನೇ ದೇವರು.]

ಇಲ್ಲಿಗೆ ನಾವು ಸಂಪೂರ್ಣವಾಗಿ ಭೂಮಿಯ ಮೇಲೆ, ತಾರತಮ್ಯ ಪ್ರಪಂಚದಲ್ಲಿ ನಿಂತ ಹಾಗೆ. ಚೈತನ್ಯ, ಹೆಸರಿಲ್ಲದ್ದು, ಗಂಗಾಧರನಲ್ಲ ಗೌರೀವರನಲ್ಲ, ಮುಂತಾದುವು ಸುಳಿಯಲೊಲ್ಲದು; ವಿರಾಟ್‌ಪುರುಷ, ಚೈತನ್ಯಜಂಗಮಮೂರ್ತಿ ಒಮ್ಮೊಮ್ಮೆ ಸುಳಿಯಬಹುದು. ಆದರೆ ಶಿವ, ಹರ, ಪರಮೇಶ್ವರ, ಮೊದಲಾದ ಹೆಸರುಗಳಿಂದ ಪ್ರಸಿದ್ಧನಾದವನು, ಹರಿಬ್ರಹ್ಮಾದಿ ದೇವತೆಗಳಿಗಿಂತ ಅಧಿಕನಾದವನು ಸಾರ್ವತ್ರೀರಮಣನಾದವನು, ಆ ಒಬ್ಬನೇ ದೇವರಾಗಿ ಸಾರ್ವಭೌಮನಾಗಿ ವಿಶ್ವವನ್ನು ಆಳುತ್ತಿರುವುದು ಸದಾ ಗೋಚರಿಸುತ್ತದೆ.

೪೨. "ಇಬ್ಬರು ಮೂವರು ದೇವರೆಂದು ಉಬ್ಬಿ ಮಾತನಾಡಬೇಡ. ದೇವನೊಬ್ಬನೇ ಕಾಣಿರೋ. ಇಬ್ಬರೆಂಬುದು ಹುಸಿ ನೋಡಾ. ಕೂಡಲ ಸಂಗಮ ದೇವನೊಬ್ಬನೇ ಅಲ್ಲದೆ ಇಬ್ಬರಿಲ್ಲವೆಂದಿತ್ತು ಆ ವೇದ"

೪೩. ಶಿವನಲ್ಲದೆ ದೇವರಿಲ್ಲ ನೋಡಾ ಎನಗೆ. ಶಿವಮಂತ್ರವಲ್ಲದೆ ಬೇರೆ ಮಂತ್ರವಿಲ್ಲ ನೋಡಾ ಎನಗೆ. ಇದು ಕಾರಣ ಓಂ ನಮಶ್ಶಿವಾಯ, ಓಂ ನಮಶ್ಶಿವಾಯ ಎಂಬ ಷಡಕ್ಷರ ಮಂತ್ರವನೆ ಜಪಿಸುತ್ತಿರ್ದೆನು ಕಾಣಾ ಮಹಾಲಿಂಗಗುರು ಶಿವ ಸಿದ್ಧೇಶ್ವರ ಪ್ರಭುವೇ"

---

೪೨. ಬ. ವ. ಪುಟ ೮೧. (ಪಾಠ ವ್ಯತ್ಯಾಸವಿದೆ.) ೪೩. ಸಿ. ವ. ಪುಟ ೭೦.

೪೪. "ದೇವನೊಬ್ಬ, ನಾಮ ಹಲವು. ಪರಮ ಪತಿವ್ರತೆಗೆ ಗಂಡನೊಬ್ಬ. ಮತ್ತೊಂದಕ್ಕೆರಗಿದಡೆ ಕಿವಿ ಮೂಗ ಕೊಯ್ಯುವನು. ಹಲವು ದೈವದ ಎಂಜಲ ತಿಂಬವರ ನೇನೆಂಬೆನಯ್ಯ ಕೂಡಲ ಸಂಗಮ ದೇವಾ"

ಆದುದರಿಂದ ಮತ್ತೆ ಯಾರನ್ನೂ ಮರೆಹೊಗದೆ ನಮ್ಮ ಶಿವನನ್ನೇ ಮರೆಹೊಗಿ. ಶಿವನು ಕರುಣಾಮಯನು, ಭಕ್ತವತ್ಸಲನು, 'ಭಕ್ತಕಾಯ ಮಮಕಾಯ' ಎಂದು ಹೇಳಿರುವನು, ಭಕ್ತಪರಾಧೀನನಾಗಿರುವನು; ಸಂಸಾರಾದಿ ಬಂಧನಗಳಿಂದ ಬಿಡಿಸಿ ನಿತ್ಯಸುಖವನ್ನು ಕೊಡುವನು; ಭಕ್ತಿಯಿಂದ ಧ್ಯಾನಿಸಿದರೆ, ಸೇವೆಮಾಡಿದರೆ, ಪ್ರತ್ಯಕ್ಷನಾಗುವನು; ಪಂಚಮುಖ ದಶಭುಜಗಳುಳ್ಳವನಾಗಿ ಗೌರೀಸಮೇತನಾಗಿ ಚಂದ್ರಧರನಾಗಿ ಕಾಣಿಸಿಕೊಳ್ಳುವನು; ಕೈಲಾಸಕ್ಕೆ ಕರೆದುಕೊಂಡು ಹೋಗುವನು, ಸಾಲೋಕ್ಯಾದಿ ಮುಕ್ತಿಪದವನ್ನು ದಯೆಗೆಯ್ಯುವನು; ಇಹಪರಗಳೆರಡಕ್ಕೂ ಆತನೇ ನಮಗೆ ಗತಿ; ಸಾಮಾನ್ಯ ದೇವತೆಗಳನ್ನು ದೇವರೆಂದು ನಂಬಿ ಪೂಜಿಸಿದರೆ ಫಲವಿಲ್ಲ; ಈ ಸಾವಿರಾರು ದೈವಗಳನ್ನು ಪೂಜಿಸುವುದಕ್ಕಿಂತ ಎಲ್ಲರಿಗೂ ಕರ್ತನಾದ ಶಿವನನ್ನು ಪೂಜಿಸಿ ಸದ್ಗತಿಯನ್ನು ಪಡೆಯಿರಿ—ಎನ್ನುವುದು ವಚನಕಾರರ ವಾದ ಸರಣಿ.

೪೫. "ಅರಗು ತಿಂದು ಕರಗುವ ದೈವವ, ಉರಿಯ ಕಂಡರೆ ಮುರುಟುವ ದೈವವನೆಂತು ಸರಿ ಎಂಬೆನಯ್ಯ? ಅವಸರ ಬಂದರೆ ಮಾರುವ ದೈವವನೆಂತು ಸರಿ ಎಂಬೆನಯ್ಯ? ಅಂಜಿಕೊಂಡರೆ ಹೂಳುವ ದೈವವನೆಂತು ಸರಿ ಎಂಬೆನಯ್ಯ? ಸಹಜ ಭಾವ ನಿಜೈಕ್ಯ ಸ್ಥಿರರೂಪ ನಿರ್ವಿಕಾರ, ನಿರಂಜನ ಕೂಡಲ ಸಂಗಮ ದೇವನೊರ್ವನೇ ದೇವ ಕಾಣಿರೋ"

೪೬. "ಆವಾಗಲೂ ಲೋಗರ ಮನೆಯ ಬಾಗಿಲ ಕಾಯ್ದು ಕೊಂಡಿಪ್ಪವು ಕೆಲವು ದೈವಂಗಳು, ಹೋಗೆಂದರೆ ಹೋಗವು. ನಾಯಿಂಗೆ ಕರ ಕಷ್ಟ. ಲೋಗರ ಬೇಡಿಕೊಂಡುಂಬ ದೈವಂಗಳು ಕೆಲವು ತಾವೇನ ಕೊಡುವುವೋ? ಏನ ಬೇಡಿದ್ದ ನೀವ ನಮ್ಮ ಕೂಡಲ ಸಂಗಮ ದೇವ"

---

೪೪. ಬ. ವ. ಪುಟ ೯೩. ೪೫. ಬ. ವ. ಪುಟ ೪೩.
೪೬. ಬ. ವ. ಪುಟ ೪೨ (ಪಾಠ ವ್ಯತ್ಯಾಸವಿದೆ.)

ಅಲ್ಲಮಪ್ರಭು ಮೊದಲಾದ ಒಬ್ಬಿಬ್ಬರ ದೃಷ್ಟಿ ಆ ನಿಷ್ಕಲ ಪರವಸ್ತುವಿನ ಕಡೆಗಿರುತ್ತದೆ. ಉಳಿದ ವಚನಕಾರರು ಮತಪ್ರಚಾರದ ಉತ್ಸಾಹದಲ್ಲಿ ಶಿವಪಾರಮ್ಯವನ್ನು ವಹಿಸಿ "ವಿಷ್ಣುವೇ ದೈವವೆಂದು ಆರಾಧಿಸಿದ ಬಲಿಗೆ ಬಂಧನವಾಯಿತ್ತು, ವಿಷ್ಣುವೇ ದೈವವೆಂದು ಆರಾಧಿಸಿದ ಕರ್ಣನ ಕವಚಹೋಯಿತ್ತು" "ನಾರಾಯಣನೆಂಬವನ ಕಾಣೆ ಗೀರಾಯಣನೆಂಬವನ ಕಾಣೆ" "ನೀನಲ್ಲದನ್ಯ ದೈವವುಂಟೆಂಬವನ ಕೆನ್ನವಾರೆ ಸೀಳಿದಲ್ಲದೆ ಎನ್ನ ಮುನಿಸು ಹೋಗದಯ್ಯ" "ಹರಿಹರರೊಂದೇ ಎಂದರೆ ಸುರಿಯುವ ಬಾಯಲ್ಲಿ ಬಾಲ ಹುಳುಗಳು" ಎಂದು ಮುಂತಾಗಿ ಹೇಳಿದ್ದಾರೆ.

---

೩ನೆಯ ಪ್ರಕರಣ

# ಭಕ್ತಿ—ಬಸವಣ್ಣನವರು

ದೇವರಿದ್ದಾನೆ ಎನ್ನುವುದು .ಮನಸ್ಸಿಗೆ ಎಷ್ಟು ಧೈರ್ಯ, ಎಷ್ಟು ಆನಂದ, ಕೊಡುತ್ತದೆ! ನಮಗೆ ಕಷ್ಟಗಳೊದಗಿದಾಗ, ಸಂಕಟದಲ್ಲಿ ಸಿಕ್ಕಿ ನಾವು ವ್ಯಥೆಪಡುವಾಗ, ನೆರವಾಗುವ ಒಬ್ಬ ಪುಣ್ಯಾತ್ಮ ದೊರೆತರೆ ಮನಸ್ಸಿ ಹೊರೆ ಹೇಗೆ ಇಳಿದು ಹೋಗುವುದು! ಪ್ರೇಮಮಯನಾಗಿ, ಕರುಣಾ ಮಯನಾಗಿ, ನಮ್ಮ ಮೊರೆಯನ್ನು ಕೇಳಿ ಕಷ್ಟ ಸಂಕಟಗಳಿಂದ ಪಾ ಮಾಡಿಸುವ, ಹುಟ್ಟು ಸಾವುಗಳಿಲ್ಲದಂತೆ ರಕ್ಷಿಸುವ, ಪರಮಾತ್ಮ ದೊರೆಯು ವುದಾದರೆ ಆತನನ್ನು ಸರ್ವ ಪ್ರಯತ್ನಗಳಿಂದಲೂ ಒಲಿಸಬೇಕಲ್ಲವೆ? ಭಕ್ತಿ ಹೃದಯದ ನಿಕ್ಷೇಪ. ಹೃದಯವನ್ನು ಸೂರೆಗೊಂಡದ್ದಲ್ಲದೆ ಆ ಪರಮಾತ್ಮನು ಕಾಣಲೊಲ್ಲನು. ಭಕ್ತನ ಮನೋಭೀಷ್ಟಕ್ಕನುಸಾರವಾಗಿ ಪರಮಾತ್ಮನು ಯಾವ ರೂಪದಲ್ಲಿ ಬೇಕಾದರೂ ಕಾಣಿಸಿಕೊಳ್ಳುವನು. ಎದುರಿಗೆ ಬಂದು ಮಾತನಾಡುವನು, ಭಕ್ತನ ಜೊತೆಯಲ್ಲಿ ತಿರುಗುವನು, ಸೇವೆಮಾಡುವನು ಸೇವೆಯನ್ನು ಕೈಕೊಳ್ಳುವನು. ಆದುದರಿಂದ ಮನುಷ್ಯಸಹಜವಾದ ರಸಭಾ ವಿಶೇಷಗಳನ್ನೆಲ್ಲ ತಿಳಿದುಕೊಂಡು, ಅವುಗಳನ್ನು ತಾನೂ ವ್ಯಕ್ತಗೊಳಿಸುವನು ಭಕ್ತನಿಗೂ ಪರಮಾತ್ಮನಿಗೂ ಸಂಬಂಧಗಳು ವಿವಿಧವಾಗಿರಬಹುದು. ಸ್ವಾಮಿ—ಭೃತ್ಯ, ತಂದೆ—ಮಗ, ಪತಿ—ಸತಿ, ಎಂದು ಮೊದಲಾಗಿ ಇ ಬಹುದು. ಭಕ್ತರು

* "ಎನ್ನನಲ್ಲದೆ ನೋಡರೆನ್ನ ಭಕ್ತರ್ಗಿಂಜಿ
ಎನ್ನನಲ್ಲದೆ ಬಯಸರೆನ್ನ ಭಕ್ತರ್ಗಿಂಜಿ
ಆನವರ್ಗೆನಗವರೆ ಭೇದವೆನಗಿನಿತಿಲ್ಲ,
ಈ ನೆಲದೊಳೆನ್ನವರ್ಗೆಣೆ ಇಲ್ಲ, ಹೊಣೆ ಇಲ್ಲ."

---

* ಹರಿಹರನ ರುದ್ರಪಶುಪತಿಯ ರಗಳೆ

* "ಅಲ್ಲಿ ಭಕ್ತಂ ದೇಹಮೋಹಮಂ ತಾನಱಿಯ
ಅಲ್ಲಿ ಭಕ್ತಂ ಬಯಸುವರ್ಥಮುಂ ತಾನಱಿಯ
ಎಳಸುವನೆ ಶಿವಭಕ್ತನಜ ವಿಷ್ಣುಪದವಿಯಂ
ಎಳಸುವನೆ ಭಕ್ತಿಯಲ್ಲದೆ ಕೆಡುವ ಪದವಿಯಂ"

† "ಒಡವೆಯಾನೊಳ್ಳಿತಾನಿಂತೆನ್ನ ಭಕ್ತರ್ಗೆ
ಒಡಲೆನ್ನದಸುವೆನ್ನದಿಂತೆನ್ನ ಭಕ್ತರ್ಗೆ
ಎನಗವರೆ ಲಾಭವವರ್ಗಾನೆ ಲಾಭಂ ಕೇಳ್
ಎನಗೆ ಎಲ್ಲಾ ಲಾಭವುಂ ಭಕ್ತರೇ ಕೇಳ್"

ಎಂದು ಮುಂತಾಗಿ ದೇವರು ತನ್ನ ಭಕ್ತರ ಮಹಿಮೆಯನ್ನು ಸಾರುವುದೊಂದೇ ಅಲ್ಲ, ಭಕ್ತರ ಕೋಪವನ್ನು ಬಿಡಿಸುವುದಕ್ಕಾಗಿ ತನ್ನ ತಪ್ಪುಗಳನ್ನೂ ಒಪ್ಪಿಕೊಳ್ಳುವನು.

‡ "ಮಱೆದು ಚೋಳಂಗೆ ಪೇಳ್ದೊಡೆ ಕೋಪವಿನಿತೇಕೆ
ಅಱಿಯದೆಂದೆನು ಚೆನ್ನ ಸೈರಿಸಾಸುರವೇಕೆ"

ಹೀಗೆ ತಾನು ದೇವರಾದರೂ ಮನುಷ್ಯ ಸಂಬಂಧಗಳನ್ನಿಟ್ಟುಕೊಂಡು ಮನುಷ್ಯನಂತಾಚರಿಸಿ ಸಕಲ ವಿಧಗಳಲ್ಲಿಯೂ ಭಕ್ತರನ್ನು ರಕ್ಷಿಸುತ್ತ

§ "ಭಕ್ತರ ಸುಖಂ ತನ್ನ ಸುಖವೆನಿಸುವೀಶ್ವರಂ
ಭಕ್ತರ ಮುಖಂ ತನ್ನ ಮುಖವೆನಿಸುವೀಶ್ವರಂ
ಭಕ್ತಜೀವಂ ತನ್ನ ಜೀವವೆನಿಸುವ ಶಿವಂ
ಭಕ್ತಕಾಯಂ ತನ್ನ ಕಾಯವೆನಿಸುವ ಶಿವಂ"

ಲೀಲಾಮಾನುಷವಿಗ್ರಹನಾಗಿರುತ್ತಾನೆ. ಆತನಿರುವುದು ಕೈಲಾಸದಲ್ಲಿ. ಅದು ಎಲ್ಲಾ ಲೋಕಗಳಿಗಿಂತ ಮಿಗಿಲು. ಅದರ ವರ್ಣನೆಯನ್ನು ಮಾಡಬಲ್ಲವರಿಲ್ಲ. ಪಾರ್ವತೀ ಸಮೇತನಾಗಿ ಒಡ್ಡೋಲಗದಲ್ಲಿದ್ದು ಸಂಗೀತ ನಾಟ್ಯ ಮೊದಲಾದುವನ್ನು ನೋಡುತ್ತ, ಪಾರ್ವತಿಗೆ ತೋರುತ್ತ, ಗುಹ ಗಣಪರ ಮುದ್ದು ಮಾತುಗಳನ್ನು ಕೇಳುತ್ತ, ದೇವತೆಗಳಿಂದ ಸೇವೆಯನ್ನು ಕೈಕೊಳ್ಳುತ್ತ ವಿಜೃಂಭಣೆಯಿಂದ ಸಮಸ್ತ ಲೋಕಗಳನ್ನೂ ಆಳುತ್ತಿರುವನು.

---

* ಹರಿಹರನ ರುದ್ರಪಶುಪತಿಯ ರಗಳೆ
† ಹರಿಹರನ ಮಾನಕಂಜರ ರಗಳೆ
‡ „ ಚನ್ನಯ್ಯನ ರಗಳೆ
§ „ ಕಣ್ಣಪ್ಪನ ರಗಳೆ

ಭಕ್ತಿಪಂಥ ಬಹಳ ಹಳೆಯದು. ಭಗವದ್ಗೀತೆಯಲ್ಲಿ ಅದರ ಸ್ವರೂಪ ವನ್ನು ಚೆನ್ನಾಗಿ ವಿವರಿಸಿದೆ. ನಾರದ ಭಕ್ತಿಸೂತ್ರದಲ್ಲಿ ಅದರ ತತ್ತ್ವವನ್ನೆಲ್ಲ ತಿಳಿಸಿದೆ. ಶ್ವೇತಾಶ್ವತರೋಪನಿಷತ್ತಿನಲ್ಲಿ ಈ ಭಕ್ತಿಯ ಕುರುಹುಗಳು ಕಾಣುತ್ತವೆ.

ಭಕ್ತಿಪಂಥ ಪುರಾತನ ಮತಗಳ ಮುಖ್ಯಾಂಗವಾಗಿದ್ದಿರಬೇಕು. ವೈದಿಕ ಮತದ ವರ್ಣಾಶ್ರಮಗಳನ್ನು ಇದು ಎದುರಿಸಿ ನಿಂತಿದೆ; ಜಾತಿ ಭೇದಗಳನ್ನು ಇದು ನಿರಾಕರಿಸಿದೆ; ಯಜ್ಞಯಾಗಾದಿಗಳನ್ನು ಖಂಡಿಸಿ ಭಗವಂತನ ದಯೆ ಪ್ರೇಮ—ಇವುಗಳನ್ನು ಒತ್ತಿಹೇಳುತ್ತದೆ. ಶೈವಮತ ವಾಗಿರಲಿ ವೈಷ್ಣವಮತವಾಗಿರಲಿ ಭಕ್ತಿಪಂಥದಲ್ಲಿ ಈ ಸಮಾನ ಲಕ್ಷಣಗಳನ್ನು ಕಾಣಬಹುದಾಗಿದೆ. ಇದು ಸಂಸ್ಕೃತಕ್ಕಿಂತ ದೇಶಭಾಷೆಗಳಿಗೆ ಪ್ರಾಶಸ್ತ್ಯವನ್ನು ತಂದುಕೊಟ್ಟಿದೆ. ಯಾರು—ಹೆಂಗಸಾಗಲಿ ಗಂಡಸಾಗಲಿ—ಪರಮಾತ್ಮನ ಹಂಬಲನ್ನು ಬಲವಾಗಿ ಪಡೆದಿರುವರೋ, ಪರಮಾತ್ಮನನ್ನು ದೃಢವಾಗಿ ನಂಬಿರುವರೋ, ಪರಮಾತ್ಮನಿಗಾಗಿ ಸರ್ವವನ್ನೂ ಸಮರ್ಪಿಸಲು ಸಿದ್ಧರಾಗಿರು ವರೋ, ಭಕ್ತರನ್ನು ದೇವರೆಂದೇ ತಿಳಿದು ಗೌರವಿಸುವರೋ, ದಾಸಾನುದಾಸ ಮನೋಭಾವದಿಂದ ವಿನಮ್ರರಾಗಿರುವರೋ, ಏಕಾಗ್ರಚಿತ್ತದಿಂದ ಭಗವಂತನ ನಾಮಸಂಕೀರ್ತನ ಮಾಡುವರೋ, ಅಹಂಕಾರ ವರ್ಜಿತರಾಗಿ ಪರಮಾತ್ಮನ ಕರ್ತೃತ್ವದಲ್ಲಿ ನಂಬಿಕೆಯಿಟ್ಟು, ಆತ್ಮಾರ್ಪಣದಿಂದ ತಲ್ಲೀನರಾಗುವರೋ, ಅವರೇ ಭಕ್ತರು, ಅವರೇ ಮುಕ್ತರು. ಅಂತರಂಗ ಶುದ್ಧವಿಲ್ಲದವರಿಗೆ ಶುದ್ಧ ಭಕ್ತಿ ದೊರೆಯುವುದಿಲ್ಲ. ಆದುದರಿಂದ ಭಕ್ತನಾಗುವುದು ಸುಲಭವಲ್ಲ. ಭಕ್ತಿ ಎನ್ನುವುದು ಭಗವಂತನಲ್ಲಿಡುವ ನಿಶ್ಚಲಪ್ರೇಮ; ಅದು ತನ್ನ ಅವಗುಣ ಗಳೊಡನೆ, ಅರಿಷಡ್ವರ್ಗದೊಡನೆ, ನಡಸುವ ಒಂದು ಹೋರಾಟ; ಮನಸ್ಸನ್ನು ಪರಮಾತ್ಮನಲ್ಲಿ ಸೇರಿಸುವ ಒಂದು ಸಾಧನೆ.

ವಚನಕಾರರಲ್ಲಿ ಬಸವಣ್ಣನವರು ಭಕ್ತಿಭಾಂಡಾರಿಗಳಾಗಿದ್ದರು. ಅವರ ಭಕ್ತಿಸಾಧನಕ್ರಮ ವಚನಧರ್ಮದಲ್ಲಿ ಭಕ್ತಿಯ ಸ್ವರೂಪವನ್ನು ಚೆನ್ನಾಗಿ ತೋರಿಸಿಕೊಡುತ್ತದೆ. ಬಸವಣ್ಣನವರು ೧೨ನೆಯ ಶತಮಾನದ ಆದಿ ಭಾಗದಲ್ಲಿ, ಬಿಜಾಪುರ ಜಿಲ್ಲೆಯ ಬಾಗೆವಾಡಿಯಲ್ಲಿ ಜನಿಸಿದರು. ಮಾದರಸ

ಮತ್ತು ಮಾದಲಾಂಬೆ ಎಂಬ ಶೈವ ಬ್ರಾಹ್ಮಣದಂಪತಿಗಳು ಬಸವಣ್ಣನವರ ತಂದೆ ತಾಯಿಗಳು. ಎಳೆಯ ವಯಸ್ಸಿನಲ್ಲಿಯೇ ವಿಚಾರಪರರಾಗಿದ್ದು ಕರ್ಮ ಕಾಂಡದಲ್ಲಿ ತಿರುಳನ್ನು ಕಾಣದೆ ಭಕ್ತಿಮಾರ್ಗವೇ ಸರ್ವೋತ್ತಮವಾದುದೆಂದು ಅವರು ನಿಶ್ಚಯಿಸಿದರು. ಕೂಡಲಸಂಗಮಕ್ಷೇತ್ರ ಕೃಷ್ಣಾ ಮತ್ತು ಮಲ ಪ್ರಭಾ ನದಿಗಳ ಸಂಗಮಸ್ಥಾನದಲ್ಲಿದೆ. ಬಾಗೆವಾಡಿಯಿಂದ ಈ ಸಂಗಮ ಕ್ಷೇತ್ರಕ್ಕೆ ಬಂದು ಸಂಗಮನಾಥನ ಸೇವೆಯಲ್ಲಿ ಹಗಲಿರುಳು ನಿರತರಾಗಿ ಅನನ್ಯ ಭಕ್ತಿಯಿಂದ ನಡೆದುಕೊಳ್ಳುತ್ತಿದ್ದರು. ದಿನ ದಿನವೂ ಅಗ್ಘವಣಿ, ಹೂವು, ಪತ್ರೆ ಮುಂತಾದುವನ್ನು ಶುದ್ಧಾಂತಃಕರಣದಿಂದ ತಂದು ಸಂಗಮ ನಾಥನಿದಿರಿನಲ್ಲಿ ಇಳಿಸಿ

*"ನುತ ಶೀತಳಂಗಳಂ ಪೊಂಗಳಸದೊಳು ತೀವಿ
ಅತಿಶಯಾನಂದಾಶ್ರುವಂ ಕಣ್ಗಳೊಳು ತೀವಿ
ಕೊಂಡಾಡಿ ಕೊಂಡಾಡಿ ಮಜ್ಜನಕ್ಕೆಱೆವುತಂ
ಮುಂಡಾಡಿ ಮುಂಡಾಡಿ ನೊಸಲೊಳಚ್ಚೊತ್ತುತಂ
ಚಂದ್ರಚೂಡಂಗೆ ಸಿರಿಗಂಧಮನಲಂಕರಿಸಿ
ಸಾಂದ್ರಸೌರಭ್ಯಮಯ ಪುಷ್ಪದಿಂ ಸಿಂಗರಿಸಿ
ಪೂಜೆಯಂ ನೋಡಿ ಮೆಚ್ಚದೆ ಪೂಜೆಯಂ ಮಾಡಿ
ಓಜೆಗೆಟ್ಟಜುಹುಗೆಟ್ಟತಿಲಲ್ಲೆಯಂ ಮಾಡಿ
ನಯನಂಗಳೊಳು ಪೂಜೆ ಬರೆದಂತೆ ನೋಡುತಂ
ಭಯಭಕ್ತಿಯಂ ಪೂಜೆ ಮೆಱೆವಂತೆ ಮಾಡುತಂ

ನಿತ್ಯನಿರ್ಮಳನೆ ನಿಃಕಳನೆ ಕೂಡಲಸಂಗ
ನಿತ್ಯನಿರ್ಭಯನೆ ನಿರುಪಮನೆ ಕೂಡಲಸಂಗ
ಹೊಗಳ್ವ ವೇದಾಳಿಗತಿಗೂಢ ಕೂಡಲಸಂಗ
ಸೊಗಯಿಸುವ ಘನವೃಷಾರೂಢ ಕೂಡಲಸಂಗ
ಎನ್ನನತಿ ಕರುಣದಿಂ ನೋಡು ಕೂಡಲಸಂಗ
ಎನ್ನ ಮನದಕ್ಕಱೊಳು ಕೂಡು ಕೂಡಲಸಂಗ
ಎನ್ನ ಕಣ್ಣೊಳಗೆ ಪರಿದಾಡು ಕೂಡಲಸಂಗ

---

* ಬ, ದೇ. ರ,

ಎನ್ನ ಮನದೊಳಗೆ ಕುಣಿದಾಡು ಕೂಡಲಸಂಗ
ಎಂದು ಸುತ್ತಿಗೆಯ್ವುತಂ ಸ್ನೇಹರಸದೊಳ್ ಕೂಡಿ
ಇಂದುಧರನೊಳ್ ಸಲುಗೆಯಿಂ ಭಕ್ತಿಯಿಂ ಬೇಡಿ

* * * *

ಶಿವಪೂಜೆಯೊಳಗೆ ಪುಟ್ಟಿದ ಸುಧಾಕರನಂತೆ
ಭವಪೂಜೆ ಬಲಿದು ಪುರುಷಾಕಾರವಾದಂತೆ"

ಪೂಜೆಯನ್ನು ಮಾಡುತ್ತ ಸದಾ ಸಂಗಮನಾಥನ ಧ್ಯಾನದಿಂದ, ಶರಣಜನರ ಸಹವಾಸದಿಂದ, ಕಾಲವನ್ನು ಕಳೆಯುತ್ತ

೪೭. "ದುರ್ವ್ಯಸನಿ, ದುರಾಚಾರಿ, ಎಂದೆನಿಸದಿರಯ್ಯಾ! ಎನ್ನ ಲಿಂಗವ್ಯಸನಿ ಜಂಗಮಪ್ರೇಮಿ ಎಂದೆನಿಸಯ್ಯ. "ಅವಶ್ಯಮನುಭೋಕ್ತವ್ಯಂ" ಎಂದೆನಿಸದಿರಯ್ಯಾ! ಕೂಡಲ ಸಂಗಮ ದೇವಾ ಸೆರಗೊಡ್ಡಿ ಬೇಡುವೆನು"

೪೮. "ಅತ್ತಲಿತ್ತ ಹೋಗದಂತೆ ಹೆಳವನ ಮಾಡಯ್ಯ ತಂದೆ! ಸುತ್ತಿ ಸುಳಿದು ನೋಡದಂತೆ ಅಂಧಕನ ಮಾಡಯ್ಯ ತಂದೆ! ಮತ್ತೊಂದ ಕೇಳದಂತೆ ಕಿವುಡನ ಮಾಡಯ್ಯ ತಂದೆ. ನಿಮ್ಮ ಶರಣರ ಪಾದವಲ್ಲದೆ ಅನ್ಯ ವಿಷಯಕ್ಕೆಳಸದಂತೆ ಇರಿಸು ಕೂಡಲ ಸಂಗಮ ದೇವಾ"

ಎಂದು ಅಂಗಲಾಚಿ ಬೇಡುತ್ತ ಸಂಗಮಕ್ಷೇತ್ರದಲ್ಲಿದ್ದರು. ಹೀಗಿರುವಾಗ ಸಂಗಮನಾಥನು ಒಂದು ದಿನ ರಾತ್ರಿ ಬಸವಣ್ಣನವರ ಕನಸಿನಲ್ಲಿ ಕಾಣಿಸಿಕೊಂಡು,

*"ಎಲೆ ಮಗನೆ ಬಸವ, ಬಸವಣ್ಣ, ಬಸವಿದೇವ, ನಿನ್ನಂ ಮಹೀತಳದೊಳು ಮೆಱೆದಪೆವು ನೀಂ ಬಿಜ್ಜಳರಾಯನಿಪ್ಪ ಮಂಗಳವಾಡಕ್ಕೆ ಪೋಗು" ಎನ್ನಲು ನಿದ್ರೆ ತಿಳಿದು ಕಣ್ದೆಱೆದು, ಕೆಲಬಲನಂ ನೋಡಿ ಬೆಚ್ಚಿ ಬೆಗಡುಗೊಂಡು ಅನುತಾಪವೇಱಿ ವಿರಹಂ ಹೊಮ್ಮಿ ಕಣ್ಗೆಟ್ಟಗಲಲಾಱದೆ ರಂಗಮಂಟಪದ ಕಂಭಮಂ ಘಳಿಲನೆ ಹಾಯ್ದು—ದೇವ ದೇವ ಸಂಗ, ಕಂಡ್ಯೆ ಕೆಟ್ಟೆ ಕೆಟ್ಟೆಂ. ತೊಟ್ಟನಿಂತು ಕಣ್ ನೋಡದೆ ಹುಣ್ಣ ನೋಡದೆ ಹೋಗೆಂಬರೆ? ಗಗನದಿಂದಿಳಿವಂಗಾಧಾರಮಾಗುತ್ತೆ ತಪ್ಪುವರೆ? ಕಾಳ್ಕಿಚ್ಚಿನಿಂ ಬೇವಂಗೆ ತಂಪಿನ ಸೋನೆಯ ಮಳೆಯಾಗುತ್ತೆ ಮಾಣ್ಬರೆ? ಇಂತು ನಡುಗಡಲೊಳಾಳುವಂಗೆ ತೆಪ್ಪವಾಗುತ್ತೆ ಪಿಂಗುವರೆ? ನರಲೋಕದೊಳಾಳಲೀಯದೆ ಜಂಡಿಕೆವಿಡಿದುದ್ಧರಿಸಲೆಂದಾಳ್ಕೊಂಡ ಗುರುವೆ, ಪರಮ ಬಂಧುವೆ, ಪ್ರಾಣವೆ, ಬೆಳದಿಂಗಳೇಕೆ ಬಿಸುಪೇಕೆ? ಅಮೃತವೇಕೆ ವಿಷವೇಕೆ? ಬೆಳಗೇಕೆ

೪೭. ಬ, ವ. ಪುಟ ೩೯. ೪೮. ಬ. ವ. ಪುಟ ೧೦. * ಬ. ದೇ. ರ.

ತಮವೇಕೆ? ನೀನೇಕೆ ಈ ನುಡಿಯೇಕೆ? ಹೊದ್ದಿದರಂ ಹೋಗೆಂಬರೆ? ಸಾರ್ದರಂ ಸೈರಿಸೆಂಬರೆ? ನಂಬಿದವರ ಗೋಣಂ ಕೊಯ್ವರೆ? ಶಿಶುವನಿಜೀವರೆ? ಪಶುವಂ ಕೊಲುವರೆ? ಎನ್ನಂ ಬಿಡುವರೆ? ಕರುಣ, ಕರುಣ, ಕರುಣಂ ಲೇಸಾಯ್ತು. ಅರ್ಚಿಸಿತಕ್ಕೆ ಫಲವಾಯ್ತು. ಇನ್ನೇನು ಇನ್ನೇನು?" "ಎಂದೊಟ್ಟೈ ಒಜಿಲಿ ಪರಿತಂದು ಸಂಗನಂ ತಕ್ಕೈಸಿ ಪಳವಿಸಿ ಪಲುಂಬಿ ಗೋಳಿಟ್ಟು ಅಲಿಟ್ಟು ಸಿವದಿಟ್ಟು ಮೊಜೆಯಿಟ್ಟು ಮೂರ್ಛಿಸುತ್ತೆಂತಕ್ಕೆ ಚ್ಚತ್ತು ಮೆಲ್ಲಮೆಲ್ಲನಾಲಿಂಗನಮುಂ ಸಡಿಲ್ಚಿ ನಡೆತಂದು"

ಹೂವು ಪತ್ರೆಗಳನ್ನು ತರಲು ಮನಸ್ಸಿಲ್ಲದ ಮನಸ್ಸಿನಿಂದ ಹೊರಟರು. ಪುನಃ ಪುನಃ ಸಂಗಮನಾಥನು ಬಂದು ಬಲಾತ್ಕಾರ ಮಾಡತೊಡಗಲು, ಬಸವಣ್ಣನವರು, ಎಂತಾದರೂ ದೇವರು ಬಿಡಲೊಲ್ಲನು, ಹೋಗದೆ ನಿರ್ವಾಹವಿಲ್ಲ—ಎಂದು ಕಣ್ಣೀರು ತಂದುಕೊಂಡು ಸಂಗಮನಾಥನೆದುರಿಗೆ

* "ಹೊರಳುತ್ತಳುತ್ತಗಲಲಾಜಿದೊಜಲುತ್ತೆದ್ದು
ನಿಂದಿರುತ್ತಿಲೆ ಸಂಗ ಹೋಗಿ ಬಂದಪೆನಯ್ಯ
ತಂದೆ ನಿನ್ನಂ ನಂಬಿ ನಚ್ಚಿ ಹೋದಪೆನಯ್ಯ"

ಎಂದು ಹೇಳಿ, ಮತ್ತೆಯೂ ಅಡಿಯಿಡಲಾರದೆ "ದೇವ ದೇವ ಕರುಣಿಪುದು" ಎನ್ನುತಿರಲು

† "ಮುಂದಿರ್ದ ಬಸವನಂ ಕಂಡು ಸಂಗಂ ಮಜುಗಿ
ಬಂದಪ್ಪಿ ಕಣ್ಣನೀರಂ ತೊಡೆದು ಮಿಗೆ ಮಜುಗಿ
ಬೇಡೆನ್ನ ಕಂದ ನಿನ್ನೊಡನೆ ಬಪ್ಪೆಂ ಬಸವ
ನೋಡು ನಿನ್ನಾಣೆ ನಿನ್ನೊಡನೆ ಬಪ್ಪೆಂ ಬಸವ
ನಿನ್ನನಗಲಿರಲಾರ್ಪೆನೇ ಬಸವ ಬಸವಣ್ಣ
ನೀನಿಂತಳುತ್ತಿಪ್ಪೊಡೆನಗರಿದು ಬಸವಣ್ಣ
ಕಂದ ಬೇಡಯ್ಯ ಬೇಡಯ್ಯ ನೇಹದ ನಿಧಿಯೆ
ಹಿಂದುಗೊಂಡೇ ಬಪ್ಪೆನೆನ್ನ ಸುಕೃತದ ಸುಧೆಯೆ
ನೆನೆಯೆ ಮುಂದಿರ್ದಪೆಂ ಕರೆದೊಡೋ ಎಂದಪೆಂ

ಎಂದು ಮುಂತಾಗಿ ಧೈರ್ಯಹೇಳಿ,

---

*† ಬ. ದೇ. ರ.

"ನಡೆಯಯ್ಯ ನಡೆ ಮಗನೆ ನಡೆ ಕಂದ ಬಸವಣ್ಣ
ಪೊಡವಿಗಧಿಪತಿಯಾಗಿ ಬಾಳೆನ್ನ ಬಸವಣ್ಣ"

ಎಂದು ಹರಸಿ ಕಳುಹಿಸಿಕೊಟ್ಟು ತಾನು ಅದೃಶ್ಯನಾದನು.

ಬಸವಣ್ಣನವರು ಬಿಜ್ಜಳನಾಸ್ಥಾನವನ್ನು ಸೇರಿದರು, ಮಂತ್ರಿಪದವಿಗೂ ಏರಿದರು. ಪರಮಾರ್ಥಸಾಧನೆಯಲ್ಲಿದ್ದ ಬಸವಣ್ಣನವರಿಗೆ ಹೀಗೆ ಲೌಕಿಕ ವ್ಯವಹಾರವೂ ಗಂಟುಬಿದ್ದಿತು. ಆದರೆ ಅದರಿಂದ ಅವರು ಸುಖಿಗಳಾಗಲಿಲ್ಲ. ದೇವರು ತಮ್ಮನ್ನು ಈ ತೊಡಕಿನಲ್ಲಿ, ಗೊಂದಲದಲ್ಲಿ, ಸಿಕ್ಕಿಸಿ ತನ್ನ ಧ್ಯಾನಪೂಜೆಗಳಿಗೆ ಅವಕಾಶವಿಲ್ಲದಂತೆ ಮಾಡಿದನಲ್ಲಾ ಎಂಬುದೊಂದು ವ್ಯಥೆ, ದೇವರು ಬಂದು ಕಾಣಿಸಿಕೊಳ್ಳುವನೋ ಇಲ್ಲವೋ ತಮ್ಮಲ್ಲಿ ಕುಂದಿಟ್ಟು ಮರೆಯಾಗುವನೋ ಏನೋ ಎಂಬ ಭಯ, ಅವರನ್ನು ಕಾಡುತ್ತಿದ್ದುವು. ಹಲವು ವೇಳೆ ದೀನರಾಗಿ,

೪೯. "ಅಯ್ಯಾ ಅಯ್ಯಾ ಎಂದು ಕರೆವುತ್ತಲಿದ್ದೇನೆ. ಅಯ್ಯಾ ಅಯ್ಯಾ ಎಂದು ಒರಲುತ್ತಲಿದ್ದೇನೆ. ಓ ಎನ್ನಲಾಗದೆ ಅಯ್ಯಾ. ಆವಾಗಲೂ ನಿಮ್ಮುವ ಕರೆವುತ್ತಿದ್ದೇನೆ. 'ಓ' ಎನ್ನದೆ ಮೌನವೇ ಕೂಡಲ ಸಂಗಮ ದೇವಾ"

ಎಂದು ಮೊರೆಯಿಡುತ್ತಿದ್ದರು. ಆದರೆ ಪರಮಾತ್ಮನು ಮೌನವನ್ನೂ ಧರಿಸಿದ್ದನು, ಮಾಯವಾಗಿಯೂ ಇದ್ದನು. ಕಲ್ಯಾಣ ಪಟ್ಟಣದಲ್ಲಿ ಬಸವಣ್ಣನವರ ಭಕ್ತ್ಯಾಚರಣೆಯನ್ನು ನೋಡಿ ಆಕರ್ಷಿತರಾದವರು ಸಹಸ್ರಾರು ಮಂದಿ; ಬಸವಣ್ಣನವರ ಪಂಥವನ್ನೂ ಅದರ ಬೆಳವಣಿಗೆಯನ್ನೂ ನೋಡಿ ವಿಸ್ಮಯಗೊಳ್ಳುತ್ತಿದ್ದ ಮತಾಂತರದವರು ಸಹಸ್ರಾರು ಮಂದಿ. ಅವರಿಗೆಲ್ಲ

೫೦. "ನಾದಪ್ರಿಯನಲ್ಲ, ವೇದಪ್ರಿಯನಲ್ಲ, ಭಕ್ತಿಪ್ರಿಯ ನಮ್ಮ ಕೂಡಲ ಸಂಗಮ ದೇವ"

ಎಂದು ಘಂಟಾಘೋಷವಾಗಿ ಬಸವಣ್ಣನವರು ಹೇಳಿದರು. 'ಭಕ್ತಿಪ್ರಿಯ' ಎಂದು ಹೇಳಿದಮಾತ್ರಕ್ಕೆ ಭಕ್ತಿ ಸುಲಭವೆಂದಾಗಲಿ, ಪರಮಾತ್ಮನು ಸುಲಭಸಾಧ್ಯನೆಂದಾಗಲಿ ಅವರು ಹೇಳಲಿಲ್ಲ.

---

೪೯. ಬ. ವ. ಪುಟ ೯.   ೫೦. ಬ. ವ. ಪುಟ ೨೭.

೫೧. "ದೇವನೊಳ್ಳಿದನೆಂದು ಮುಯ್ಯೊನಲು ಬೇಡ. ತರಕಟ ಕಾಡಿಹನೊಳ್ಳಿದನೆ? ಅಳಿಸುವ ನಗಿಸುವನೊಳ್ಳಿದನೆ? ಬೆಚ್ಚದೆ ಬೆದರದೆ ತೊತ್ತುತನವ ಮಾಡಲು ತನ್ನನೀವ ಕೂಡಲ ಸಂಗಮ ದೇವ"

ಎಂದು ತಮಗಾದ ಅನುಭವವನ್ನು ನೆನೆನೆನೆದು ಬುದ್ಧಿ ಹೇಳುತ್ತಿದ್ದರು. ಪರಮಾತ್ಮನನ್ನು ತಿಳಿಯುವುದಕ್ಕೆ, ಸೇರುವುದಕ್ಕೆ, ವೇದಶಾಸ್ತ್ರಾದಿಗಳು ಸಹಕಾರಿಗಳೆಂದು ವೈದಿಕರು ತಿಳಿದಿದ್ದಾಗ, ಅವುಗಳನ್ನು ನಿರಾಕರಿಸಿ ಭಕ್ತಿಗೆ ಪ್ರಾಶಸ್ತ್ಯವನ್ನು ಕೊಟ್ಟರು. ಜ್ಞಾನಮಾರ್ಗದಲ್ಲಿ ಹೃದಯ ಮಿಡಿಯುವುದಿಲ್ಲ, ಕರ್ಮ ಮಾರ್ಗದಲ್ಲಿ ಮುಕ್ತಿ ದೊರೆಯುವುದಿಲ್ಲ.

೫೨. "ಶಾಸ್ತ್ರ ಘನವೆಂಬೆನೆ ಕರ್ಮವ ಭಜಿಸುತ್ತಿದೆ. ವೇದ ಘನವೆಂಬೆನೆ ಪ್ರಾಣಿವಧೆಯ ಹೇಳುತ್ತಿದೆ. ಸ್ಮೃತಿ ಘನವೆಂಬೆನೆ ಮುಂದಿಟ್ಟು ಅರಸುತ್ತಿದೆ. ಅಲ್ಲೆಲ್ಲಿಯೂ ನೀವಿಲ್ಲದ ಕಾರಣ ತ್ರಿವಿಧ ದಾಸೋಹದಲ್ಲಲ್ಲದೆ ಕಾಣಬಾರದು ಕೂಡಲ ಸಂಗಮ ದೇವಾ"

'ತ್ರಿವಿಧ ದಾಸೋಹ' ಎಂದರೆ ಗುರು ಲಿಂಗ ಜಂಗಮರ ದಾಸೋಹ. ಭಗವಂತನು ಭಕ್ತರ ಉದ್ಧಾರಕ್ಕಾಗಿ ಈ ಮೂರು ರೂಪಗಳಲ್ಲಿ ಬರುವನು. ತನುಮನಧನಗಳನ್ನು ಕ್ರಮವಾಗಿ ಇವರಿಗೆ ಅರ್ಪಿಸಿ ಭಿನ್ನಭಾವವಿಲ್ಲದೆ ನಡೆದುಕೊಳ್ಳಬೇಕು. ಕರ್ಮಕ್ಕೆ ಪ್ರಾಧಾನ್ಯಕೊಡುವ ಶಾಸ್ತ್ರಗಳನ್ನನುಸರಿಸಿದರೆ ಸ್ವರ್ಗವೇ ಹೊರತು ಮುಕ್ತಿ ದೊರೆಯುವುದಿಲ್ಲ. ಚಾಂದ್ರಾಯಣಾದಿ ಎಂತಹ ವ್ರತಗಳನ್ನು ಮಾಡಿದರೂ, ಅಸಿಧಾರಾವ್ರತವನ್ನು ಕೈಕೊಂಡರೂ ಮುಕ್ತಿಯುಂಟಾಗುವುದೆಂದು ಯಾರು ಹೇಳಬಲ್ಲರು? ವೇದಗಳು ವಿವಿಧ ಯಾಗಗಳನ್ನು ವಿಧಿಸಿ ಪ್ರಾಣಹಿಂಸೆಯನ್ನು ಮಾಡಿಸುತ್ತಿವೆ. *"ಜೀವವಣುಮಾತ್ರವನು ನೋಯಿಸಿ ಭಕ್ತಿಯಲಿ ಕೈಲಾಸಪುರದೊಳಗೆ ಭವನ ಬಸುರೊಳಗಿರ್ದಡೆಯು ಸಂಭವಿಸುವವು ಕಡುನೋವು ಸಾವುಗಳು." ಹೀಗಿರುವಾಗ ಮುಕ್ತಿಯೆಂಬುದು ದೊರೆಯುವುದು ಹೇಗೆ? ಸ್ಮೃತಿಗಳಿಗೆ ಅಗೋಚರನಾಗಿದ್ದಾನೆ ಪರಮಾತ್ಮ. ಆದುದರಿಂದ ಆ ಪರಮಾತ್ಮನನ್ನು ಕಾಣ

---

೫೧. ಬ. ವ. ಪುಟ ೨೨. ೫೨. ಬ. ವ. ಪುಟ ೩೧. * ಪ್ರ. ಲಿಂ. ಲೀ.

ಬೇಕಾದರೆ ಗುರು ಲಿಂಗ ಜಂಗಮರಲ್ಲಿ ಭಕ್ತಿ, ಅವುಗಳ ದಾಸೋಹ—ಇವೇ ಮಾರ್ಗಗಳು ಅನ್ಯಥಾ ಇಲ್ಲ. ಆದರೆ ಈ ಭಕ್ತಿ, ನಿಷ್ಫಲವಾದ ಅಕೃತ್ರಿಮ ವಾದ ಆತ್ಮಾರ್ಪಣಮಾಡುವ ಭಕ್ತಿಯಾಗಿರಬೇಕು. ಏಕೆಂದರೆ ಭಗವಂತ ಒಲಿಯುವುದು ನಿಷ್ಕಪಟಿಗಳಿಗೆ, ದೃಢವ್ರತರಿಗೆ. ಆತನು ಭಕ್ತರನ್ನು ನಾನಾ ವಿಧಗಳಲ್ಲಿ ಪರೀಕ್ಷೆ ಮಾಡುತ್ತಾನೆ.

೫೩. "ನೆಚ್ಚಿದೆನೆಂದರೆ, ಮೆಚ್ಚಿದೆನೆಂದರೆ, ಸಲೆ ಮಾರುವೋದೆನೆಂದರೆ ತನುವನಲ್ಲಾಡಿಸಿ ನೋಡುವೆ ನೀನು, ಮನವನಲ್ಲಾಡಿಸಿ ನೋಡುವೆ ನೀನು, ಧನವನಲ್ಲಾಡಿಸಿ ನೋಡುವೆ ನೀನು. ಇವೆಲ್ಲಕ್ಕಂಜದಿದ್ದರೆ ಭಕ್ತಿಕಂಪಿತ ಕೂಡಲ ಸಂಗಮ ದೇವಾ"

೫೪. "ಭಕ್ತನಾಗಿ ತನ್ನ ಹಿಡಿದೆನೆಂದು ಹೋದರೆ, ಸುಗ್ಗು ಮಾಡುವ ನುಸಿಯ ಮಾಡುವ, ಮಣ್ಣು ಮಾಡುವ ನುಸಿಯ ಮಾಡುವ. ಕೂಡಲ ಸಂಗಮ ದೇವನ ನೆರೆ ನಂಬಿದನಾದರೆ ಕಡೆಗೆ ತನ್ನಂತೆ ಮಾಡುವ"

೫೫. "ಹರ ತನ್ನ ಭಕ್ತರ ತಿರಿವಂತೆ ಮಾಡುವ. ಒರೆದು ನೋಡುವ ಸುವರ್ಣದ ಚಿನ್ನದಂತೆ. ಅರೆದು ನೋಡುವ ಚಂದನದಂತೆ. ಅರಿದು ನೋಡುವ ಕಬ್ಬಿನ ಕೋಲಿನಂತೆ. ಬೆದರದೆ ಬೆಚ್ಚದೆ ಇದ್ದಡೆ ಕರವಿಡಿದೆತ್ತಿಕೊಂಬ ನಮ್ಮ ರಾಮನಾಥ"

ಆದುದರಿಂದ ದೇವರು ಬಹಳ ಒಳ್ಳೆಯವನೆಂದಾಗಲಿ, ಸುಲಭದಲ್ಲಿ ಒಲಿದು ಬಿಡುವನೆಂದಾಗಲಿ ಯಾರೂ ಮೋಸಹೋಗಬೇಡಿ. ನಾನು ನನ್ನ ಭಕ್ತರ ಸರ್ವಸ್ವವನ್ನೂ ಅಪಹಾರ ಮಾಡುತ್ತೇನೆ ಎಂದು ಭಗವಂತನು ಅರ್ಜುನನಿಗೆ ಹೇಳಿದ ಮಾತು ಸತ್ಯವಾದದ್ದು. ಭಗವಂತನು ತನ್ನ ಭಕ್ತರನ್ನು ಹೇಗೆ ಪರೀಕ್ಷಿಸುತ್ತಾನೆಂಬುದನ್ನು ಹಲವರು ಭಕ್ತರ ಕಥೆಗಳಲ್ಲಿ ನೋಡಿರುತ್ತೇವೆ. ಧನಕನಕಾದಿಗಳಲ್ಲಿಯೂ ದಾರಾಪುತ್ರಾದಿಗಳಲ್ಲಿಯೂ ಮೋಹವನ್ನು ಬಿಟ್ಟು ಯಾರು ಪರಮಾತ್ಮನಲ್ಲಿಯೇ ತಲ್ಲೀನರಾಗುವರೋ ಅವರಿಗೆ ಪರಮಾತ್ಮನು ಮುಕ್ತಿಯನ್ನು ನೀಡುವನು. ಒಂಟೆ ಸೂಜಿಯ ಕಣ್ಣಿನಲ್ಲಿ ಹಾದು ಹೋಗಬಹುದು, ಧನಮೋಹವುಳ್ಳವನು ಎಂದಿಗೂ

೫೩. ಬ. ವ. ಪುಟ ೩೨. ೫೪. ಬ. ವ. ಪುಟ ೧೦೪. ೫೫. ವ. ಶಾ. ಸಾ. ಭಾಗ ೧. (ಪೂ) ಪುಟ ೨೦೨.

ಕೈಲಾಸಕ್ಕೆ ಹೋಗಲಾರ. ಆದುದರಿಂದ ನಿಶ್ಚಲವಾದ ಭಕ್ತಿ ಅತ್ಯಾವಶ್ಯಕ. ಭಕ್ತನಾದವನು ಕಠಿನಪರೀಕ್ಷೆಗಳಲ್ಲಿ ಸಿಕ್ಕಿ ಮುಕ್ತನಾಗಬೇಕಾದುದರಿಂದ ಅಡಿಗಡಿಗೂ ಮನಸ್ಸನ್ನುಪರೀಕ್ಷಿಸಿಕೊಳ್ಳುತ್ತ ನಿರ್ಮಲಾಂತಃಕರಣನಾಗಬೇಕು. ಇದು ಕಷ್ಟ. ಆದುದರಿಂದ "ಭಕ್ತಿಯೆಂಬುದ ಮಾಡಬಾರದು, ಕರಗಸದಂತೆ ಹೋಗುತ್ತ ಕೊಯ್ವುದು ಬರುತ್ತ ಕೊಯ್ವುದು" ಎಂದು ಬಸವಣ್ಣನವರು ಅನುಭವದಿಂದ ಹೇಳಿದ್ದಾರೆ.

ಈ ಭಕ್ತಿಸಾಧನೆಗೆ ಇರುವ ಅಡಚಣೆಗಳೇನು? ಎಂದು ಕೇಳಿದರೆ, ಅಡಚಣೆಗಳು ಹಲವಾರು ಇವೆ ಎಂದು ಉತ್ತರ ಬರುತ್ತದೆ. ಮನುಷ್ಯನು ಸಂಸಾರವೇ ಸಾರಸರ್ವಸ್ವವೆಂದೂ, ಸಂಸಾರ ಸುಖವೇ ಶಾಶ್ವತಸುಖ ವೆಂದೂ ಭ್ರಮಿಸಿ, ಅದರಲ್ಲಿ ಮಗ್ನನಾಗಿ, ಕಷ್ಟ ದುಃಖಗಳನ್ನು ಅನುಭವಿಸು ತ್ತಿದ್ದರೂ ಸಂಸಾರದಿಂದ ಪಾರಾಗದೆ, ಭಗವಂತನನ್ನು ಮರೆಹೋಗದೆ ಇರುತ್ತಾನೆ. ಆತ್ಮನನ್ನು ಸಂಸಾರ ರಾಹು ಹಿಡಿದಿರುತ್ತದೆ.

೩೬. "ಚಂದ್ರಮನಂತೆ ಕಳೆ ಸಮನಿಸಿತ್ತೆನಗೆ, ಸಂಸಾರವೆಂಬ ರಾಹು ಸರ್ವಗ್ರಾಸಿ ಯಾಗಿ ನುಂಗಿತ್ತಯ್ಯಾ. ಇಂದೆನ್ನ ದೇಹಕ್ಕೆ ಗ್ರಹಣವಾಯಿತ್ತಯ್ಯಾ. ಇನ್ನೆಂದಿಗೆ ಮೋಕ್ಷವಹುದೋ ಕೂಡಲ ಸಂಗಮ ದೇವಾ"

ಎಂಬುದು ಅನುಭವಕ್ಕೆ ಬಂದು ಸಂಸಾರದಿಂದ ತನಗಾದ ವಿಪತ್ತನ್ನು ಕಂಡುಕೊಳ್ಳಬೇಕು.

೩೭. "ಸಂಸಾರ ಸಾಗರ ತೆರೆಕೊಬ್ಬಿ, ಮುಖದ ಮೇಲೆ ಅಲೆವುತ್ತಲಿದ್ದುದೇ? ಸಂಸಾರ ಸಾಗರ ಉರದುದ್ದವೇ ಹೇಳಾ? ಸಂಸಾರ ಸಾಗರ ಕೊರಳುದ್ದವೇ ಹೇಳಾ? ಸಂಸಾರ ಸಾಗರ ಶಿರದುದ್ದವಾದ ಬಳಿಕ ಏನ ಹೇಳುವೆನಯ್ಯಾ? ಅಯ್ಯಾ, ಅಯ್ಯಾ, ಎನ್ನ ಹುಯ್ಯಲ ಕೇಳಯ್ಯ. ಕೂಡಲ ಸಂಗಮ ದೇವಯ್ಯ ನಾನೇವೆನಯ್ಯ"

೩೮. "ಕಪ್ಪೆ ಸರ್ಪದ ನೆರಳಲ್ಲಿ ಇರ್ಪಂತೆ ಎನಗಾಯಿತ್ತಯ್ಯ. ಅಕಟಕಟಾ! ಸಂಸಾ ರವು ವೃಥಾ ಹೋಯಿತ್ತಲ್ಲ. ಕರ್ತೃ ಕೂಡಲ ಸಂಗಮ ದೇವಾ, ಇವನು ತಪ್ಪಿಸಿ ನನ್ನನು ರಕ್ಷಿಸಯ್ಯ ಪ್ರಭುವೇ"

---

೩೬. ಬ. ವ. ಪುಟ ೩. ೩೭. ಬ. ವ. ಪುಟ ೩. ೩೮. ಬ. ವ. ಪುಟ ೩.

೫೯. "ಶೂಲದ ಮೇಲಣ ಭೋಗವೇನಾದರೇನೋ? ನಾನಾ ವರ್ಣದ ಸಂಸಾರ ಹಾವ ಹಾವಾಡಿಗನ ಸ್ನೇಹದಂತೆ. ತನ್ನಾತ್ಮವೇ ತನಗೆ ಹಗೆಯಾದ ಬಳಿಕ ಬಿನ್ನಾಣ ವುಂಟೇ ಮಹಾದಾನಿ ಕೂಡಲ ಸಂಗಮ ದೇವಾ"

ಎಂದು ಸಂಸಾರದಲ್ಲಿ ಸಿಕ್ಕಿಕೊಂಡುದರ ಮಹಾದುರಂತ ಪರಿಣಾಮ ವನ್ನು ಬಸವಣ್ಣನವರು ವರ್ಣಿಸಿದ್ದಾರೆ. ಸಂಸಾರವೆಂಬ ಸಾಗರ ಉದ್ದುದ್ದವೂ ಕೊರಳುದ್ದವೂ ಇದ್ದರೂ ಉಳಿದು ಬರುವುದು ಕಷ್ಟ. ಶಿರದುದ್ದ ವಾಗಿ ಮುಳುಗುವಂತಾದರೆ, ತೆರೆಗಳು ಉಬ್ಬುಬ್ಬಿ ಅದುಮುತ್ತಿರುವುದಾದರೆ ಬದುಕುವುದು ಅಸಾಧ್ಯವೇ ಸರಿ. ಇದರಿಂದ ಪಾರುಮಾಡಿಸು ಎಂದು ಭಗವಂತನಲ್ಲಿ ಪ್ರಾರ್ಥನೆ ಮಾಡುತ್ತಾರೆ. ಇದು ಕಪಟಿಯ ಮೊರೆಯಲ್ಲ; ನೊಂದ ಹೃದಯದಿಂದ, ಬೆಂದ ಒಡಲಿಂದ ಹೊರಸೂಸುತ್ತಿರುವ ಮೊರೆ. ಸಂಸಾರಸರ್ಪವೆಂಬ ಮೃತ್ಯು, ಅದರ ಹೆಡೆಯ ನೆರಳಲ್ಲಿ ಸುಖವನ್ನು ಕಾಣಬಹುದೆಂದು ನಿಂತ ಕಪ್ಪೆಯ ತೆರನಾಯಿತು ತನಗೆ. ಇದರ ಭಯವನ್ನು ಬಿಡಿಸು. ನಿತ್ಯಮೃತ್ಯುವಿನ ಭಯವಿರುವ, ಈಗಲೋ ಆಗಲೋ ಶೂಲದ ಮೊನೆ ಒಳಕ್ಕೆ ಇಳಿಯುವ ಶೂಲದ ಸಂಸಾರದಲ್ಲಿ ಅದೇನು ಭೋಗ! ಅದೇನು ಸುಖ? ಇದರ ಆಸೆಯಿಂದ ಆತ್ಮನನ್ನು ಬಲಿಕೊಟ್ಟು ನರಕಕ್ಕಿಳಿ ಯುವಂತಾಯಿತು. ಹಾವನ್ನು ಆಡಿಸುವ ಹಾವಾಡಿಗನಿಗೆ ಆ ಹಾವೇ ಮೃತ್ಯು. ಮೃತ್ಯುವಿನೊಡನೆ ಎಂಥ ಸ್ನೇಹವಾದೀತು? ಎಂದು ಸೊಗಸಾದ ಉಪಮಾನ ಗಳಿಂದ ಸಂಸಾರದ ಕಾಳಸ್ವರೂಪವನ್ನು ತಿಳಿಸಿದ್ದಾರೆ.

೬೦. "ಸಾಸುವೆಯಷ್ಟು ಸುಖಕ್ಕೆ ಸಾಗರದಷ್ಟು ದುಃಖ ನೋಡಾ. ಗಳಿಗೆಯ ಜೇಟ ಮಾಡಿಹೆನೆಂಬ ಪರಿಯ ನೋಡಾ. ತನ್ನನಿಕ್ಕಿ ನಿಧಾನವ ಸಾಧಿಸಿಹೆನೆಂಬಡೆ ಬಿನ್ನಾಣ ತಪ್ಪಿತ್ತು ಗುಹೇಶ್ವರಾ"

ಎಂದು ಅಲ್ಲಮಪ್ರಭು ಹೇಳಿರುವುದು "What does it profit a man if he gain the whole world and lose his soul" ಎಂಬ ವಚನವನ್ನು ನೆನಪಿಗೆ ತರುತ್ತದೆ.

ಸಂಸಾರದಿಂದ ಬಿಡಿಸಬೇಕೆಂದು ಭಗವಂತನನ್ನು ಏಕೆ ಪ್ರಾರ್ಥಿಸ ಬೇಕು? ತಾನು ಮಾಡಿಕೊಂಡ ಸಂಸಾರವನ್ನು ತಾನೇ ಬಿಟ್ಟು ಹೋಗ ಬಹುದಲ್ಲ ಎಂದರೆ,

೫೯. ಬ. ವ. ಪುಟ ೩.   ೬೦. ಪ್ರ. ದೇ. ವ. ಪುಟ ೭೪.

೬೧. "ಅಯ್ಯಾ ನೀ ಮಾಡಲಾದ ಜಗತ್ತು, ಅಯ್ಯಾ ನೀ ಮಾಡಲಾದ ಸಂಸಾರ, ಅಯ್ಯಾ ನೀ ಮಾಡಲಾದ ಮದುವೆ, ಅಯ್ಯಾ ನೀ ಮಾಡಲಾದ ದುಃಖ, ಅಯ್ಯಾ ನೀ ಬಿಡಿಸಿದರೆ ಬಿಟ್ಟಿತ್ತು, ತಾಮಸವಯ್ಯಾ! ನಾನೀ ಮಾಯೆಯ ಗೆದ್ದೆನೆಂಬ ಹಮ್ಮೇಕೆ ಕೂಡಲ ಸಂಗಮ ದೇವಾ"

೬೨. "ಲೇಸ ಕಂಡು ಮನ ಬಯಸಿ ಬಯಸಿ, ಆಸೆ ಮಾಡಿದಡಿಲ್ಲ, ಕಂಡಯ್ಯಾ. ತಾಳಮರಕ್ಕೆ ಕಯ್ಯನೀಡಿ ಮೇಲೆ ನೋಡಿ ಗೋಣು ನೊಂದುದಯ್ಯಾ ಕೂಡಲ ಸಂಗಮ ದೇವಾ ಕೇಳಯ್ಯಾ, ನೀನೀವ ಕಾಲಕ್ಕಲ್ಲದೆ ಇಲ್ಲ ಕಂಡಯ್ಯಾ."

ಭಗವಂತನ ಅನುಗ್ರಹವಿಲ್ಲದೆ ಸಂಸಾರ ಬಿಡದು, ದುಃಖ ಹೋಗದು. ಮಕ್ಕಳು ಆಟದ ಗೊಂಬೆಗಳನ್ನಿಟ್ಟುಕೊಂಡು ಆಟವಾಡುತ್ತ ಕಾಲಕಳೆಯುವಂತೆ, ಈ ಮಾನವರು ಹೊನ್ನು, ಹೆಣ್ಣು, ಮಣ್ಣು ಎಂಬುದರಲ್ಲಿ ಕಾಲಕಳೆಯುತ್ತಿರಲೆಂದು ಭಗವಂತ ಏರ್ಪಾಟುಮಾಡಿದ್ದಾನೆ.

೬೩. "ನೆನೆವ ಮನಕ್ಕೆ ಹೊನ್ನ ತೋರಿದೆ. ನೋಡುವ ಕಂಗಳಿಗೆ ಹೆಣ್ಣ ತೋರಿದೆ, ಪೂಜಿಸುವ ಕೈಗೆ ಮಣ್ಣ ತೋರಿದೆ. ಇಂತೀ ತ್ರಿವಿಧಕ್ಕೆ ತ್ರಿವಿಧವ ತೋರಿ ನೀ ಬೇರಾದ ಬಿನ್ನಾಣಕ್ಕೆ ಬೆರಗಾದೆನ್ನೈ, ಅಮರಗುಂಡ ಮಲ್ಲಿಕಾರ್ಜುನಾ"

ಯಾರು ಈ ಬಿನ್ನಾಣವನ್ನು ಗ್ರಹಿಸಿ, ಹೊನ್ನು, ಹೆಣ್ಣು, ಮಣ್ಣುಗಳನ್ನು ತಿರಸ್ಕರಿಸಿ ಪರಮಾತ್ಮನನ್ನೇ ಬಯಸುವರೋ ಅವರಿಗೆ ಪರಮಾತ್ಮನು ಸದಾ ಸಿದ್ಧನಾಗಿರುತ್ತಾನೆ. ಇವುಗಳ ಕಡೆಗೆ ಮನಸ್ಸು ಹರಿಯದಂತೆ, ತನ್ನ ಕಡೆಗೆ ಮಾತ್ರ ಅದು ಕೇಂದ್ರೀಕರಿಸುವಂತೆ ಪರಮಾತ್ಮನೇ ಮಾಡಬೇಕಾಗಿದೆ.

೬೪. "ವಿಷಯವೆಂಬ ಹಸುರನೆನ್ನ ಮುಂದೆ ತಂದು ಪಸರಿಸದಿರಯ್ಯಾ. ಪಶುವೇನ ಬಲ್ಲುದು ಹಸುರೆಂದೆಳಸುವುದಲ್ಲದೆ? ವಿಷಯರಹಿತನ ಮಾಡಿ ಭಕ್ತಿರಸವ ದಣಿಯ ಮೇಯಿಸಿ, ಸುಬುದ್ಧಿ ಎಂಬ ಉದಕವನೆರೆದು, ನೋಡಿ ಸಲಹಯ್ಯಾ ಕೂಡಲ ಸಂಗಮ ದೇವಾ"

---

೬೧. ವ.ಶಾ.ಸಾ.ಭಾಗ ೧. (ಪೂ) ಪುಟ೨೪೯. (ಇದು ಬ.ವ. ದಲ್ಲಿಲ್ಲ) ೬೨. ಬ.ವ.ಪುಟ ೫.
೬೩. ವ. ಶಾ. ಸಾ. ಭಾಗ ೧. (ಪೂ) ಪುಟ ೨೨೧ ೬೪. ಬ. ವ. ಪುಟ ೯.

೬೫. "ಬಡಪಶು ಪಂಕದಲ್ಲಿ ಬಿದ್ದರೆ, ಕಾಲ ಬಡಿವುದಲ್ಲದೆ ಬೇರೆ ಗತಿಯುಂಟೇ;
ಶಿವ ಶಿವಾ, ಹೋದಿಹೆ, ಹೋದಿಹೆನಯ್ಯಾ. ನಿಮ್ಮ ಮನದತ್ತಲೆನ್ನ ತೆಗೆಯ
ಪಶು ನಾನು, ಪಶುಪತಿ ನೀನು. ತುಡುಗುಣಿ ಎಂದೆನ್ನ ಹಿಡಿದು ಬಡಿಯ
ಮುನ್ನ, ಒಡೆಯ ನಿಮ್ಮ ಬಯ್ಯದಂತೆ ಮಾಡು ಕೂಡಲ ಸಂಗಮ ದೇವಾ"

ಮನಸ್ಸು ಸಂಸಾರಾದಿಗಳಲ್ಲಿ ಮೋಹಗೊಂಡು ಮಗ್ನವಾಗದಂತೆ, ಅನ್ಯ ವಿಚಾರಗಳಿಗೊಳಗಾಗದಂತೆ, ನಿನ್ನ ಕಡೆಗೆ ಮಾತ್ರ ತಿರುಗುವಂತೆ ಕರುಣಿಸು

೬೬. "ಮನವಿದು ಒಮ್ಮೆ ಪ್ರಪಂಚದತ್ತ ಹರಿವುದು, ಒಮ್ಮೆ ಪರಮಾರ್ಥದತ್ತ ತಿ
ಗುವುದು. ಒಂದ ಹಿಡಿಸಿ ಒಂದ ಬಿಡಿಸುವುದು. ಇಂತೀ ಸಂದೇಹವನಿಕ್ಕಿ ದಂದು
ಗೊಳಿಸಿ ಮುಂದುಗೆಡಿಸಿ ಕಾಡುತ್ತಿದೆ. ಈ ಮನದ ಮರುಳುತನವ ಬಿಡಿ
ನಿಮ್ಮ ಶ್ರೀಪಾದದಲ್ಲಿರಿಸೆನ್ನ ನಿಜಗುರು ಸ್ವತಂತ್ರ ಸಿದ್ಧಲಿಂಗೇಶ್ವರಾ"

ಮನಸ್ಸನ್ನು ಸ್ವಾಧೀನಕ್ಕೆ ತೆಗೆದುಕೊಳ್ಳುವುದು ತೀವ್ರವಾದ ಶಿಕ್ಷಣ ಅದರ ಸ್ವಭಾವ ಯಾವಾಗಲೂ ವಕ್ರ. ಅದು ತನ್ನ ತಾ ವಿಚಾರಿಸುವುದಿಲ್ಲ ಉಳಿದುವೆಲ್ಲವನ್ನೂ ವಿಚಾರಿಸುತ್ತದೆ. ಒಮ್ಮೆ ನಂಬುತ್ತದೆ, ಪುನಃ ಸಂದೇ ಹಿಸುತ್ತದೆ.

೬೭. "ತನ್ನಿಚ್ಛೆಯ ನುಡಿದರೆ ಮೆಚ್ಚುವುದೀ ಮನವು. ಇದಿರಿಚ್ಛೆಯ ನುಡಿದ
ಮೆಚ್ಚದೀ ಮನವು."

ಇದರ ಜೊತೆಗೆ ಭಕ್ತನಾದವನು ಯೋಗಿಯಂತೆ, ತಪಸ್ವಿಯಂತೆ 'ಊರ ಬಿಟ್ಟು ಕಾಡ ಸೇರ'. ಅವನು ಊರಲ್ಲಿ ಜನಮಧ್ಯದಲ್ಲಿ ಇರತಕ್ಕವನು ಜೀವನೋಪಾಯಕ್ಕೆ ಯಾವುದಾದರೊಂದು ವೃತ್ತಿಯಲ್ಲಿರತಕ್ಕವನು. ಬಸ ವಣ್ಣನವರು ಬಿಜ್ಜಳನಲ್ಲಿ ಮಂತ್ರಿಗಳಾಗಿದ್ದರು. ತಿಂಗಳಿಗೆ ಸಾವಿ ಹೊನ್ನು ಸಂಬಳವಿರುತ್ತಿತ್ತು. ಆ ಸಂಬಳಕ್ಕೆ ತಕ್ಕ ರಾಜಕಾರ್ಯವೂ ಇರು ತ್ತಿತ್ತು. ಕಲಚೂರ್ಯ ಚಕ್ರಾಧಿಪತ್ಯದ ಮಂತ್ರಿಗೆ ಕೆಲಸಕ್ಕೆ ಕಡಮೆ ಯೇನೂ ಇಲ್ಲ. ಆದುದರಿಂದ ಕೂಡಲ ಸಂಗನ ಸೇವೆಗೆ ಕಾಲವೆಲ್ಲಿಂದ ಬರಬೇಕು? ಬಸವಣ್ಣನವರ ದುಃಖವನ್ನು ಹೇಳತೀರದು.

೬೫. ಬ. ವ. ಪುಟ ೯. ೬೬. ಸ್ವ. ಸಿ. ವ. ಪುಟ ೧೦.
೬೭. ಬ. ವ. ಪುಟ ೭.

೩೮. "ಕಾಂಚನವೆಂಬ ನಾಯ ನೆಚ್ಚಿ ನಿಮ್ಮ ನಾನು ಮರೆದೆನಯ್ಯ! ಕಾಂಚನಕ್ಕೆ ವೇಳೆಯಲ್ಲದೆ ಲಿಂಗಕ್ಕೆ ವೇಳೆಯಿಲ್ಲ. ಹಡಕಿಗೆ ಮೆಚ್ಚಿದ ಸೊಣಗನು ಅಮೃತದ ರುಚಿಯ ಬಲ್ಲುದೇ ಕೂಡಲ ಸಂಗಮ ದೇವಾ"

೩೯. "ಉದಯಾಸ್ತಮಾನವೆನ್ನ ಹೆಂಡ ಬಸುರಿಂಗೆ ಕುದಿಯಲಲ್ಲದೆ, ನಿಮ್ಮ ನೆನೆಯಲು ತೆರಹಿಲ್ಲವಯ್ಯ! ಎಂತೋ ಲಿಂಗ ತಂದೆ, ಎಂತಯ್ಯಾ! ಎನ್ನ ಪೂರ್ವಲಿಖಿತ. ಹಿರಣಿಯನಾಯಲಲ್ಲದೆ, ಅಟ್ಟುಣ್ಣ ತೆರಹಿಲ್ಲೆನಗೆ, ನೀ ಕರುಣಿಸು ಕೂಡಲ ಸಂಗಮ ದೇವಾ"

ಎಂದು ಮೊರೆಯಿಡುತ್ತಿದ್ದರು. ಹೀಗೆ ಕೂಡಲ ಸಂಗನ ಸೇವೆಗೆ ತಕ್ಕಷ್ಟು ವಿರಾಮವಿಲ್ಲವೆಂದು ಕೊರಗುತ್ತಿದ್ದಾಗ, ಅವರು ಸ್ವಪತೀಯರ ಆಕ್ಷೇಪಣೆಯನ್ನೂ ಹೊತ್ತುಕೊಳ್ಳಬೇಕಾಯಿತು. ಬಿಜ್ಜಳ ಭವಿ, ಬಸವಣ್ಣನವರು ಭಕ್ತರು. ಭವಿಯ ಸಹವಾಸವನ್ನು ನಿಷೇಧಿಸುತ್ತಿದ್ದ ಬಸವಣ್ಣನವರು, ತಾವೇ ಭವಿಯ ಸೇವೆಯನ್ನು ಮಾಡುತ್ತಿರುವರಲ್ಲ! ನಡೆಯೊಂದು ಪರಿ ನುಡಿಯೊಂದು ಪರಿ; ದ್ರವ್ಯಾಭಿಲಾಷೆಯಿಂದ ಮತಧರ್ಮವನ್ನೂ ತ್ಯಜಿಸುತ್ತಿದ್ದಾರೆ ಎಂದು ಜಂಗಮಾದಿಗಳು ದೋಷಾರೋಪಣೆ ಮಾಡತೊಡಗಿದರು. ಇಂಥ ದೋಷಾರೋಪಣೆಗಳು ಒಂದಲ್ಲ ಒಂದು, ಭಕ್ತರ ಸಾಧಕರ ಜೀವನ ಚರಿತ್ರೆಗಳಲ್ಲಿ ಕಂಡು ಬರುತ್ತವೆ. ಬಸವಣ್ಣನವರು

೭೦. "ನಾನು ಆರಂಬವ ಮಾಡುವೆನಯ್ಯ ಗುರುಪೂಜೆಗೆಂದು. ನಾನು ಬೆವಹಾರವ ಮಾಡುವೆನಯ್ಯ ಲಿಂಗಾರ್ಚನೆಗೆಂದು. ನಾನಾ ಪರಸೇವೆಯ ಮಾಡುವೆನಯ್ಯ ಜಂಗಮದಾಸೋಹಕ್ಕೆಂದು. ನಾನಾವ ಕರ್ಮಂಗಳ ಮಾಡಿದಡೆಯೂ, ಆ ಕರ್ಮಫಲಭೋಗವ ನೀ ಕೊಡುವೆ ಎಂಬುದ ನಾ ಬಲ್ಲೆನು. ನೀ ಕೊಟ್ಟ ದ್ರವ್ಯ ನಿಮಗಲ್ಲದೆ ಮತ್ತೊಂದು ಕ್ರಿಯೆ ಮಾಡೆನು. ನಿಮ್ಮ ಸೊಮ್ಮು ನಿಮಗೆ ಸಲಿಸುವೆನು ಕೂಡಲ ಸಂಗಮ ದೇವಾ

೭೧. "ಹೊತ್ತಾರೆ ಎದ್ದು, ಕಣ್ಣ ಹೊಸೆವುತ್ತ, ಎನ್ನ ಒಡಲಿಂಗೆ, ಎನ್ನ ಒಡವೆಗೆ ಎನ್ನ ಮಡದಿ ಮಕ್ಕಳಿಗೆಂದು ಕುದಿದೆನಾದರೆ, ಎನ್ನ ಮನಕ್ಕೆ ಮನವೇ ಸಾಕ್ಷಿ. ಭವಿ ಬಿಜ್ಜಳನ ಗದ್ದುಗೆಯ ಕೆಳಗೆ ಕುಳ್ಳಿರ್ದು ಓಲೈಸಿಹೆನೆಂದು ನುಡಿವರಯ್ಯ ಪ್ರಮಥರು. ಕೊಡುವೆನುತ್ತರವನವರಿಗೆ, ಕೂಡಲಸ್ಮ; ಹೊಲೆ ಹೊಲೆಯರ ಮನೆಯ ಹೊಕ್ಕಾ

---

೩೮. ಬ. ವ. ಪುಟ ೪೩. ೩೯. ಬ. ವ. ಪುಟ ೩೧. ೭೦. ಬ. ವ. ಪುಟ ೧೦೮
೭೧. ಬ. ವ. ಪುಟ ೧೦೮.

ದರೆಯೂ ಸಲೆ ಕೈ ಕೂಲಿಯ ಮಾಡಿಪರೆಯೂ, ನಿಮ್ಮ ನಿಲವಿಂಗೆ ಕುದಿವೆನಲ್ಲದೆ,
ಎನ್ನೊಡಲವಸರಕ್ಕೆ ಕುದಿದೆನಾದರೆ ತಲೆದಂಡ, ಕೂಡಲ ಸಂಗಮ ದೇವಯ್ಯಾ"

ಎಂದು ಭಗವಂತನಲ್ಲಿ ಸಮಾಧಾನಗೊಟ್ಟುಕೊಂಡು, ಅಂತರ್ಯಾಮಿಯಾದ ಆ ಭಗವಂತನನ್ನೇ ತಮ್ಮ ನಿಸ್ಪೃಹತೆಗೆ, ನಿಸ್ವಾರ್ಥಕ್ಕೆ ಸಾಕ್ಷಿ ಕೋರುತ್ತ ಜಂಗಮರಿಗೆ ಉತ್ತರವೀಯುತ್ತಿದ್ದರು. ಹೀಗೆ ಮನಸ್ಸಿನಲ್ಲಿ ಹಲವಾರು ಯೋಚನೆಗಳು ತುಂಬಿಕೊಂಡು,

೭೨. "ಮರನನೇರಿದ ಮರ್ಕಟನಂತೆ ಹಲವು ಕೊಂಬೆಗೆ ಹಾಯುತ್ತಲಿದ್ದೇನೆ. ಬೇವ ಮನವ ನಾನೆಂತು ನಂಬುವೆನಯ್ಯಾ! ಎಂತು ನೆಚ್ಚುವೆನಯ್ಯಾ! ಎನ್ನ ತಂದೆ ಕೂಡಲ ಸಂಗಮ ದೇವನಲ್ಲಿಗೆ ಹೋಗಲೀಯುದಯ್ಯಾ"

೭೩. "ಎಂತು ಶಿವಭಕ್ತಿಯ ನಾನುಪಮಿಸುವೆನಯ್ಯಾ? ಎಂತು ಶಿವಾಚಾರವೆನಗೆ ಸಾಧ್ಯವಪ್ಪುದಯ್ಯ? ಕಾಮ ಕ್ರೋಧ ಲೋಭ ಮೋಹ ಮದ ಮತ್ಸರಂಗಳಿಂದ ಕಟ್ಟುವಡೆದೆನು. ಹಸಿವು ತೃಷೆ ವ್ಯಸನಂಗಳಿಂದೆ ಕುದಿಯುತ್ತಿದ್ದೇನೆ. ಪಂಚೇಂದ್ರಿಯ ಸಪ್ತಧಾತು ಮರಿಹಂಚುಮಾಡಿ ಕಾಡಿಹವಯ್ಯಾ. ಅಯ್ಯಾ, ಎನ್ನ ಹುಯ್ಯಲ ಕೇಳಯ್ಯಾ ಕೂಡಲ ಸಂಗಮ ದೇವಾ"

ಎಂದು ಕೂಡಲಸಂಗನಲ್ಲಿ ತಪ್ಪನ್ನೊಪ್ಪಿಕೊಳ್ಳುತ್ತ—ನನ್ನ ತಪ್ಪುಗಳನ್ನು ಎಣಿಸಬೇಡ, ನೀನೇ ದಯಮಾಡಿ ತಪ್ಪುಗಳನ್ನು ತಿದ್ದು, ಒಪ್ಪಮಾಡಿಕೋ, ಪ್ರತ್ಯಕ್ಷನಾಗು, ಕೈಹಿಡಿದು ಉದ್ಧರಿಸು—ಎಂದು ಬೇಡುತ್ತಿದ್ದರು.

೭೪. "ಆನು ಮಾಡಿದ ತಪ್ಪನೆಣಿಸಿಹೆನೆಂದರೆ ಗಣನೆಯಿಲ್ಲ. ನಡೆದು ತಪ್ಪುವೆನು, ಮಾಡಿ ತಪ್ಪುವೆನು, ನೀಡಿ ತಪ್ಪುವೆ, ಕೂಡಿ ತಪ್ಪುವೆ, ಅರಿದು ತಪ್ಪುವೆ. ಮರೆದು ತಪ್ಪುವೆ, ಎನ್ನ ತಪ್ಪನೊಪ್ಪಮಾಡಿಕೊಂಬುದಲ್ಲದೆ, ಚಿತ್ತಕ್ಕೆ ತರಲಾಗದು ಕೂಡಲ ಸಂಗಮ ದೇವಾ"

೭೫. "ಎನ್ನ ಅವಗುಣವ ಸಂಪಾದಿಸದಿರಯ್ಯಾ. ನಿನಗಾನು ಸರಿಯೆ? ಪ್ರತಿಯಿಲ್ಲದ ಅಪ್ರತಿಮ ನೀನು. ನಿಮಗಾನು ಸರಿಯೇ ಅಯ್ಯಾ? ಅಪ್ರತಿಮ ಕೂಡಲ ಸಂಗಮ ದೇವಾ. ನೀವು ಮಾಡಲಾದವ ನಾನು. ಎನ್ನೊಡನೆ ಮುನಿವರೆ ಹೇಳಾ?

---

೭೨. ಬ. ವ. ಪುಟ ೬. ೭೩. ಬ. ವ. ಪುಟ ೮.
೭೪. ವ.ಶಾ.ಸಾ. ಭಾಗ ೧. ಪೂ. ಪುಟ ೩೬೬. ೭೫. ವ.ಶಾ.ಸಾ. ಭಾಗ ೧. ಪೂ. ಪುಟ ೨೬

೭೬. "ಮೇರು ಗುಣವನರಸುವುದೇ ಕಾಗೆಯಲ್ಲಿ? ಪರುಷ ಗುಣವನರಸುವುದೇ ಕಬ್ಬುನದಲ್ಲಿ? ಸಾಧು ಗುಣವನರಸುವನೇ ಅವಗುಣಿಯಲ್ಲಿ? ಚಂದನ ಗುಣವನರಸುವುದೇ ತರುಗಳಲ್ಲಿ? ಸರ್ವಗುಣಸಂಪನ್ನ ಲಿಂಗವೇ? ನೀನೆನ್ನಲ್ಲಿ ಅವಗುಣವನರಸುವುದೇ ಕೂಡಲ ಸಂಗಮ ದೇವಾ"

ತಮ್ಮಲ್ಲಿ ನಿಜವಾದ ಭಕ್ತಿ ಇನ್ನೂ ಉದ್ಭವಿಸಿಲ್ಲ, ತಮ್ಮಲ್ಲಿರುವ ಲೋಪ ದೋಷಗಳು ನಾಶವಾಗಿಲ್ಲ, ಆದುದರಿಂದಲೇ ಭಗವಂತ ಪ್ರತ್ಯಕ್ಷನಾಗಿಲ್ಲ ಎಂದು ಆಗಾಗ ಬಸವಣ್ಣನವರಿಗೆ ತಿಳಿಯುತ್ತಿದ್ದಿತು.

೭೭. "ಮನ ಮನ ಬೆರಸಿದಲ್ಲಿ, ತನು ಕರಗದಿದ್ದಡೆ, ಸೋಂಕಿನಲ್ಲಿ ಪುಳಕಂಗಳು ಹೊರ ಹೊಮ್ಮದಿದ್ದಡೆ, ಕಂಡಾಗಳಶ್ರುಜಲಂಗಳು ಸುರಿಯದಿದ್ದಡೆ, ನುಡಿವಲ್ಲಿ ಗದ್ಗದಂಗಳು ಪೊಣ್ಮದಿದ್ದಡೆ, ಕೂಡಲ ಸಂಗಮ ದೇವರ ಭಕ್ತಿಗಿದು ಚಿಹ್ನ, ಎನ್ನಲ್ಲಿ ಇಲ್ಲವಾಗಿ, ಆನು ಡಂಭಕ ಕಾಣಿರೇ"

೭೮. "ಕೆಲಕ್ಕೆ ಶುದ್ಧನಾದೆನಲ್ಲದೆ, ಎನ್ನ ಮನಕ್ಕೆ ಶುದ್ಧನಾಗೆನಯ್ಯ! ಕೈಮುಟ್ಟಿ ಪೂಜಿಸುವಡೆ, ಎನ್ನ ಕೈ ಶುದ್ಧವಲ್ಲಯ್ಯ! ಮನಮುಟ್ಟಿ ಪೂಜಿಸುವಡೆ ಎನ್ನ ಮನ ಶುದ್ಧವಲ್ಲಯ್ಯ! ಭಾವ ಶುದ್ಧವಾದಡೆ, ಕೂಡಲ ಸಂಗಮ ದೇವಯ್ಯನಿತ್ತ ಬಾ ಎಂದೆತ್ತಿಕೊಳ್ಳನೇಕಯ್ಯ"

೭೯. "ಅಚ್ಚ ಶರಣರು ನಿಮ್ಮ ನಿಚ್ಚ ನಿಚ್ಚ ನೆನೆವರು. ಬಚ್ಚ ಬರಿಯ ಮಾತನಾಡುವೆನು. ಒಪ್ಪಚ್ಚಿ ಅರೆಭಕ್ತಿ, ನೆನೆಯಲೀಯದು ನಿಮ್ಮ. ಮೆಚ್ಚರು ನಿಮ್ಮ ಶರಣರು ಎನ್ನ, ಕೂಡಲ ಸಂಗಮ ದೇವಾ"

೮೦. "ಮಸಿಯನೇಸು ಕಾಲ ಬೆಳಗಿದರೆ ಬಿಳಿದಾಗಬಲ್ಲುದು? ಕರ್ಮಸ್ಥಿತಿ ಬೆನ್ನ ಬಿಡದು. ಅನಂತ ಕೋಟಿ ಸನ್ಮಾನವ ಮಾಡಿದಡೇನು? ನಿಮಿಷದ ಉದಾಸೀನ ಕೆಡಿಸಿತ್ತು. ಕೂಡಲ ಸಂಗಮ ದೇವಾ ನಿಮ್ಮ ನಂಬಿಯೂ ನಂಬದ ಡಂಭಕ ನಾನಯ್ಯ"

ಅಂತರಂಗಶುದ್ಧಿ ಸುಲಭವಾಗಿ ದೊರೆಯದ್ದರಿಂದ ಭಕ್ತಿಮಾರ್ಗ ಸುಲಭವಲ್ಲೆಂದು ಬಸವಣ್ಣನವರು ತಮ್ಮ ಅನುಭವದಿಂದಲೇ ಹೇಳಿದರು. ಭಗವಂತನು ಕಪಟಿಗಳಿಗೆ ಹೇಗೆ ಒಲಿಯುವನು? ಆದುದರಿಂದ ಬಸವಣ್ಣನವರು ಅಂತರ್ಮುಖಿಗಳಾಗಿ ಅಂತರಂಗದಲ್ಲಿ ಹುದುಗಿದ್ದ ಲೋಪಗಳನ್ನು ಹುಡುಕಿ ಅವುಗಳನ್ನು ಸುಡುವ ಪ್ರಯತ್ನಮಾಡಿದರು.

---

೭೬. ಬ. ವ. ಪುಟ ೧೧ ೭೭. ಬ. ವ. ಪುಟ ೫೬ ೭೮. ಬ. ವ. ಪುಟ ೪೩
೭೯. ಬ. ವ. ಪುಟ. ೪೫. ೮೦. ಬ. ವ. ಪುಟ ೫೭.

೮೧. "ನಿಮ್ಮ ಭಕ್ತಿಯಲ್ಲಿ ದರದುರನೆಂಬೆ. ದಿಟಕ್ಕೆ ಬಂದರೆ, ಅಡ್ಡಮುಖವಿಕ್ಕುವೆ, ಗರುಡಂಗೆ ಘಟಸರ್ಪನ ತೋರುವಂತೆ, ಶಿವಶರಣರೆಂದರೆ ಕಿವಿ ಕೇಳದಂತಿಹೆನು, ಮನಕ್ಕೆ ಮನ ಸಾಕ್ಷಿಯಯ್ಯಾ, ಕೂಡಲ ಸಂಗಮ ದೇವಾ"

೮೨. "ಸ್ಥಾವರ ಜಂಗಮ ಒಂದೇ ಎಂದು ಇದಿರ ನುಡಿವೆ. ನಾನೆಡಹುತಿಪ್ಪೆ, ಸಹಜ ನಲ್ಲಯ್ಯಾ. ಆನು ಸಮ್ಯಕ್ತನಲ್ಲಯ್ಯಾ. ಆನು ಉಭಯಲಿಂಗಸಂಗಿ ಎಂಬೆನು, ಈ ನುಡಿ ಸುಡದಿಹುದೇ ಕೂಡಲ ಸಂಗಮ ದೇವಾ"

ತಾವು ಮೊದಲು ಬ್ರಾಹ್ಮಣರಾಗಿದ್ದು ಅನಂತರ ಶಿವಾಚಾರವನ್ನು ಕೈಹಿಡಿದವರು. ತಮ್ಮಲ್ಲಿ ಇನ್ನೂ ಜಾತ್ಯಹಂಕಾರವಿರುವುದೆಂದು ಕೂಡಲ ಸಂಗನು ಬಗೆದಿರುವನೋ ಏನೋ. ಆ ದಿನವೇ ತಂದೆ ತಾಯಿಗಳನ್ನೂ ನೆಂಟರಿಷ್ಟರನ್ನೂ ಕರ್ಮಲತೆಯಂತಿದ್ದ ಜನಿವಾರವನ್ನೂ ತ್ಯಜಿಸಿ ಶಿವಜಾತಿ ಯನ್ನು ಕೈಹಿಡಿಯಲಿಲ್ಲವೆ? ಇನ್ನೂ ಪೂರ್ವಾಶ್ರಮದ ನೆನಹು ತಮ್ಮಲ್ಲಿರುವುದೆ?

೮೩. "ಅಪ್ಪನು ಡೋಹರ ಕಕ್ಕಯ್ಯನಾಗಿ, ಮುತ್ತೈಯ್ಯ ಚೆನ್ನಯ್ಯನಾದರೆ ಆನು ಬದುಕುವೆನು. ಮತ್ತಾ ಶ್ವಪಚಯ್ಯನ ಸನ್ನಿಧಿಯಿಂದ ಭಕ್ತಿಯ ಸದ್ಗುಣವ ನಾನರಿವೆನಯ್ಯಾ. ಕಷ್ಟಜಾತಿ ಜನ್ಮದಲಿ ಜನಿಸಿದೆ. ಎನಗಿದು ವಿಧಿಯೆ? ಕೂಡಲ ಸಂಗಮ ದೇವಾ?"

೮೪. "ಉತ್ತಮದ ಕುಲದಲ್ಲಿ ಹುಟ್ಟಿದೆನೆಂಬ, ಕಷ್ಟತನದ ಹೊರೆಯ ಹೊರಿಸದಿರಯ್ಯಾ! ಕಕ್ಕಯನೊಕ್ಕುದನಿಕ್ಕ ನೋಡಯ್ಯಾ. ದಾಸಯ್ಯ ಶಿವದಾನವನೆರೆಯ ನೋಡಯ್ಯಾ, ಮನ್ನಣೆಯ ಚೆನ್ನಯ್ಯನೆನ್ನುವ ಮನ್ನಿಸ. ಉನ್ನತ ಮಹಿಮ, ಕೂಡಲ ಸಂಗಮ ದೇವಾ, ಶಿವಧೋ, ಶಿವಧೋ"

ಆದುದರಿಂದ ತಮ್ಮಲ್ಲಿ ಅಂಥ ಅಹಂಕಾರವಾಗಲಿ ತಾರತಮ್ಯ ಭಾವನೆ ಯಾಗಲಿ ಇಲ್ಲ.

"ವಿಪ್ರಮೊದಲು ಅಂತ್ಯಜ ಕಡೆಯಾಗಿ ಶಿವಭಕ್ತರಾದವರೆಲ್ಲರನು ಒಂದೇ ಎಂದು ನಂಬುವುದೆನ್ನ ಮನವು"

ಎಂದು ಹೇಳುತ್ತಿದ್ದರು. ಹೀಗೆ ಹಲವು ವಿಧಗಳಲ್ಲಿ ಆತ್ಮಪರೀಕ್ಷೆಯನ್ನು ಮಾಡಿ ಕೊಳ್ಳುತ್ತ ಪರಮಾತ್ಮನ ದರ್ಶನಕ್ಕಾಗಿ ಉತ್ಸುಕರಾಗಿ, ಇಂದು ಬರಬಹುದು ನಾಳೆ ಬರಬಹುದು ಎಂದು ಕಾದು ಕಾದು ಬೇಸತ್ತು, ಬರದೆ ಕೋಟಲೆಗೊ ಳಿಸುತ್ತಿರುವ ಕೂಡಲಸಂಗನನ್ನು ಕುರಿತು:

---

೮೧. ಬ. ವ. ಪುಟ ೪೩. ೮೨. ಬ. ವ. ಪುಟ ೫೩.
೮೩. ಬ. ವ. ಪುಟ ೫೧. ೮೪. ಬ. ವ. ಪುಟ ೫೧.

೮೫. "ಹುಟ್ಟಿಂದು ಲೋಕದಲ್ಲಿ ಹುಟ್ಟಿಸಿ ಇಳಿಯಬಿಟ್ಟರೆ, ನಿಮ್ಮ ನಗುವರಯ್ಯ. ಶಿವ ಬಟ್ಟೆಯಲೆನ್ನನು ಇರಿಸಯ್ಯಾ ಹರನೇ. ಹೊಲಬುಗೆಟ್ಟೆನು, ಬಟ್ಟೆಯ ತೋರಯ್ಯ. ಹುಯ್ಯಲಿಟ್ಟೆನು, ಗಣಂಗಳು ಕೇಳಿರಯ್ಯ! ಕೂಡಲ ಸಂಗಮ ದೇವ ಎನ್ನ ಕಾಡಿಹನಯ್ಯ"

೮೬. "ಅಕಟಕಟ, ಶಿವ ನಿನಗಿನಿತು ಕರುಣವಿಲ್ಲ. ಅಕಟಕಟ, ಶಿವ ನಿನಗಿನಿತು ಕೃಪೆಯಿಲ್ಲ. ಏಕೆ ಹುಟ್ಟಿಸಿದೆ ಇಹಲೋಕ ದುಃಖಿಯ, ಪರಲೋಕ ದೂರನ? ಏಕೆ ಹುಟ್ಟಿಸಿದೆ? ಕೂಡಲ ಸಂಗಮ ದೇವಾ ಕೇಳಯ್ಯ, ಎನಗಾಗಿ ಮತ್ತೊಂದು ತರುಮರಾದಿಗಳಿಲ್ಲವೇ?"

೮೭. "ಕಾಳಿದಾಸಂಗೆ ಕಣ್ಣನಿತ್ತೆ, ಓಹಿಲಯ್ಯನ ನಿಜಪುರಕೊಯ್ದೆ. ನಂಬಿ ಕರೆವಡೆ ಓ ಎಂದೆ. ತೆಲುಗು ಜೊಮ್ಮಯ್ಯಂಗೆ ಒಲಿದೆ ದೇವಾ! ಕೂಡಲ ಸಂಗಮ ದೇವಾ ಎನ್ನನೇಕೊಲ್ಲೆಯಯ್ಯ"

ಎಂದು ಗೋಗರೆಯುತ್ತ ಕೇಳುತ್ತಿದ್ದರು. ಹೀಗೆ ಬಸವಣ್ಣನವರು ಸಂಕಟಪಡುತ್ತ ಕುಗ್ಗಿ ಹೋಗಿದ್ದಾಗ ಮತ್ತೊಂದು ಕಟುವಾದ ಪರೀಕ್ಷೆ ಎದುರು ಬಂತು. ಸುತ್ತಮುತ್ತಲಿದ್ದ ಭಕ್ತರೂ ಜಂಗಮರೂ ಬಸವಣ್ಣನವರ ಬಾಹ್ಯಾಚರಣೆಗಳನ್ನು ನೋಡಿ ಮೆಚ್ಚಿಕೊಳ್ಳುತ್ತಿದ್ದರು. ಬಸವಣ್ಣನವರ ಅಂತರಂಗದ ಕೊರಗನ್ನು ಅವರು ಕಾಣರು. ಅವರೆಲ್ಲ "ಬಸವಣ್ಣನವರಂಥ ಭಕ್ತರಿಲ್ಲ, ಹೀಗೆ ದಾಸೋಹವನ್ನು ಮಾಡಿದವರು ಹಿಂದಿರಲಿಲ್ಲ, ಈಗಲೂ ಇಲ್ಲ" ಎಂದು ಮುಂತಾಗಿ ಸಹಜ ವಿಶ್ವಾಸದಿಂದಲೇ ಹೊಗಳುತ್ತಿದ್ದರು. ಆ ಹೊಗಳಿಕೆಯನ್ನು ಕೇಳಿ ಬಸವಣ್ಣನವರು ಮತ್ತಷ್ಟು ನೊಂದುಕೊಳ್ಳಬೇಕಾಯಿತು.

೮೮. "ಎನ್ನಲ್ಲಿ ಭಕ್ತಿ ಸಾಸವೆಯ ಷಡ್ಭಾಗದನಿತಿಲ್ಲ. ಎನ್ನ ಭಕ್ತನೆಂಬರು, ಎನ್ನ ಸಮಯಾಚಾರಿ ಎಂಬರು. ನಾನೇನ ಪಾಪವ ಮಾಡಿದೆನೋ? ಬೆಳೆಯದ ಮುನ್ನವೇ ಕೊಯ್ಯುವರೇ ಹೇಳಾ? ಇರಿಯದ ವೀರ, ಇಲ್ಲದ ಸೊಬಗುವ, ಎಲ್ಲ ಒಡೆಯರು ಏರಿಸಿ ನುಡಿವರು. ಎನಗಿದು ವಿಧಿಯೇ ಕೂಡಲ ಸಂಗಮ ದೇವಾ"

---

೮೫. ಬ. ವ. ಪುಟ ೧೦. ೮೬. ಬ. ವ. ಪುಟ ೧೦. ೮೭. ಬ. ವ. ಪುಟ ೭೭.
೮೮. ಬ. ವ. ಪುಟ ೫೭.

೮೯. "ಎನ್ನವರೊಲಿದು, ಹೊನ್ನಶೂಲದಲಿಕ್ಕಿದರೆನ್ನ ಹೊಗಳಿ ಹೊಗಳಿ. ಎನ್ನ ಹೊಗಳಿಕೆ ಎನ್ನ ಮೈಗೊಂಡಿತ್ತಲ್ಲಾ! ಅಯ್ಯೋ ನಿಮ್ಮ ಮನ್ನಣೆಯೇ ಮಸೆದಲ ಗಾಗಿ ತಾಗಿತ್ತಯ್ಯಾ! ಅಯ್ಯೋ! ನೊಂದೆನು, ಸೈರಿಸಲಾರೆನು. ಕೂಡಲ ಸಂಗಮ ದೇವಾ, ನೀನೆನಗೊಳ್ಳಿದನಾದರೆ, ಎನ್ನ ಹೊಗಳತೆಗಡ್ಡಬಾರಾ ಧರ್ಮಿ"

ಹೀಗೆ ನೊಂದುಕೊಳ್ಳುತ್ತಿದ್ದರೂ ಬಸವಣ್ಣನವರಲ್ಲಿ ಸಹಜಮಾಟ ವೆಂಬುದು ತಲೆದೋರಿರಲಿಲ್ಲ. "ನಾನು ಮಾಡುತ್ತೇನೆ, ಬೇಕಾದವರು ಬೇಕಾದುದನ್ನು ಬೇಡಲಿ, ಎಲ್ಲವನ್ನೂ ಕೊಡುತ್ತೇನೆ," ಎಂಬ ಮನೋಭಾವ ಅವರಲ್ಲಿತ್ತು.

೯೦. "ತನುವ ಬೇಡಿದಡೀವೆ, ಮನವ ಬೇಡಿದಡೀವೆ, ಧನವ ಬೇಡಿದಡೀವೆ, ಬೇಡು ಬೇಡೆಲೆ ಹಂದೇ. ಕಣ್ಣ ಬೇಡಿದಡೀವೆ, ತಲೆಯ ಬೇಡಿದಡೀವೆ. ಕೂಡಲಸಂಗಮ ದೇವಾ, ನಿಮಗಿತ್ತು ಶುದ್ಧನಾಗಿಪ್ಪೆ ನಿಮ್ಮ ಪುರಾತನರ ಮನೆಯಲ್ಲಿ"

ಎಂದು ಹೇಳುವುದನ್ನು ಅಲ್ಲಮಪ್ರಭು ಕಲ್ಯಾಣಕ್ಕೆ ಬಂದಾಗ ಖಂಡಿ ಸಿದನು. ತನುಮನಧನಗಳೆಲ್ಲ ಗುರುಲಿಂಗಜಂಗಮರ ಸ್ವತ್ತಾಗಿವೆ. ನೀನು ಕೊಡುವುದು ಏನು? ಯಾರಿಗೆ ನೀನು ದಾಸೋಹ ಮಾಡಬೇಕೆಂದಿರುವೆ? ಇದೇನು ಈ ಪೂಜೆ, ಆರಾಧನೆಗಳ ಗೊಂದಲ. ದೇವರು ಬೇಡುವುದಕ್ಕೆ ತಿರುಕನೆ?

೯೧. "ಮಹಾಮೇರುವಿನ ಮರೆಯಲಿದ್ದು ಭೂತನ ನೆಳಲನಾಚರಿಸುವ ಕರ್ಮಿ ನೀ ಕೇಳಾ! ಅದು ಆ ಮಹಾಲಿಂಗಕ್ಕೆ ಮಜ್ಜನವೆಂದೇನೋ, ಪರಿಮಳ ಲಿಂಗಕ್ಕೆ ಪತ್ರ ಪುಷ್ಪಂಗಳೆಂದೇನೋ, ಜಗಜ್ಜ್ಯೋತಿ ಲಿಂಗಕ್ಕೆ ಧೂಪ ದೀಪಾರ್ತಿಯೆಂದೇನೋ ಅಮೃತಲಿಂಗಕ್ಕೆ ಆರೋಪಣವೆಂದೇನೋ ಗುಹೇಶ್ವರನೆಂಬ ಲಿಂಗದಂತವ ಬಲ್ಲವರಾರೊ"

ಎಂದು ಬುದ್ಧಿಯನ್ನು ಅಲ್ಲಮಪ್ರಭು ಹೇಳಿದನು. ಜಂಬದ ಭಾಷೆ ಗಳನ್ನೆಲ್ಲ ಬಿಟ್ಟು ವಿನಮ್ರನಾಗಿ, ಕಿಂಕರತ್ವವನ್ನು ವಹಿಸಿ, ಆತ್ಮಾರ್ಪಣ ಮಾಡುವುದೇ ನಿಜವಾದ ಭಕ್ತಿ ಎಂದು ಪ್ರಭು ತಿಳಿಯ ಹೇಳಿದನು. ಆಗ ಬಸವಣ್ಣನವರು ನಿರಹಂಭಾವವುಳ್ಳವರಾದರು.

---

೮೯. ಬ. ವ. ಪುಟ ೫೭. ೯೦. ಬ. ವ. ಪುಟ. ೧೦೮.
೯೧. ಪ್ರ. ದೇ. ವ. ಪುಟ ೨೨೦.

೯೩. “ತನುವ ಕೊಟ್ಟೆನೆಂದು ನುಡಿದು ಗುರುವಚನಕ್ಕೆ ದೂರವಾದೆ. ಮನವ ಕೊಟ್ಟೆನೆಂದು (ನುಡಿದು) ಲಿಂಗಮುಖಕ್ಕೆ ದೂರವಾದೆ. ಧನವ ಕೊಟ್ಟೆನೆಂದು ನುಡಿದು ಜಂಗಮ ಮುಖಕ್ಕೆ ದೂರವಾದೆ. ಕೂಡಲ ಸಂಗಮ ದೇವಯ್ಯ, ನಿಮಗೆ ಮಾಡಿದೆನೆಂದು ನುಡಿದು ಕೆಟ್ಟ ಕೇಡಿಂಗೆ ಕಡೆಯಿಲ್ಲ”

೯೪. ಮಾಡುವಾತ ನಾನಲ್ಲಯ್ಯ! ನೀಡುವಾತ ನಾನಲ್ಲಯ್ಯ! ಬೇಡುವಾತ ನಾನಲ್ಲಯ್ಯ! ನಿಮ್ಮ ಕಾರುಣ್ಯವಲ್ಲವೆ, ಎಲೆ ದೇವಾ! ಮನೆಯ ತೊತ್ತಲಸಿದರೆ, ಒಡತಿ ಮಾಡಿಕೊಂಬಂತೆ ನಿನಗೆ ನೀ ಮಾಡಿಕೋ ಕೂಡಲ ಸಂಗಮ ದೇವಾ”

೯೫. “ತಂದೆ ನೀನು, ತಾಯಿ ನೀನು, ಬಂಧು ನೀನು, ಬಳಗ ನೀನು, ಎನಗೆ ನೀನಲ್ಲದೆ ಮತ್ತಾರೂ ಇಲ್ಲವಯ್ಯ ಕೂಡಲ ಸಂಗಮ ದೇವಾ, ಹಾಲಲ್ಲದ್ದು, ನೀರಲ್ಲದ್ದು”

ಎಂದು ಶರಣಾಗತರಾದರು. ಬಸವಣ್ಣನವರ ಭಕ್ತಿಸಾಧನೆ ಇದು. ಆ ಭಕ್ತಿಭಂಡಾರ ತುಂಬಿದ ಪರಿ ಇದು. ಬಸವಣ್ಣನವರ ಮನೋವ್ಯಾಪಾರವನ್ನು ಯಾರು ಬೇಕಾದರೂ ನೋಡಬಹುದಾಗಿದೆ. ಮನದ ಕಾಳಿಕೆ ಕಳೆದು, ಅಹಂಕಾರದ ತೆರೆ ಕಳಚಿಬೀಳಲು, ಹೃದಯದಲ್ಲಿಯೆ ಪರಮಾತ್ಮನ ದರ್ಶನವಾಯಿತು.

೯೬. “ಹೊನ್ನಹಾವಿಗೆಯ ಮೆಟ್ಟಿದವನ, ಮಿಡಿಯ ಮುಟ್ಟದ ಕೆಂಜೆಡೆಯವನ, ಮೈಯಲ್ಲಿ ವಿಭೂತಿಯ ಧರಿಸಿದವನ, ಕರದಲ್ಲಿ ಕಪಾಲವ ಹಿಡಿದವನ, ಅರ್ಧನಾರೀಶ್ವರನಾದವನ, ಬಾಣನ ಮನೆಯ ಬಾಗಿಲ ಕಾಯ್ದವನ, ನಂಬಿಗೆ ಕುಂಟಣಿಯಾದವನ, ಚೋಳಂಗೆ ಹೊನ್ನಮಳೆಯ ಕರೆದವನ, ಎನ್ನಮನಕ್ಕೆ ಬಂದವನ, ಸದ್ಭಕ್ತರ ಹೃದಯದಲ್ಲಿಪ್ಪವನ, ಮಾಡುವ ಪೂಜೆಯಲೊಪ್ಪುವನ, ಕೂಡಲ ಸಂಗಯ್ಯನೆಂಬವನ”

೯೭. “ಕಂಡ ಕನಸು ನಿಧಾನವ ಕಂಡೆನಯ್ಯಾ! ಬಿಡಲಾರದ ನಿಧಾನವ ಕಂಡೆನಯ್ಯಾ! ಕೂಡಲ ಸಂಗಯ್ಯನೆಂಬ ನಿಧಾನವ ಕಂಡು ಬಿಡಲಾರೆನಯ್ಯ!”

ಎಂದು ಆನಂದದಿಂದ ನಲಿದಾಡಿದರು.

ಅಪರೋಕ್ಷಜ್ಞಾನಿಗಳಾಗಿ, ಜೀವನ್ಮುಕ್ತರಾಗಿ, ಸಾಧಕರಿಗೆ ಬೋಧೆ ಮಾಡುತ್ತ ಬಸವಣ್ಣನವರು ಮುಂದೆ ಕಾಲವನ್ನು ಕಳೆದರು. ಭಕ್ತನು

---

೯೩. ಶೂ. ಸಂ. ಪುಟ ೧೦೬. ೯೪. ಬ. ವ. ಪುಟ ೧೨೭. ೯೫. ಬ. ವ. ಪುಟ ೭೧.
ಬ. ವ. ಪುಟ ೭೪. ೯೭. ಬ. ವ. ಪುಟ ೭೪.

ಏಕಾಂತವಾಸಿಯಲ್ಲ. ಅವನು ಸಂಘಜೀವಿ. ಯೋಗಾಚರಣೆಯುಳ್ಳವನು ಮನುಷ್ಯ ಸಂಪರ್ಕವಿಲ್ಲದೆ ಕಾಡನ್ನೋ ಗುಹೆಯನ್ನೋ ಸೇರಬಹುದು; ಮನಸ್ಸನ್ನು ನಿಶ್ಚಲಮಾಡುವುದಕ್ಕೆ ಶಾಂತವಾತಾವರಣಬೇಕೆಂದು ನಿಶ್ಶಬ್ದ ಸ್ಥಾನವನ್ನಾಶ್ರಯಿಸಬಹುದು. ಆದರೆ ಭಕ್ತನು ರಸಾವೇಶವುಳ್ಳವನು, ಭಾವಾವೇಶವುಳ್ಳವನು. ಆ ಆವೇಶಗಳನ್ನು ತಾನೂ ಅನುಭವಿಸುತ್ತ ಇತರರಿಗೂ ಹಂಚಿಕೊಡುತ್ತ, ಭಗವಂತನ ನಾಮಸಂಕೀರ್ತನೆ ಮೊದಲಾದ ವುಗಳಲ್ಲಿ ಮೈಮರೆಯುವುದು ಭಕ್ತನ ಜೀವನಕ್ರಮ. ಭಕ್ತರ ಸಹವಾಸವೇ ಭಕ್ತನಿಗೆ ಜೀವ. ಆದುದರಿಂದ

೯೭. "ಆಡಿಹರಯ್ಯ ಹಾಡಿಹರಯ್ಯ, ಮನಬಂದ ಪರಿಯಲ್ಲಿ ಶಿವಶರಣರ ಮುಂದೆ ಆಡಿಹರಯ್ಯ ಹಾಡಿಹರಯ್ಯ. ಕೋಡಂಗಿಯಾಟವನಾಡಿದ ಭಕ್ತಂಗೆ ಬೇಡಿದ್ದ ನೀವ ನಮ್ಮ ಕೂಡಲ ಸಂಗಮ ದೇವ"

೯೮. "ತಾಳ ಮಾನ ಸರಸ ನಾನರಿಯೆ. ವಜೆ ಬಜಾವಣೆಯ ಲೆಕ್ಕವನರಿಯೆ. ಅಮೃತ ಗಣ ದೇವಗಣವನರಿಯೆ, ಕೂಡಲ ಸಂಗಮ ದೇವಾ ನಿನಗೆ ಕೇಡಿಲ್ಲವಾಗಿ ಅನು ಒಲಿದಂತೆ ಹಾಡುವೆ"

೯೯. "ಎನ್ನ ಕಾಯವ ದಂಡಿಗೆಯ ಮಾಡಯ್ಯ, ಎನ್ನ ಶಿರವ ಸೋರೆಯ ಮಾಡಯ್ಯ, ಎನ್ನ ನರವ ತಂತಿಯ ಮಾಡಯ್ಯ, ಎನ್ನ ಬೆರಳ ಕಡ್ಡಿಯ ಮಾಡಯ್ಯ, ಮುವತ್ತೆರಡು ರಾಗವ ಹಾಡಯ್ಯ. ಎನ್ನ ಉರದಲೊತ್ತಿ ನಿನ್ನ ಜಯಗಾನವಂ ಬಾರಿಸು ಕೂಡಲ ಸಂಗಮ ದೇವಾ"

ಎಂಬುದಾಗಿ ಭಕ್ತಿಯ ಆವೇಶದಿಂದ ಹಾಡುತ್ತ ಕುಣಿಯುತ್ತ ಭಕ್ತರೊಡನಾಟದಿಂದಿರುವುದೇ ಮುಕ್ತಿ. ಇದುವೇ ಆತನಿಗೆ ಪರಮಾನಂದಸ್ಥಿತಿ. ಕೈಲಾಸಕ್ಕೆ ಬಾರೆಂದು ಪರಮೇಶ್ವರನು ಕರೆಯುವುದಾದರೂ ಅಲ್ಲಿಗೆ ಹೋಗಲೊಲ್ಲದೆ ಭೂಲೋಕದಲ್ಲಿ ಶರಣರ ಮಧ್ಯದಲ್ಲಿರಬೇಕೆಂದು ಆ ಜೀವನ್ಮುಕ್ತ ಬಯಸುತ್ತಾನೆ.

---

೯೭. ಬ. ವ. ಪುಟ ೨೭. ೯೮. ಬ. ವ. ಪುಟ ೭೩.
೯೯. ಬ. ವ. ಪುಟ ೭೪.

೧೦೦. "ಬ್ರಹ್ಮ ಪದವಿಯನೊಲ್ಲೆ, ವಿಷ್ಣು ಪದವಿಯನೊಲ್ಲೆ, ರುದ್ರಪದವಿಯನೊಲ್ಲೆ, ನಾನು ಮತ್ತಾವ ಪದವಿಯನೊಲ್ಲೆನಯ್ಯ! ಕೂಡಲ ಸಂಗಮ ದೇವಾ, ನಿಮ್ಮ ಸದ್ಭಕ್ತರ ಪಾದವನರಿದಿಪ್ಪ ಮಹಾಪದವಿಯನೆ ಕರುಣಿಸಯ್ಯ!''

೧೦೧. ''ಎನಗಿಂತ ಕಿರಿಯರಿಲ್ಲ, ಶಿವಭಕ್ತರಿಗಿಂತ ಹಿರಿಯರಿಲ್ಲ. ನಿಮ್ಮ ಪಾದ ಸಾಕ್ಷಿ, ಎನ್ನ ಮನಸ್ಸಾಕ್ಷಿ, ಕೂಡಲ ಸಂಗಮ ದೇವ, ಎನಗಿದೇ ದಿಬ್ಯ''

ಶರಣರನ್ನೆಲ್ಲ ಸಾಕ್ಷಾತ್ ಈಶ್ವರನೆಂದು ಜೀವನ್ಮುಕ್ತ ತಿಳಿಯುತ್ತ ಅವರ ಸೇವೆಯಲ್ಲಿ ಮುಕ್ತಿಸುಖವನ್ನು ಕಾಣುತ್ತ, ಭೂಲೋಕವನ್ನು ಕೈಲಾಸಕ್ಕಿಂತ ಹೆಚ್ಚೆಂದು ಭಾವಿಸುವನು.

೧೦೨. "ಬಸವ ಬಾರಯ್ಯ! ಮರ್ತ್ಯಲೋಕದೊಳಗೆ ಭಕ್ತರುಂಟೇ ಹೇಳಯ್ಯ! ಮತ್ತಾರೂ ಇಲ್ಲಯ್ಯ, ನಾನೊಬ್ಬನೆ ಭಕ್ತನು. ಮರ್ತ್ಯಲೋಕದೊಳಗಣ ಭಕ್ತರೆಲ್ಲರು ಜಂಗಮಲಿಂಗ ನೀನೇ ಅಯ್ಯ ಕೂಡಲ ಸಂಗಮ ದೇವಾ"

ಇದು ವಚನಧರ್ಮದಲ್ಲಿ ಭಕ್ತಿಯ ರೀತಿ. ದ್ವೈತ, ವಿಶಿಷ್ಟಾದ್ವೈತಗಳ ಕ್ರಮಗಳನ್ನು ಈ ರೀತಿಯಲ್ಲಿ ಕಾಣಬಹುದು. ಆದರೆ ವಚನಧರ್ಮದ ಭಕ್ತಿ ಸಾಮರಸ್ಯದಿಂದ ಅದ್ವೈತದಲ್ಲಿ ಪರಿಣಾಮವಾಗುತ್ತದೆ.

೧೦೩. "ಲಿಂಗವ ಪೂಜಿಸಿ ಫಲವೇನಯ್ಯ ಸಮರತಿ ಸಮಕಳೆ ಸಮಸುಖವನರಿಯದನ್ನಕ್ಕ? ಲಿಂಗವ ಪೂಜಿಸಿ ಫಲವೇನಯ್ಯ ಕೂಡಲ ಸಂಗಮ ದೇವರ ಪೂಜಿಸಿ ನದಿಯೊಳಗೆ ನದಿ ಬೆರಸಿದಂತಾಗದನ್ನಕ್ಕ"

---

೧೦೦. ಬ. ವ. ಪುಟ ೫೩. ೧೦೧. ಬ. ವ. ಪುಟ ೫೦.

೧೦೨. ಬ. ವ. ಪುಟ ೧೩೭. ೧೦೩. ಬ. ವ. ಪುಟ ೧೪೩.

## ೫ನೆಯ ಪ್ರಕರಣ

# ಜ್ಞಾನ—ಚೆನ್ನಬಸವಣ್ಣ

ವಚನಕಾರರು ಭಕ್ತಿಯ ಸ್ವರೂಪವನ್ನು ವಿವರಿಸಿರುವುದು ನೋಡಿದರೆ ಜ್ಞಾನದಿಂದಲೇ ಮುಕ್ತಿ ಎಂಬ ವಾದವನ್ನು ವಚನಧರ್ಮದಲ್ಲಿ ಅಂಗೀಕರಿಸುವುದಿಲ್ಲವೆಂಬುದು ತಿಳಿಯುತ್ತದೆ. ಆದರೆ ಜ್ಞಾನದ ಆವಶ್ಯಕತೆಯನ್ನೂ ಜ್ಞಾನದಿಂದಲೂ ಮುಕ್ತಿಯುಂಟೆಂಬುದನ್ನೂ ವಚನಧರ್ಮ ಒಪ್ಪುತ್ತದೆ. ಅವುಗಳ ವಿವರಣೆ ಬಹುಮಟ್ಟಿಗೆ ಅದ್ವೈತದ ದೃಷ್ಟಿಯನ್ನೇ ಇಟ್ಟುಕೊಂಡಿರುವಂತೆ ತೋರುತ್ತದೆ. ಆತ್ಮಸ್ವರೂಪವನ್ನು ತಿಳಿಯದೇ ಇರುವುದರಿಂದ ಪುಣ್ಯ ಪಾಪಗಳು, ಸುಖ ದುಃಖಗಳು, ಜನ್ಮಾಂತರಗಳು ಪ್ರಾಪ್ತವಾಗಿ ಸಂಸಾರದಿಂದ ಆತ್ಮನಿಗೆ ಬಿಡುಗಡೆಯಾಗುವುದಿಲ್ಲ. ಆತ್ಮಜ್ಞಾನವುಂಟಾದರೆ ಮುಕ್ತಿ.

೧೦೪. "ಅಯ್ಯಾ, ತನ್ನ ತಾನರಿಪಡೆ, ತಾನೇ ಚಿನ್ಮಯನಾದ ಪರಬ್ರಹ್ಮ ನೋಡಾ. ತಾನೇ ಚಿನ್ನಾದ ಚಿದ್ಬಿಂದು ಚಿತ್ಕಳಾ ಮೂರ್ತಿ ನೋಡಾ. ತಾನೇ ಸಕಲ ಚೈತನ್ಯ ಚಿತ್ಸೂತ್ರಧಾರಿ, ತನ್ನಿಂದಧಿಕ ಪರದೈವವಿಲ್ಲ ನೋಡಾ. ತಾನೇ ಸಚ್ಚಿದಾನಂದ ಸ್ವರೂಪವಾದ ಚಿದ್ಘನಲಿಂಗ ನೋಡಾ, ಅಪ್ರಮಾಣ ಕೂಡಲ ಸಂಗಮ ದೇವಾ"

ಈ ಆತ್ಮಜ್ಞಾನ ಸುಲಭದಲ್ಲಿ ದೊರೆಯುವುದಿಲ್ಲ. ಭಕ್ತಿಯಿಂದ ಭಗವಂತನನ್ನು ಒಲಿಸಿಕೊಳ್ಳುವುದಕ್ಕೆ ಅಂತರಂಗ ಶುದ್ಧಿ ಹೇಗೆ ಆವಶ್ಯಕವೋ ಹಾಗೆಯೇ ನಿರ್ಮಲಜ್ಞಾನಕ್ಕೂ ನಿರ್ಮಲಾಂತಃಕರಣ, ನಿರ್ಮಲ ಚಾರಿತ್ರ ಆವಶ್ಯಕ.

* "ನಾವಿರತೋ ದುಶ್ಚರಿತಾನ್ನಾಶಾನ್ತೋ ನಾ ಸಮಾಹಿತಃ ||
ನಾ ಶಾಸ್ತಮಾನಸೋವಾಪಿ ಪ್ರಜ್ಞಾನೇ ನೈನವಾಪ್ನುಯಾತ್

---

೧೦೪. ವ. ಶಾ. ಸಾ. ಭಾಗ ೧. (ಪೂ) ಪುಟ.೫೩. * ಕಠೋಪನಿಷತ್ತು

ಎನ್ನುವುದನ್ನು ವಚನಧರ್ಮದಲ್ಲಿಯೂ ಒತ್ತಿಹೇಳುತ್ತಾರೆ. ಆತ್ಮ ಜ್ಞಾನ ದುಶ್ಚರಿತರಿಗೆ ಚಪಲಚಿತ್ತರಿಗೆ, ವಿರಕ್ತಿಯಿಲ್ಲದವರಿಗೆ ಸಾಧ್ಯವಲ್ಲ.

೧೦೫. "ಬ್ರಹ್ಮದ ಮಾತನಾಡಿ ಕನ್ನೆಯರ ಕಾಲ ಪೆಸೆಯಲ್ಲಿ ಕುಳಿತಲ್ಲಿ ಬ್ರಹ್ಮದ ಮಾತು ಅಲ್ಲಿ ನಿಂದಿತ್ತೆಂಪ ಅಂಬಿಗರ ಚೌಡಯ್ಯ"

೧೦೬. "ಲಿಂಗಗಂಭೀರನಾದ ಶರಣ ಅಂಗವಿಕಾರವನರಿಯನಯ್ಯ. ಜಂಗಮ ಸನ್ಮತ ನಾದ ಶರಣ ಇಂದ್ರಿಯ ವಿಕಾರವನರಿಯನಯ್ಯ. ಲಿಂಗಗಂಭೀರನಾಗಿ ಮನ್ಮನ ದಲ್ಲಿ ಲೀಯ್ಯವಾಯಿತ್ತು. ಜಂಗಮ ಸನ್ಮತನಾಗಿ ಅವಧಾನವನರಿಯನಯ್ಯ ಕೂಡಲ ಚನ್ನಸಂಗಯ್ಯನಲ್ಲಿ ಐಕ್ಯವಾದ ಮಹಾ ಶರಣ"

೧೦೭. "ಕಂಗಳ ಮುಂದಣ ಕಾಮನ ಕೊಂದು, ಮನದ ಮುಂದಣ ಆಸೆಯ ತಿಂದು, ಆತನನರಿ ಆತುರ ವೈರಿ ಮಾರೇಶ್ವರಾ"

ಆದುದರಿಂದ ಇಂದ್ರಿಯ ವಿಕಾರಗಳನ್ನು ತಡೆದು, ಮನಸ್ಸನ್ನು ಸ್ಥಿರಪಡಿಸಿದರೆ ಆತ್ಮಜ್ಞಾನ ಪಡೆಯುವುದಕ್ಕೆ ಸಹಾಯವಾಗುತ್ತದೆ. ಆಗ ಅಮೃತತ್ವ ಲಭಿಸುತ್ತದೆ. ಕಠೋಪನಿಷತ್ತಿನಲ್ಲಿ ಹೇಳಿರುವ

"ಯದಾಸರ್ವೇ ಪ್ರಮುಚ್ಯನ್ತೇ ಕಾಮಾಯೇಽಸ್ಯ ಹೃದಿಸ್ಥಿತಾಃ ॥
ಅಥಮರ್ತ್ಯೋಽಮೃತೋ ಭವತ್ಯತ್ರ ಬ್ರಹ್ಮ ಸಮಶ್ನುತೇ"

"ಯದಾಸರ್ವೇ ಪ್ರಭಿದ್ಯನ್ತೇ ಹೃದಯಸ್ಯೇಹ ಗ್ರನ್ಥಯಃ ॥
ಅಥಮರ್ತ್ಯೋಽಮೃತೋ ಭವತ್ಯೇತಾವದನುಶಾಸನಮ್"

"ಹೃದಾ ಮನೀಷೀ ಮನಸಾಭಿಕ್ಲೃಪ್ತೋ ಯ ಏತದ್ವಿದುರಮೃತಾಸ್ತೇ ಭವನ್ತಿ"

ಎಂಬುದು ವಚನಕಾರರ ಮತವಾಗಿಯೂ ಇದೆ. ಪ್ರತಿಬೋಧದಿಂದ, ಅಂತರ್ಜ್ಞಾನ ಮಾರ್ಗದಿಂದ, ಸತ್ಯದ ಸ್ವರೂಪ ತಿಳಿಯಬೇಕಾಗಿದೆ. ಮನಸ್ಸನ್ನು ಶಾಂತವಾಗಿಟ್ಟುಕೊಳ್ಳಬೇಕು. ಏಕಾಗ್ರ ಚಿತ್ತದಿಂದ ಧ್ಯಾನಮಾಡಬೇಕು. ಬರಿ ತರ್ಕ ವಿಚಾರಗಳಿಂದ ಆತ್ಮಜ್ಞಾನವುಂಟಾಗುವುದಿಲ್ಲ.

---

೧೦೫. ಅಂ. ಚೌ. ವ. ಪುಟ ೧೨೩. ೧೦೬. ಚೆ. ಬ. ಪುಟ ೮೭.

೧೦೭. ವ. ಶಾ. ಸಾ. ಭಾಗ ೧. (ಪೂ) ಪುಟ ೧೮೩.

೧೦೮. "........ಮನಸ್ಸು ಬಹಿರ್ಮುಖವಾದರೆ ಮಾಯಾಪ್ರಪಂಚ. ಮನಸ್ಸು ಅಂತರ್ಮುಖವಾದರೆ ಅವಿರಳಜ್ಞಾನಿ. ಮನ ಮಹದಲ್ಲಿ ನಿಂದರೆ ಮುಕ್ತ; ಮನೋಲಯವಾದರೆ ಸೌರಾಷ್ಟ್ರ ಸೋಮೇಶ್ವರಲಿಂಗದಲ್ಲಿ ಅಭೇದ್ಯ"

೧೦೯. "ಧ್ಯಾನ ಅಧ್ಯಾತ್ಮಿಕರಲ್ಲಿ ಕಂಡೆನೆಂಬುದು ಜೀವನಲ್ಲದೆ, ಪರಮನಲ್ಲ. ಜಪ ತಪ ನೇಮ ನಿತ್ಯಂಗಳಿಂದ ಕಂಡೆನೆಂಬುದು ಪ್ರಕೃತಿಯಲ್ಲದೆ ಚಿತ್ತವಲ್ಲ. ಭಾವದಿಂದ ಪ್ರಮಾಣಿಸುವುದೇ ಏಕರೂಪ ಗುಹೇಶ್ವರ ಲಿಂಗವು ತಾನೇ"

ಆದರೆ ಜ್ಞಾನಿಯಾದ ಗುರುವಿನ ಮೂಲಕ ಪರವಸ್ತುವಿನ ಸ್ವರೂಪವನ್ನೂ ಸಾಧನೆಯ ಕ್ರಮವನ್ನೂ ಕೇಳಿ ತಿಳಿದಿರಬೇಕು. ಶ್ರವಣ, ಮನನ, ನಿಧಿಧ್ಯಾಸನಗಳೆಂಬ ಮೂರು ಮೆಟ್ಟಲುಗಳು ಆತ್ಮಜ್ಞಾನಕ್ಕೆ ಅವಶ್ಯಕ. ಇವುಗಳಲ್ಲಿ ನಿಧಿಧ್ಯಾಸನವೇ ಬಹಳ ಮುಖ್ಯವಾದುದು. ಇದು ವಚನಧರ್ಮದ ಶಿವಾನುಭವ. ತಾನು ಕಂಡುಕೊಂಡದ್ದಲ್ಲದೆ, ಇತರರ ಹೇಳಿಕೆಗಳು—ಅವು ಎಷ್ಟೇ ಆಪ್ತವಾಕ್ಯಗಳಾದಾಗ್ಯೂ—ಫಲಕಾರಿಯಾಗವು.

೧೧೦. "ನಿಮ್ಮಲ್ಲಿ ನೀವು ತಿಳಿದು ನೋಡಿರೆ. ಅನ್ಯವಿಲ್ಲ ಕಾಣಿರಣ್ಣಾ. ಅರಿವು ನಿಮ್ಮಲ್ಲಿಯೇ ತದ್ಗತವಾಗಿದೆ. ಅನ್ಯ ಭಾವವ ನೆನೆಯದೆ ತನ್ನೊಳಗೆ ತಾನೇ ಎಚ್ಚರವಿರಬಲ್ಲರೆ ತನ್ನಲ್ಲಿಯೇ ತನ್ಮಯ ಗುಹೇಶ್ವರ ಲಿಂಗವು"

ಯಾವನೋ ಒಬ್ಬ ದೇವರನ್ನು ಕುರಿತು ಧ್ಯಾನಮಾಡಿ ಆತನ ಸ್ವರೂಪವನ್ನು ತಿಳಿಯುವುದು ಧ್ಯೇಯವಲ್ಲ. ತನಗೆ ಮುಸುಕಿರುವ ಮಾಯಾಮೋಹಗಳನ್ನು ಗೆದ್ದು ತನ್ನ ಸ್ವರೂಪವನ್ನು ಕಂಡುಕೊಳ್ಳುವುದೇ ಧ್ಯೇಯ. ತನ್ನ ನಿಕ್ಷೇಪವನ್ನು ತಾನೇ ಕಂಡುಕೊಳ್ಳುವುದು.

೧೧೧. "ಹೃದಯ ಕಮಲದಲ್ಲಿ ಲಕ್ಷ್ಯವಿಟ್ಟು ನೋಡುವ ದೇವರು ದೇವರಲ್ಲ. ಭ್ರೂಮಧ್ಯದಲ್ಲಿ ಲಕ್ಷ್ಯವಿಟ್ಟು ನೋಡುವ ದೇವರು ದೇವರಲ್ಲ. ನಾಸಿಕಾಗ್ರದಲ್ಲಿ ಲಕ್ಷ್ಯವಿಟ್ಟು ನೋಡುವ ದೇವರು ದೇವರಲ್ಲ. ಅಖಂಡ ಗೋಳವಾಗಿಹ ಲಿಂಗವು ತಾನೆಂದರಿದಡೆ ತಾನೇ ದೇವ ಅಪ್ರಮಾಣ ಕೂಡಲ ಸಂಗಮ ದೇವಾ"

---

೧೦೮. ವ.ಶಾ.ಸಾ. ಭಾಗ ೧.(ಪೂ) ಪುಟ ೮೫. ೧೦೯. ವ.ಶಾ.ಸಾ. ಭಾಗ ೧.(ಪೂ) ಪುಟ ೧೮೦

೧೧೦. ಪ್ರ. ದೇ. ವ. ಪುಟ ೧೮೪. ೧೧೧. ವ.ಶಾ.ಸಾ. ಭಾಗ ೧. (ಪೂ) ಪುಟ ೫೬

ಆದುದರಿಂದ ಜ್ಞಾನವೆಂಬುದು ಅದ್ವೈತದ "ತತ್ತ್ವಮಸಿ" ಎಂಬುದೇ. ನಾನಾತ್ವ, ಭಿನ್ನತೆ ಮೊದಲಾದುವು ತೋರಿಕೆಯವು.

೧೧೨. "ಸರ್ವತ್ರ ಸುಲಭನಾದಲ್ಲಿ ನೀನು ನಾನು ಎನದಿರ್ಪುದೇ ಜ್ಞಾನ. ಆ ಜ್ಞಾನ ಎಂದಾದಲ್ಲಿ ಭಾವದ ಭ್ರಮೆಗೆ, ಆತ್ಮ ತೇಜಕ್ಕೆ, ತರ್ಕದ ಗೆಲ್ಲ ಸೋಲಕ್ಕೆ, ಇಕ್ಕೆ ಹಕ್ಕೆಗೆ ಹಿಕ್ಕುಗೊಡದಿರ್ಪುದೇ ಅರಿವು. ಅರಿವು ಕರಿಗೊಂಡಲ್ಲಿ ಇದಿರೆಡೆ ಇಲ್ಲಾಗಿ, ಪೃಥವೇ ತದ್ರೂಪವಾದಲ್ಲಿ ತನಗೆ ಇದಿರಿಲ್ಲ, ಇದಿರು ತನಗಿಲ್ಲ. ದರ್ಪಣದ ಒಪ್ಪದಂತೆ ನಿಷ್ಕಳಂಕ ಮಲ್ಲಿಕಾರ್ಜುನಾ"

೧೧೩. ತನ್ನ ಮರೆದು ದೇವರ ಕಂಡಿಹೆನೆಂದೆಂಬರು. "ತನ್ನುವ ಮರೆದು ದೇವರ ಕಂಡಿಹೆನೆಂಬ ಕಾರಣ ಹರಿ ಹರ ಸುರ ಬ್ರಹ್ಮಾದಿಗಳು ತಲೆಕೆಳಗಾಗಿ ಹೋದರು. ಆ ದೇವರ ಮರೆದು ತನ್ನುವನರಿದುದುಂಟಾದರೆ, ತಾನೇ ದಿಟವೆಂದ ಅಂಬಿಗರ ಚೌಡಯ್ಯ"

ಬ್ರಹ್ಮಜ್ಞಾನವನ್ನು ಪಡೆದವನು ಬ್ರಹ್ಮವೇ. ಆತನಿಗೆ ಹುಟ್ಟುಸಾವುಗಳಿಲ್ಲ, ಆತನು ನಿತ್ಯಾನಂದ ಪದವಿಯಲ್ಲಿರತಕ್ಕವನು ಎಂದು ಮುಂಡಕೋಪನಿಷತ್ತು ಹೇಳುವಂತೆಯೇ

೧೧೪. "ಅರಿತವನೆಂತು ಸತ್ತನು? ಅರಿತವನೆಂತು ಹುಟ್ಟಿದನು? ಅರಿತವನೆಂತು ಅಘೋರಪಾಶಕ್ಕೆ ಒಳಗಾದನು. ಅರಿತವನೆಂದೂ ಸುಖಿಯಾದನು. ಅರಿತವನೇ ಚಿರಂಜೀವಿ ನೋಡಾ ಕಪಿಲ ಸಿದ್ಧ ಮಲ್ಲಿಕಾರ್ಜುನಾ"

ಎಂದು ವಚನಧರ್ಮದಲ್ಲಿಯೂ ಹೇಳಿದೆ. ಆದರೆ ಹೀಗೆ ಬ್ರಹ್ಮಜ್ಞಾನಿಗಳಾಗುವವರು ಎಷ್ಟು ಮಂದಿ? ಲೋಕದಲ್ಲಿ ಬ್ರಹ್ಮಜ್ಞಾನಿಯಾದ ಗುರು ದೊರೆಯುವುದೇ ದುರ್ಲಭ. ಹಾಗೆ ದೊರೆತರೂ, ಆತನು ಹೇಳಿದುದನ್ನು ಗ್ರಹಿಸಿಕೊಳ್ಳುವ ಶಿಷ್ಯರು ಅತಿವಿರಳ. ಗ್ರಹಿಸಿಕೊಂಡು ಪ್ರತಿಬೋಧದಿಂದ ಬ್ರಹ್ಮವಾಗುವವರು ಇದ್ದುದೂ ವಿರಳ. ಆದುದರಿಂದ ಲಕ್ಷಕ್ಕೊಬ್ಬರೋ ಕೋಟಿಗೊಬ್ಬರೋ ಬ್ರಹ್ಮಜ್ಞಾನಿಗಳಾಗುವರು. ಉಳಿದವರು ಸತ್ಯಜ್ಞಾನವಿಲ್ಲದ್ದರಿಂದ ಜನ್ಮಗಳನ್ನೆತ್ತುವರು. ಹೀಗೆ ಸಂಸಾರ ಬೆಳೆಯುತ್ತ ಹೋಗುವುದು.

---

೧೧೨. ವ. ಶಾ. ಸಾ. ಭಾಗ ೧.(ಉ) ಪುಟ ೧೮೦. ೧೧೩. ಅಂ. ಚೌ. ವ. ಪುಟ. ೧೨.
೧೧೪. ವ. ಶಾ. ಸಾ. ಭಾಗ ೧. (ಉ) ಪುಟ ೧೭೭.

೧೧೫. "........ಕಷ್ಟಜೀವಿ, ಮನುಜರೆಲ್ಲ ನೆಟ್ಟನೆ ಶಿವಜ್ಞಾನಿಗಳಾದಡೆ ಮುಂದೆ ಭವದ ಬಳ್ಳಿಗೆ ಬೀಜವಿನ್ನೆಲ್ಲಿಹುದೋ? ನಮ್ಮ ಕೂಡಲ ಚೆನ್ನಸಂಗಯ್ಯನಲ್ಲಿ ಲಕ್ಷಕ್ಕೊಬ್ಬ ಭಕ್ತ, ಕೋಟಿಗೊಬ್ಬ ಶರಣ"

ಆದುದರಿಂದ ಇಲ್ಲಿ ಪರಮಾತ್ಮನ ಕರುಣೆ, ಅನುಗ್ರಹ ಎಂಬ ಮಾತು ಗಳಿಲ್ಲ; ಪರಮಾತ್ಮನಿಗೆ ಮೊರೆಯಿಡುವುದೂ, ದಾಸೋಹಗಳ ಹರಿದಾಟ ಗಳೂ ಇಲ್ಲ; ದೇವರು ಎಂಬವನು ಬಂದು ಉದ್ಧಾರಮಾಡಿ ಮುಕ್ತಿಯನ್ನು ಕೊಡುವನು ಎಂಬುದೂ ಇಲ್ಲ. ತನ್ನಲ್ಲಿಯೇ ತಿಳಿದು ಬಂಧನಗಳನ್ನು ಕಳಚಿ ಕೊಂಡು ತಾನು ತಾನಾಗುವುದೇ ಮುಕ್ತಿ.

ಅಲ್ಲಮಪ್ರಭು ಕಲ್ಯಾಣಕ್ಕೆ ಬಂದು ಬಸವಣ್ಣನವರನ್ನು ಮಾತನಾಡಿಸಿ ದಂತೆಯೇ ಚೆನ್ನಬಸವಣ್ಣನನ್ನೂ ಮಾತನಾಡಿಸಿದನು. ಆದರೆ ಬಸವಣ್ಣ ನವರ ಭಕ್ತಿಯ ಭರ ಚೆನ್ನಬಸವಣ್ಣನಲ್ಲಿ ಕಂಡು ಬರಲಿಲ್ಲ.

೧೧೬. "ಕಿರಿಯರಾದಡೇನು? ಹಿರಿಯರಾದಡೇನು? ಅರಿವಿಂಗೆ ಹಿರಿದು ಕಿರಿದುಂಟೆ? ಆದಿ ಅನಾದಿ ಇಲ್ಲದಂದು ಅಜಾಂಡ ಬ್ರಹ್ಮಾಂಡ ಕೋಟಿಗಳುದಯವಾಗದಂದು ಗುಹೇಶ್ವರ ಲಿಂಗದಲ್ಲಿ ನೀನೊಬ್ಬನೇ ಮಹಾಜ್ಞಾನಿ ಎಂಬುದು ಕಾಣಬಂದಿತ್ತು ಕಾಣಾ ಚೆನ್ನಬಸವಣ್ಣಾ"

೧೧೭. "ಕಾಯವಿಡಿದು ಹುಟ್ಟಿದಾತ ಕಾಲಾಗ್ನಿ ರುದ್ರನಾಗಲಿ, ಕಾಯವಿಡಿದು ಹುಟ್ಟಿ ದಾತ ಕಾಮಸಂಹಾರನಾಗಲಿ, ಕಾಯವಿಡಿದು ಹುಟ್ಟಿದಾತ ಅನಾದಿ ಪರಮೇಶ್ವರ ನಾಗಲಿ ಅರಿವು ಸಾಧ್ಯವಾಗದು ಅವರಿಗೆಯು. ಗುಹೇಶ್ವರ ಲಿಂಗದಲ್ಲಿ ನೀನು ಕಾಯವಿಡಿದು ಕಲ್ಪಿತವ ಹೊದ್ದೆ ಎಂಬುದು ಕಾಣಬಂದಿತ್ತು ನೋಡಾ ಚೆನ್ನ ಬಸವಣ್ಣ"

೧೧೮. "........ಮಾಯೆಯ ಹೊಡೆಗಿಚ್ಚು ಗೆಲಬಲ್ಲರೆ ಗುಹೇಶ್ವರ ಲಿಂಗದಲ್ಲಿ ಸರ್ವ ಸಂದೇಹವಳಿದಿಪ್ಪ ಚೆನ್ನಬಸವಣ್ಣಂಗೆ ನಮೋ ನಮೋ ಎಂಬೆನು"

ಎಂದು ಪ್ರಭು ಹೇಳಬೇಕಾದರೆ ಚೆನ್ನಬಸವನ ಮಹತ್ವ ಹೆಚ್ಚಿನ ದಾಗಿರಬೇಕು.

---

೧೧೫. ಚೆ. ಬ. ವ. ಪುಟ ೨೦. ೧೧೬. ೧೧೭. ೧೧೮. ಶೂ. ಸಂ. ಪುಟ ೧೬೦. ೧೫೩. ೧೫೭.

ಬಸವಣ್ಣನವರಿಗೆ ನಾಗಲಾಂಬೆ ಎಂಬ ಸೋದರಿಯೊಬ್ಬಳಿದ್ದಳು. ಆಕೆ ಬಸವಣ್ಣನವರಿಗಿಂತ ಹಿರಿಯಳು. ಪುರಾಣಗಳಲ್ಲಿಯೂ ವಚನಗಳಲ್ಲಿಯೂ ನಾಗಾಯಕ್ಕ 'ಅಕ್ಕನಾಗಾಯಿ', 'ಅಕ್ಕನಾಗಮ್ಮ' ಎಂದು ಹೆಸರುಗೊಂಡಿದ್ದಾಳೆ. ಆಕೆಯ ಪತಿ * ಶಿವಸ್ವಾಮಿ. ಬಸವಣ್ಣನವರು ಬಾಗೇವಾಡಿಯನ್ನು ಬಿಟ್ಟು ಕೂಡಲ ಸಂಗಮ ಕ್ಷೇತ್ರಕ್ಕೆ ಹೊರಟಾಗ ಅಕ್ಕನಾಗಮ್ಮನೂ ಶಿವಸ್ವಾಮಿಯೂ ಜೊತೆಯಲ್ಲಿ ಹೋದಂತೆ ಕಾಣುತ್ತದೆ. ಕಡೆಗೆ ಬಸವಣ್ಣನವರ ಜೊತೆಯಲ್ಲಿಯೇ ಅವರು ಕಲ್ಯಾಣಕ್ಕೂ ಹೋದರು. ಚೆನ್ನಬಸವ ಪುರಾಣ ಮುಂತಾದ ಗ್ರಂಥಗಳಲ್ಲಿ ಶಿವಸ್ವಾಮಿಯ ವಿಚಾರವಿಲ್ಲ. ಅಕ್ಕನಾಗಮ್ಮ ಕನ್ಯೆಯಾಗಿಯೇ ಇದ್ದು ಕಕ್ಕಯ್ಯನೆಂಬ ಶಿವಶರಣನ ಪ್ರಸಾದ ಸೇವನೆಯಿಂದ ಗರ್ಭವತಿಯಾಗಿ, ಷಣ್ಮುಖಸ್ವಾಮಿಯ ಅವತಾರನಾದ ಚೆನ್ನಬಸವನನ್ನು ಹೆತ್ತಳೆಂದು ಅವುಗಳಿಂದ ತಿಳಿಯುತ್ತದೆ. ಚೆನ್ನಬಸವನ ಜೀವನ ಚರಿತ್ರೆಯಲ್ಲಿ ಪವಾಡಗಳಿಲ್ಲ. ಆತನು ಜನಗಳಿಗೆ ಬೋಧೆಮಾಡಿ, ವಚನಧರ್ಮದ ಮರ್ಮವನ್ನು ತಿಳಿಸಿ, ಸಮಾಜವನ್ನು ಉದ್ಧರಿಸಿದುದೇ ಒಂದು ದೊಡ್ಡ ಪವಾಡ. ಈ ಮಹತ್ತರ ಕಾರ್ಯಭಾರವನ್ನು ಬಸವಣ್ಣನವರು ತಮ್ಮ ಸೋದರಳಿಯನಿಗೆ ವಹಿಸಿದ್ದರು. ಆತನ ಹೃದಯವನ್ನು ನಾವು ಕಾಣುವುದು ಈ ಕಾರ್ಯಭಾರ ನಿರ್ವಾಹದಲ್ಲಿ, ಭಕ್ತಿಸಾಧನೆಯ ಹೋರಾಟದಲ್ಲಲ್ಲ. ಪ್ರಭುವಿನಂತೆಯೆ ಆತನು ಸಾಧನ ಚತುಷ್ಟಯದ ಹಂಗು ಹೊದ್ದದೆ ಜ್ಞಾನಿಯಾಗಿದ್ದವನು. ಆದುದರಿಂದ ಸಾಧನೆಯ ಹೋರಾಟದ ವಚನಗಳಾಗಲಿ, ತನ್ನ ಲೋಪದೋಷಗಳನ್ನು ಬಿಚ್ಚಿಡುವ ವಚನಗಳಾಗಲಿ, ಭಕ್ತಿಯನ್ನು ಮುಕ್ತಿಯನ್ನು ಕರುಣಿಸೆಂದು ಪರಮಾತ್ಮನನ್ನು ಬೇಡುವ ವಚನಗಳಾಗಲಿ ಆತನಲ್ಲಿ ಹೆಚ್ಚಾಗಿ ದೊರೆಯುವುದಿಲ್ಲ. ಪ್ರಥಮದಲ್ಲಿ ಯಾವಾಗಲೋ ಒಂದು ಬಾರಿ

೧೯೯. "ಹೆಗ್ಗಣವನಿಕ್ಕಿ ನೆಲಗಟ್ಟು ಕಟ್ಟಿದಂತೆ ಆಯಿತೆನ್ನ ಕಾಯಗುಣ. ಅಹಂಕಾರ ಪ್ರಬೋಧೆಗಳೇಕಯ್ಯ? ಕಾಮ ಕ್ರೋಧ ಲೋಭ ಮೋಹ ಮದ ಮತ್ಸರಂಗಳ ಸಿಕ್ಕಿ ಎನ್ನ ಮಾಡಿದಿರಿ, ಎನ್ನ ಬಾಧಿಸಲಿಂತು ಲಿಂಗಯ್ಯತಂದೆ? ಆಧಿ ವ್ಯಾಧಿಗಳೆಲ್ಲವ ಕಳೆದು ನಿರ್ವಾಣನಪ್ಪ ಪದವ ಕರುಣಿಸಯ್ಯ ಕೂಡಲ ಚೆನ್ನಸಂಗಮ ದೇವಾ"

---

* ಸಿಂಗಿರಾಜ ಪುರಾಣದ ಪ್ರಕಾರ. ೧೯೯. ವ.ಶಾ.ಸಾ. ಭಾಗ ೧. (ಪೂ). ಪುಟ ೨೭೩.

ಎಂದು ನೊಂದ ಹೃದಯದಿಂದ ಆತ ಬೇಡಿದ್ದಾನೆ. ಗುರುಲಿಂಗ ಜಂಗಮ ದಾಸೋಹದಲ್ಲಿ ತನ್ನ ಕೊರತೆಗಳನ್ನು ಬಸವಣ್ಣನವರಂತೆ ಆತ ಹೇಳಿ ಕೊಂಡಿಲ್ಲ. ಇತರರ ಕೊರತೆಗಳನ್ನು ಅವರಿಗೆ ತೋರಿ ಜ್ಞಾನೋಪದೇಶ ಮಾಡಿದ್ದಾನೆ. ಈ ಜ್ಞಾನೋಪದೇಶ ಕ್ರಮದಲ್ಲಿ ಪ್ರಭುವಿನ ಮಾರ್ಗವೇ ಇಲ್ಲಿ ಕಂಡು ಬರುತ್ತದೆ.

೧೨೦. "ಎಲವೋ ಎಲವೋ ಪಾಪಕರ್ಮವ ಮಾಡಿದವನೇ........ಒಮ್ಮೆ ಶರಣೆನ್ನು— ಒಮ್ಮೆ ಶರಣೆಂದಡೆ ಸಕಲ ಪಾಪಂಗಳು ಕೆಟ್ಟೋಡುವುವು........"

ಎಂದು ಅಂಗಲಾಚುವ ದೈನ್ಯಸ್ವರವು ಚೆನ್ನಬಸವನಲ್ಲಿ ಕಾಣುವುದಿಲ್ಲ. ಸ್ವಲ್ಪ ಅಧಿಕಾರವಾಣಿಯಿಂದ ಜರಿದು ಜಡಿದು ಹೇಳುವುದು ಆತನ ಸಂಪ್ರದಾಯ. ಬುದ್ಧಿಶಕ್ತಿಯಲ್ಲಿ ಆತನಿಗೂ ಸುತ್ತಮುತ್ತಲಿದ್ದ ಜಂಗಮಾದಿಗಳಿಗೂ ಬಹಳ ಅಂತರ ಕಂಡು ಬರುತ್ತದೆ. ಆತನ ಬುದ್ಧಿಯಾದರೋ ಮಿಂಚಿನ ಕತ್ತಿ. ಆ ಥಾಳಥಳ್ಯ ಕಣ್ಣುಕೋರೈಸಿ ಬೆರಗುಮಾಡುತ್ತದೆ; ಆ ತೀಕ್ಷ್ಣತೆ ಲೋಪ ದೋಷಗಳನ್ನು ತುಂಡರಿಸಿ ಕೆಡುವುತ್ತದೆ. ಆದರೂ ಚೆನ್ನಬಸವನು ನಿಷ್ಕರುಣಿಯಲ್ಲ. ಸಾಧನೆಯ ಕಷ್ಟವನ್ನೂ, ಇತರರ ಪರಿಮಿತ ಶಕ್ತಿಯನ್ನೂ ತಿಳಿದವನಾಗಿ

೧೨೧. "ನಿಧಾನವ ನೆಗೆವೆನೆಂದು ಹೋದಡೆ, ವಿಘ್ನಬಪ್ಪುದು ಮಾಬುದೇ ಅಯ್ಯ? ಸದಾಶಿವನ ಪೂಜಿಸುವೆನೆಂದು ಹೋದಡೆ, ತರುಬಿ ಹಿಡಿವವಯ್ಯ ಸಕಲ ವಿಪತ್ತುಗಳು. ಎಡೆಭಂಗವಿಲ್ಲದೆ ನಿಲಬಲ್ಲಡೆ ಸದಮಲಸುಖವನೀವ ನಮ್ಮ ಕೂಡಲಚೆನ್ನಸಂಗಮ ದೇವರು"

ಎಂದು ಬೆನ್ನುತಟ್ಟಿ ಬುದ್ಧಿಹೇಳಿ ಪ್ರೋತ್ಸಾಹಿಸುತ್ತಿದ್ದನು. ಆದರೆ ಆತನು ಬೌದ್ಧಿಕ ಸಾಮ್ರಾಜ್ಯದ ನಿರಂಕುಶ ಚಕ್ರವರ್ತಿ. ಪ್ರತಿವಾದಿಗಳು ತಲ್ಲಣಿಸಿ ಹೋಗುವಂತಹ ಪ್ರತಿಭೆ, ಪ್ರಚಂಡತೆ ಆತನದು. ವಚನಧರ್ಮ ತಲೆಯೆತ್ತುವ ಕಾಲದಲ್ಲಿ ಇಂತಹ ನಿರಂಕುಶ ಚಕ್ರವರ್ತಿ ಇದ್ದುದು ಒಳ್ಳೆಯದೇ ಆಯಿತು.

---

೧೨೦. ಬ. ವ. ಪುಟ. ೯೩. ೧೨೧. ವ. ಶಾ. ಸಾ. ಭಾಗ ೧. (ಪೂ) ಪುಟ ೩೦೨. (ಬ. ವ. ದಲ್ಲಿಯೂ ಹೀಗೆಯೇ ಇದೆ)

೧೨೩. "ಅಯ್ಯಾ ಲೋಕದ ನಡತೆ ನಮಗೆ ಡೊಂಕು. ತನ್ನ ನಡತೆ ಲೋಕಕ್ಕೆ ಡೊಂಕು. ಊರ ಹೊದ್ದಿ ಕಾಡ ಸೇರ. ಆಪ್ಯಾಯನ ವಿರಹಿತ ಶರಣ ಕಪಾಲ ಮೊಳು ಉಲುಹಡಗಿದ ನಮ್ಮ ಕೂಡಲ ಚನ್ನಸಂಗಯ್ಯನಲ್ಲಿ ಒಂದಾದ ಪರಸು ಲಿಂಗೈಕ್ಯವು"

ನಮ್ಮ ಆಚಾರ ವ್ಯವಹಾರಗಳು ಮತಾಂತರದವರಿಗೆ ಡೊಂಕಾಗಿ ಕಂಡರೆ, ಅವರ ನಡತೆ ನಮಗೂ ಡೊಂಕಾಗಿ ಕಂಡುಬರುತ್ತದೆ. "ಸೋಹಂ" ಎಂಬುದು ಕೂಡ ಅಡಗಿದ ನಿಶ್ಚಲ ಶರಣ ನಿಜೈಕ್ಯಲಿಂಗ. ಇದನ್ನು ತಿಳಿಸುವ ವಿದ್ಯೆ ನಮ್ಮದು. ಎಲ್ಲರೂ ಕಾಡಿಗೆ ಹೋಗಿ ಸಾಧಿಸಿದರೆ ನಾವು ಊರನ್ನು ಸೇರಿ ಸಾಧಿಸುತ್ತೇವೆ. ಇಷ್ಟಾಗಿ ಈ ಲೋಕದ ಮಾತು ಕಟ್ಟಿ ಕೊಂಡು ನಮಗೇನು?

೧೨೪. "ಸರ್ವಸಂಗ ಪರಿತ್ಯಾಗಮಾಡಿದ ಶಿವಶರಣನ ಲೋಕದ ಸಂಸಾರಿಗಳೆಂತು ಮೆಚ್ಚುವರಯ್ಯ? ಊರೊಳಗಿಪ್ಪರೆ ಉಪಾಧಿಕನೆಂಬರು, ಅಡವಿಯೊಳಗಿಪ್ಪರೆ ಮೃಗನೆಂಬರು, ಹೊನ್ನ ಬಿಟ್ಟರೆ ದರಿದ್ರನೆಂಬರು, ಹೆಣ್ಣ ಬಿಟ್ಟರೆ ನಪುಂಸಕನೆಂಬರು, ಪುಣ್ಯವ ಬಿಟ್ಟರೆ ಪೂರ್ವ ಕರ್ಮಿ ಎಂಬರು, ಮಾತನಾಡದಿಪ್ಪರೆ ಮೂಗನೆಂಬರು, ಮಾತನಾಡಿದರೆ ಜ್ಞಾನಿಗೇಕಯ್ಯ ಮಾತೆಂಬರು, ನಿಜವನ್ನಾಡಿದರೆ ನಿಷ್ಠುರಿ ಎಂಬರು, ಸಮತೆಯ ನುಡಿದರೆ ಅಂಜುವನೆಂಬರು. ಇದು ಕಾರಣ ಕೂಡಲ ಚನ್ನಸಂಗಯ್ಯ ನಿಮ್ಮ ಶರಣ ಲೋಕದಿಚ್ಛೆಯ ನುಡಿಯ, ಲೋಕದಿಚ್ಛೆಯ ನಡೆಯ"

ಆದುದರಿಂದ ಲೋಕರಂಜನೆಗಾಗಿ ತಾನೇನನ್ನೂ ಬೋಧೆಮಾಡುವ ವನಲ್ಲ. ಲೋಕದವರ ವಿಚಾರದಲ್ಲಿ ಎಷ್ಟು ಖಂಡಿತವಾದಿಯೋ ಸ್ವಮತೀ ಯರ ವಿಚಾರದಲ್ಲಿಯೂ ಅಷ್ಟೇ ಖಂಡಿತವಾದಿ. ದೀಕ್ಷೆಗೊಂಡು ಇಷ್ಟಲಿಂಗ ಧಾರಿಗಳಾದವರೆಲ್ಲ ಭಕ್ತರೆ? ಶರಣರೆ? ಲಕ್ಷಾಂತರ ಜನರು ಇಷ್ಟಲಿಂಗ ಧಾರಕರಾಗಿದ್ದಾರೆ. ಬಸವಣ್ಣನವರಂಥ ಭಕ್ತರಿಗೆ, ಹರಿಹರನಂಥ ಕವಿಗೆ ಈ ಲಿಂಗಧಾರಿಗಳನ್ನು ನೋಡಿದರೆ ಪರಮಾನಂದವಾಗಬಹುದು. ಆದರೆ ಚೆನ್ನಬಸವಣ್ಣನ ದೃಷ್ಟಿಯಲ್ಲಿ ಲಿಂಗಧಾರಿಗಳೆಲ್ಲ ಭಕ್ತರಲ್ಲ, ಶರಣರಲ್ಲ.

---

೧೨೩. ಚೆ. ಬ. ವ. ಪುಟ ೮೬. ೧೨೪. ವ. ಶಾ. ಸಾ. ಭಾಗ ೧. (ಪೂ) ಪುಟ ೨೧೦.

೧೨೪. "ಬಟ್ಟಬಯಲೆಲ್ಲ ಗಟ್ಟಿಗೊಂಡಡೆ, ಸ್ವರ್ಗ ಮರ್ತ್ಯ ಪಾತಾಳಕ್ಕೆ ತಾನಿನ್ನೆಲ್ಲಿಹುದೋ! ಮೇಘಜಲವೆಲ್ಲ ಮುತ್ತಾದಡೆ ಸಪ್ತಸಾಗರಂಗಳಿಗೆ ಉದಕವಿನ್ನೆಲ್ಲಿಹುದೋ? ಕಷ್ಟಜೀವಿ ಮನುಜರೆಲ್ಲ ನೆಟ್ಟನೆ ಶಿವಜ್ಞಾನಿಗಳಾದಡೆ ಮುಂದೆ ಭವದ ಬಳ್ಳಿಗೆ ಬೀಜವಿನ್ನೆಲ್ಲಿಹುದೋ? ನಮ್ಮ ಕೂಡಲ ಚೆನ್ನಸಂಗಯ್ಯನಲ್ಲಿ (ಸಾವಿರಕ್ಕೊಬ್ಬ ಸತ್ಯ) ಲಕ್ಷಕ್ಕೊಬ್ಬ ಭಕ್ತ ಕೋಟಿಗೊಬ್ಬ ಶರಣ"

ಆಗಿನ ವಚನಕಾರರಲ್ಲೆಲ್ಲ ಷಟ್ಸ್ಥಲದ ಸಂಪೂರ್ಣ ವಿವರಗಳನ್ನು ಕೊಡುವಾತನು ಚೆನ್ನಬಸವನು. ಬಸವಣ್ಣನವರು ಈ ಸಿದ್ಧಾಂತವನ್ನು ವಿವರಿಸುವ ಗೋಜಿಗೆ ಹೋಗಲಿಲ್ಲ. "ಆಡಿಹರಯ್ಯ, ಹಾಡಿಹರಯ್ಯ ಮನ ಬಂದಪರಿಯಲಿ" ಎಂದು ಭಕ್ತಜನರನ್ನು ಉದ್ರೇಕಗೊಳಿಸಿ ತಾವೂ ಉದ್ರೇಕಗೊಂಡು ಭಕ್ತಿಪಾರವಶ್ಯದಲ್ಲಿ ಮೈಮರೆಯುವುದೂ, ಬಂದ ಶರಣರನ್ನು ಸತ್ಕರಿಸಿ ಮೈಮರೆಯುವುದೂ ಅವರ ಕಾರ್ಯಕಲಾಪಗಳಾಗಿದ್ದುವು. ಸಿದ್ಧರಾಮನು ಗುರುವಾಗಿದ್ದು ಹಾವಿನಹಾಳ ಕಲ್ಲಯ್ಯ ಮುಂತಾದವರಿಗೆ ಬೋಧೆ ಮಾಡಿರುವುದಾದರೂ, ಷಟ್ಸ್ಥಲ ಸಿದ್ಧಾಂತದ ವಿವರಗಳು ಅಲ್ಲಿ ಸಾಕಾದಷ್ಟು ದೊರೆಯುವುದಿಲ್ಲ. ಆತನ ಜೀವನ ಚರಿತ್ರೆಯಲ್ಲಾದರೋ ಕಪಿಲಸಿದ್ಧ ಮಲ್ಲಿಕಾರ್ಜುನನಿಗೆ ದೇವಸ್ಥಾನವನ್ನು ಕಟ್ಟಿಸುವುದೂ, ಅನಂತರ *ಸ್ಥಾವರಲಿಂಗ ಪೂಜೆಯನ್ನು ಬಿಟ್ಟು ಇಷ್ಟಲಿಂಗದ ಕಡೆಗೆ ತಿರುಗಿದುದೂ, ಕೊನೆಯಲ್ಲಿ ಅಲ್ಲಮನ ಪ್ರಭಾವದಿಂದ ಅದ್ವೈತಕ್ಕೆ ತಿರುಗಿದುದೂ, ಅವುಗಳಲ್ಲಿನ ಹೋರಾಟಗಳೂ ಕಂಡು ಬರುತ್ತವೆ. ಅಲ್ಲಮನಾದರೋ ಷಟ್ಸ್ಥಲವನ್ನೂ ಮೀರಿದವನಾಗಿದ್ದನು. ಅದರಲ್ಲೊಂದು ಅಭಿಮಾನವಿಟ್ಟು ಅದನ್ನು ಪ್ರಚಾರ ಮಾಡುವ ಹವ್ಯಾಸಕ್ಕೆ ಆತನು ಹೋಗಲಿಲ್ಲ. ಸ್ವಯಂ ಲಿಂಗವಾಗಿ ಚರಿಸಿ ಲಿಂಗವಾಗಿ ಉಳಿದನು. ಮಹದೇವಿಯಕ್ಕನ ಹಂಬಲೇ ಬೇರೆಯಾಗಿತ್ತು. ಚೆನ್ನಮಲ್ಲಿಕಾರ್ಜುನನನ್ನು ಕೈಹಿಡಿಯಬೇಕೆಂಬ ತವಕ ಶರಣಸತಿ ಲಿಂಗಪತಿಯ ಭಾವವನ್ನು ಆಕೆಯಲ್ಲಿ ಸಹಜವಾಗಿ ಉಂಟುಮಾಡಿತು. ಪ್ರಭುವಿನ ಪ್ರಭಾವದಿಂದ ಜ್ಞಾನಿಯಾಗಿ ಅದ್ವೈತಿಯಾಗಿ ಪರಿಣಾಮ

---

೧೨೪. ಚೆ. ಬ. ವ. ಪುಟ ೨೦.

* ಸಿದ್ಧರಾಮನ ವಚನಗಳೆಂದು 'ಶೂನ್ಯಸಂಪಾದನೆ' ಮುಂತಾದ ಗ್ರಂಥಗಳಲ್ಲಿ ಸೇರಿಸಿರುವ ವಚನಗಳ ಆಧಾರದಿಂದ. ಆದರೆ ಹಲವು ವಚನಗಳು ಪ್ರಕ್ಷಿಪ್ತಗಳೆಂದು ನಮಗೆ ತೋರುತ್ತವೆ. ಅದರ ಚರ್ಚೆಯನ್ನು ಇಲ್ಲಿ ಮಾಡಿಲ್ಲ.

ಹೊಂದಿದಳು. ತಾನು ಉಪದೇಶಮಾಡುವ ಗುರುವೆಂಬ ಭಾವನೆ ಆಕೆಗೆ ಎಂದೂ ಹುಟ್ಟಲಿಲ್ಲ. ಆದುದರಿಂದ ಶಿವಾನುಭವ ಮಂಟಪದಲ್ಲಿ ಭಕ್ತ ಜನಗಳು ಸೇರಿದಾಗ ಷಟ್ಸ್ಥಲ ಸಿದ್ಧಾಂತವನ್ನು ಉಪದೇಶಿಸುವ ಕಾರ್ಯ ಭಾಗ ಚೆನ್ನಬಸವನ ಪಾಲಿಗೆ ಬಂತು. ಹೀಗೆ ಉಪದೇಶಿಸುವ ಗುರು ತಾನೆಂಬ ಅರಿವೂ ಆತನಿಗಿತ್ತು. ಆದುದರಿಂದ ಷಟ್ಸ್ಥಲ ಸಿದ್ಧಾಂತಕ್ಕೆ ಪ್ರಥಮತಃ ಸರಿಯಾದ ತಳಹದಿಯನ್ನು ಹಾಕಿ ಆ ಭವ್ಯಮಂದಿರವನ್ನು ಸುಂದರವಾಗಿ ಕಟ್ಟಿದಾತನು ಚೆನ್ನಬಸವನೇ ಆಗಿದ್ದಾನೆ.

ಕರಣಹಸುಗೆಯಲ್ಲಿ ದೇಹದ ರಚನೆ, ಮನಸ್ಸಿನ ವ್ಯಾಪಾರ, ಇಂದ್ರಿಯಾದಿಗಳ ಕಾರ್ಯ, ಸಪ್ತವ್ಯಸನಗಳು, ಷಡೂರ್ಮಿಗಳು, ಮುಂತಾದುವನ್ನೆಲ್ಲ ವಿಸ್ತಾರವಾಗಿ ಆತನು ವರ್ಣಿಸಿದ್ದಾನೆ. ಷಟ್ಸ್ಥಲಕ್ಕೆ ಪೀಠಿಕೆಯಾಗಿ ಪರವಸ್ತುವಿನ ಸ್ವರೂಪ, ನಿಷ್ಕಲ, ಸಕಲ ನಿಷ್ಕಲ ಮತ್ತು ಸಕಲಗಳನ್ನೂ ಸಾದಾಖ್ಯಗಳನ್ನೂ, ಮುವ್ವತ್ತಾರು ತತ್ತ್ವಗಳನ್ನೂ ವಿವರಿಸಿ, ಅಂಗದ ಉತ್ಪತ್ತಿ, ಪ್ರವೃತ್ತಿ ಮಾರ್ಗದಲ್ಲಿ ದೇಹೋಪಾಧಿಗಳು ಬಂದು ಸೇರುವ ಕ್ರಮ, ನಿವೃತ್ತಿ ಮಾರ್ಗದಲ್ಲಿ ಅವುಗಳಿಂದ ಬಿಡುಗಡೆ ಹೊಂದುವ ಕ್ರಮ ಇವುಗಳನೆಲ್ಲ ತಿಳಿಸಿದ್ದಾನೆ. 'ವಿಜಯ ಭೈರವೀ' ಎಂಬ ಆಗಮ ಗ್ರಂಥವನ್ನು ಚೆನ್ನಬಸವನು ಆಧಾರವಾಗಿಟ್ಟುಕೊಂಡಿದ್ದನೆಂದು ತೋರುತ್ತದೆ. ಆತ್ಮಸ್ವರೂಪವನ್ನು ತಿಳಿಯಬೇಕಾದ ಸಾಧಕನಿಗೆ ಅವುಗಳ ಜ್ಞಾನ ಅತ್ಯಾವಶ್ಯಕ. ತಾನು ಯಾರು? ಎಂಬುದನ್ನು ತಿಳಿದು ಮುಂದೆ ಬಿಡುಗಡೆಗೆ ಸಾಧನೆ ಮಾಡಬೇಕು. ವೀರಶೈವ ಸಿದ್ಧಾಂತವನ್ನು ವಿವರಿಸತೊಡಗಿದವರು ಚೆನ್ನಬಸವನ ಪಂಥವನ್ನೇ ಹಿಡಿದು ಈ ಎಲ್ಲ ವಿಷಯಗಳನ್ನೂ ವಿವರಿಸಿದ್ದಾರೆ.

ಚೆನ್ನಬಸವನು ಪ್ರಭುವಿನಂತೆಯೆ ಅಂತರಂಗ ಶುದ್ಧಿ, ಒಳ್ಳೆಯ ನಡತೆ ಮತ್ತು ನಿಷ್ಕೃಷ್ಟವಾದ ಜ್ಞಾನ,—ಇವುಗಳು ಆವಶ್ಯಕವೆಂದು ಒತ್ತಿ ಹೇಳುತ್ತಿದ್ದನು.

೧೨೫. "ಹೊನ್ನು ಹೆಣ್ಣು ಮಣ್ಣು ಬಿಟ್ಟು ಮಂಡೆಯ ಬೋಳಿಸಿಕೊಂಡು ಬೋಳಾದ ಬಳಿಕ ನಿರಾಸಕ್ತನಾಗಿ ಶಿವಧ್ಯಾನ ಪರಾಯಣನಾಗಿಪ್ಪುದೀಗ ಪ್ರಥಮ ಬೋಳು.

---

೧೨೫. ವ. ಶಾ. ಸಾ. (ಉ) ಪುಟ ೧೩೨.

ಲಿಂಗಾಣತಿಯಿಂದ ಬಂದುದ ಕೈಕೊಂಡು ಲಿಂಗಸಾವಧಾನವಾಗಿಪ್ಪುದೀಗ ದ್ವಿತೀಯ ಬೋಳು. ಶರಣಸತಿ ಲಿಂಗಪತಿ ಎಂಬುಭಯವಳಿದು ಪರಮಾನಂದದಲ್ಲಿಪ್ಪುದೀಗ ತೃತೀಯ ಬೋಳು. ಬೋಳಿನ ಅಸುವ ಕೂಡಲ ಚೆನ್ನಸಂಗಯ್ಯನಲ್ಲಿ ಅಲ್ಲಯ್ಯ ಬಲ್ಲ"

೧೩೬. "ಕೇಶಕಾಷಾಯಾಂಬರವನಿಕ್ಕಿದೊಡೇನೋ? ವಿಭೂತಿ ರುದ್ರಾಕ್ಷಿ ಧರಿ ದೊಡೇನೋ? ಸಾಕಾರದಲ್ಲಿ ಸನ್ಮತನಲ್ಲ, ನಿರಾಕಾರದಲ್ಲಿ ನಿರುತನಲ್ಲ, ಪಾರಮಾರ್ಥ ದಲ್ಲಿ ಪರಿಣಾಮಿಯಲ್ಲ. ಇದು ಕಾರಣವಾಗಿ ಕೂಡಲ ಚೆನ್ನಸಂಗಮ ದೇವಾ ತುರುಬಾಗಲಿ ಜಡೆಯಾಗಲಿ ಬೋಳಾಗಲಿ ಅರಿವು ಆಚಾರವುಳ್ಳಡೆ ಜಂಗಮ"

ಬರಿಯ ವೇಷಭಾಷೆಗಳಿಂದ ಪ್ರಯೋಜನವಿಲ್ಲ. ಅರಿವು, ಆಚಾರ, ಎಂದರೆ "ಅಂತರಂಗದಲ್ಲಿ ಅರಿವು, ಬಹಿರಂಗದಲ್ಲಿ ಕ್ರಿಯೆ" ಇವು ಪರಸ್ಪರ ಸಮರಸವಾಗಿ ಕೂಡಿರಬೇಕು. ಜಂಗಮಕ್ಕೆ ಇದೇ ಲಕ್ಷಣ. ಸರಿಯಾದ ಜ್ಞಾನವಿಲ್ಲದೆ ಆಚರಣೆ ಮಾತ್ರವಿದ್ದರೆ ಅದು "ಕರ್ಮದ ಬೆಳಸು"

೧೩೭. "ಮಾಡುವುದಯ್ಯ ಮರುಳುಗೊಂಡಂತೆ. ಮರ್ಮವನರಿಯದೆ ಮಾಡುವ ಮಾಟ ಕರ್ಮದ ಬೆಳಸು, ಸುಯಿಧಾನದ ಕೇಡು. ಕೂಡಲ ಚೆನ್ನಸಂಗಯ್ಯ, ನಿಮ್ಮ ಶರಣರ ಅನುವನರಿದು ಮಾಡುವ ಮಾಟ ಲಿಂಗಜಂಗಮದ ಕೂಟ, ಭವಭಂಗದೋಟ"

ಆದುದರಿಂದ ಯಾವಾಗ ದೀಕ್ಷೆಯನ್ನು ಪಡೆದು ಲಿಂಗಧಾರಿಗಳಾಗಿ ಭಕ್ತ, ಮಹೇಶ, ಎಂದು ಮುಂತಾಗಿ ಕರಸಿಕೊಳ್ಳಲಾಗುವುದೋ ಆಗ ಆಯಾ ಸ್ಥಲದ ಲಕ್ಷಣಗಳನ್ನು ಪಡೆಯಬೇಕು.

೧೩೮. "ಭಕ್ತನು ಶಾಂತನಾಗಿರಬೇಕು. ತನ್ನ ಕುರಿತು ಬಂದ ಠಾವಿನಲ್ಲಿ ಸತ್ಯನಾಗಿ ಬೇಕು. ಭೂತಹಿತವಚನವ ನುಡಿಯಬೇಕು. ಸಕಲ ಪ್ರಾಣಿಗಳ ತನ್ನಂತೆ ಭಾವಿಸುವುದು. ಗುರು ಲಿಂಗ ಜಂಗಮಕ್ಕೆ (ತನುಮನಧನಗಳ) ಸವೆಯಿಸಬೇಕು. ಅಪಾತ್ರದಾನವ ಮಾಡಲಾಗದು. ಸಕಲೇಂದ್ರಿಯಂಗಳ ತನ್ನ ವಶವ ಮಾಡಬೇಕು. ಇದೆ ಮೊದಲಲ್ಲಿ ಬೇಹ ಶೌಚ ನೋಡಾ. ಲಿಂಗವ ಪೂಜಿಸಿ ಪ್ರಸಾದವ ಪಡೆವಡೆ ಇದೆ ಸಾಧನ ನಮ್ಮ ಕೂಡಲ ಚೆನ್ನಸಂಗಯ್ಯನಲ್ಲಿ"

---

೧೩೬. ಚೆ. ಬ. ವ. ಪುಟ ೮೦. ೧೩೭. ವ. ಶಾ. ಸಾ. ಭಾಗ ೧. (ಉ) ಪುಟ ೧೧
೧೩೮. ವ. ಶಾ. ಸಾ. ಭಾಗ ೧. (ಪೂ) ಪುಟ ೧೮೩.

೧೨೯. "ಪರುಷದ ಪರ್ವತದಲ್ಲಿ ಕಬ್ಬುನ ಉಂಟೇ ಅಯ್ಯ? ಅಷ್ಟವಿಧಾರ್ಚನೆ ಷೋಡಶೋಪಚಾರವ ಮಾಡುವಾತಂಗೆ ಅವಗುಣ ಉಂಟೆ ಅಯ್ಯ? ಇದು ಕಾರಣವಾಗಿ ಭಕ್ತಕಾಯ ಮಮಕಾಯವಯ್ಯ ಕೂಡಲ ಚೆನ್ನಸಂಗಮ ದೇವಾ"

ಯಾರು ಮಧ್ಯಮಜ್ಞಾನಿಗಳಾಗಿ ವಿಚಾರಗಳನ್ನು ಖಚಿತವಾಗಿ ತಿಳಿದುಕೊಳ್ಳದೆ ಗ್ರಂಥಸ್ಥವಾದ ಕೆಲವು ವಾಕ್ಯಗಳನ್ನೂ ಪಾರಿಭಾಷಿಕ ಪದಗಳನ್ನೂ ಬಾಯಲ್ಲಿ ಹೇಳುತ್ತ ತಾವು ದೊಡ್ಡ ಪಂಡಿತರೆಂದು ತೋರ್ಪಡಿಸಿಕೊಳ್ಳುತ್ತಿದ್ದರೋ ಅಂಥವರನ್ನೆಲ್ಲ ಚೆನ್ನಬಸವನು ಖಂಡಿಸಿದ್ದಾನೆ. ಈ ಖಂಡನೆಯಲ್ಲಿ ಚೆನ್ನಬಸವನ ಬುದ್ಧಿಶಕ್ತಿ ಅಧಿಕಾರವಾಣಿ ಶಾಸ್ತ್ರಜ್ಞಾನ ಬಹಳ ಚೆನ್ನಾಗಿ ವ್ಯಕ್ತವಾಗುತ್ತವೆ.

೧೩೦. "ತಾಳು ಬೋಳು ಕಪ್ಪರವೆಂತೆಂಬರು. ತಾಳಾವುದು, ಬೋಳಾವುದು, ಕಪ್ಪರವಾವುದೆಂದರಿಯರು. ಕಾಯದ ಕಳವಳದ ಗುಣವ ತಾಳ ಬಲ್ಲಡೆ ತಾಳು. ಸಂಸಾರವಿಷಯವ ಬೋಳಿಸ ಬಲ್ಲಡೆ ಬೋಳು. ಪರದಲ್ಲಿ ಪರಿಣಾಮಿಸ ಬಲ್ಲಡೆ ಕಪ್ಪರ. ಇಂತಿಲ್ಲದಿದ್ದೊಡೆ ನಮ್ಮ ಕೂಡಲ ಚೆನ್ನಸಂಗಯ್ಯನಲ್ಲಿ ಡೊಂಬರ ಬೋಳು"

೧೩೧. "ದೇಹ ನಿರ್ದೇಹವೆನುತಿಪ್ಪರಯ್ಯ. ದೇಹ ನಿರ್ದೇಹವಪ್ಪ ಮರ್ಮವನರಿಯರು. ಅಹಂ ಎಂಬುದೇ ದೇಹ, ದಾಸೋಹಂ ಎಂಬುದೇ ನಿರ್ದೇಹ ನೋಡಾ. ...............ಅಹಂಭಾವವಳಿದವರ ಕೂಡಲ ಚೆನ್ನಸಂಗಯ್ಯನಲ್ಲಿ ನಿರ್ದೇಹಿಗಳೆಂಬೆ"

೧೩೨. "ಪದಾರ್ಥ ಪದಾರ್ಥವೆಂದೆಂಬಿರಿ. ಪದವಾವುದು ಅರ್ಥವಾವುದು ಎಂದರಿಯರಿ. ಪದವೇ ಲಿಂಗ, ಅರ್ಥವೇ ಭಕ್ತಿ. ಇದನರಿದು ಪದಾರ್ಥವೆಂದು ತಂದು ಅರ್ಪಿತವ ಮಾಡಬಲ್ಲಡೆ, ಕೂಡಿಪ್ಪನಯ್ಯ ನಮ್ಮ ಕೂಡಲ ಚೆನ್ನಸಂಗಮ ದೇವ"

ಸ್ಪಷ್ಟೋಕ್ತಿ, ಅರ್ಥಗರ್ಭಿತವಾಗಿ ಮಿತಪದಗಳಿಂದ ಕೂಡಿದ ಸೂತ್ರೋಕ್ತಿ, ಇವು ಚೆನ್ನಬಸವನ ವಚನಗಳ ಲಕ್ಷಣಗಳಾಗಿವೆ. ಆದರೆ ಅವುಗಳಿಗೆ ಅಲ್ಲಮನ ವಚನಗಳಿಗೆ ಬೇಕಾಗಿರುವಂತೆ ವ್ಯಾಖ್ಯಾನಗಳು ಆವಶ್ಯಕವಿಲ್ಲ. ಕೇಳುವ ಭಕ್ತರಿಗೆ ಸುಲಭದಲ್ಲಿ ಅರ್ಥವಾಗಿ ಚೆನ್ನಬಸವನು ದೊಡ್ಡ ಮೇಧಾವಿಯೆಂದು ಥಟ್ಟನೆ ಹೊಳೆಯುತ್ತದೆ.

---

೧೨೯. ಚೆ. ಚ. ವ. ಪುಟ ೯. ೧೩೦. ಚ. ಬ. ವ. ಪುಟ ೯೮.
೧೩೧. ವ. ಶಾ. ಸಾ. ಭಾಗ ೧. (ಪೂ) ಪುಟ ೧೫೯. ೧೩೨. ಚೆ. ಬ. ವ. ಪುಟ ೫೮.

5

೧೩೩. "ಉದಯ, ಮಧ್ಯಾಹ್ನ, ಸಂಧ್ಯಾಕಾಲವ ನೋಡಿ ಮಾಡುವ ಕರ್ಮಿ ನೀ ಕೇಳಾ. ಉದಯವೆಂದೇನೋ ಶರಣಂಗೆ? ಮಧ್ಯಾಹ್ನವೆಂದೇನೋ ಶರಣಂಗೆ? ಅಸ್ತಮಾನವೆಂದೇನೋ ಶರಣಂಗೆ? ಮಹಾಮೇರುವಿನ ಮರೆಯಲಿದ್ದು ನೆಳಲ ನರಸುವ ಭಾವಭ್ರಮಿತರ ಮೆಚ್ಚ ಕೂಡಲ ಚೆನ್ನಸಂಗಮ ದೇವ."

ಕೇವಲ ಉಪಾಧಿಯಿಂದ ಪೂಜಿಸುವ ಅಲ್ಪಜ್ಞಾನಿಗಳಾದ ಕರ್ಮಠರಿಗೆ, ಕಾಲಕಲ್ಪಿತಗಳಿಂದ ಪ್ರಯೋಜನವಿಲ್ಲವೆಂದು ಹೇಳಿದ್ದಾನೆ. ಇಂಥ ಕರ್ಮಠರು ಶೀಲಗಳೆಂದು ಹೇಳಿಕೊಂಡು ಹಾಲ ನೇಮ, ಮೊಸರ ನೇಮಗಳಲ್ಲಿ ಒದ್ದಾಡುವುದನ್ನು ನೋಡಿ, ಅವು ಪಾರಮಾರ್ಥವನ್ನು ದೊರಕಿಸುವುದಿಲ್ಲ ವೆಂದೂ, ಶೀಲವೆಂಬುದು ಅಂತರಂಗಶುದ್ಧಿಗೂ ಸತ್ಕ್ರಿಯಾಚರಣೆಗೂ ನಿಕಟ ಸಂಬಂಧವುಳ್ಳದ್ದೆಂದೂ ಸ್ಪಷ್ಟವಾಗಿ ಹೇಳಿದ್ದಾನೆ.

೧೩೪. "ಶೀಲ ಶೀಲ ಎಂದು ಗರ್ವಿಸಿ ನುಡಿವುತಿಪ್ಪಿರಿ. ಶೀಲವಾವುದೆಂಬರಿಯಿರಿ ಕೇಳಿರಣ್ಣಾ. ಇದ್ದುದ ವಂಚನೆಯ ಮಾಡದಿಪ್ಪುದೇ ಶೀಲ. ಇಲ್ಲದುದಕ್ಕೆ ಕಡಸ ಮಾಡದಿಪ್ಪುದೇ ಶೀಲ. ಪರಧನ ಪರಸ್ತ್ರೀಯರ ಮುಟ್ಟದಿಪ್ಪುದೇ ಶೀಲ. ಪರದೈವ ಪರಸಮಯಕ್ಕೆ ಅಳುಪದಿಪ್ಪುದೇ ಶೀಲ. ಗುರುನಿಂದೆ ಹರನಿಂದೆ ಚರನಿಂದೆ ಕೇಳದಿಪ್ಪುದೇ ಶೀಲ. ನಮ್ಮ ಕೂಡಲ ಚೆನ್ನಸಂಗನ ಶರಣರ ಬರ ವಿಂಗೆ ಮೆಯ್ಯಾಂತುದೇ ಅಚ್ಚಶೀಲ"

೧೩೫. "ಶೀಲವಂತನಾದೊಡೆ ಪ್ರಪಂಚ ನಾಸ್ತಿಯಾಗಿರಬೇಕು. ಸೀಮೆಯಾದೊಡೆ ಪಂಚೇಂದ್ರಿಯಂಗಳು ನಾಸ್ತಿಯಾಗಿರಬೇಕು. ತನ್ನ ಕರ್ತುವಿನಲ್ಲಿ ಸಕಲ ಸಂಶಯ ನಾಸ್ತಿಯಾದ ಶೀಲಕ್ಕೆ ಭವಂ ನಾಸ್ತಿ, ಭ್ರಮೆ ನಾಸ್ತಿ. ಇವು ನಾಸ್ತಿಯಾದಲ್ಲದೆ ನಮ್ಮ ಕೂಡಲ ಚೆನ್ನಸಂಗಯ್ಯನಲ್ಲಿ ಶೀಲವಂತನೆನಿಸಬಾರದು. ಈ ವಂಚನೆಯ ಡಂಭಕ ಅಪಸ್ಮಾರಿಗಳಿಗೆಂತಯ್ಯ"

ಚೆನ್ನಬಸವನು ಮುಖ್ಯವಾಗಿ ಮತಪ್ರಚಾರ ಕಾರ್ಯದಲ್ಲಿಯೂ ಸಿದ್ಧಾಂತ ಪ್ರತಿಪಾದನೆಯ ಕಾರ್ಯದಲ್ಲಿಯೂ ನಿರತನಾಗಿದ್ದನು. ಆದುದರಿಂದ ಭವಿಗ ಳಾಗಿದ್ದವರು ಭಕ್ತರಾದ ಬಳಿಕ ಪುನಃ ಭವಿಗಳನ್ನು ಬೆರಸಲಾಗದು, ಅನ್ಯದೈವ ಭಜನೆ ಮುಂತಾದುವನ್ನು ಮಾಡಲಾಗದು ಎಂದು ಹೇಳಬೇಕಾಗಿತ್ತು.

---

೧೩೩. ವ. ಶಾ. ಸಾ. ಭಾಗ ೧. (ಪೂ) ಪುಟ ೩೪೭. ೧೩೪. ಚೆ. ಬ. ವ. ಪುಟ ೪೪.
೧೩೫. ಚೆ. ಬ. ವ. ಪುಟ ೯೨.

ಭವಿ ಭಕ್ತ ಎಂಬ ಈ ಭೇದಗಳನ್ನು ಮಾಡುವುದು ಸರಿಯಲ್ಲವೆಂದೂ ಭವಿತನ ಎಂಬುದು ಲಿಂಗಧಾರಿಗಳಲ್ಲೂ ಅರಿಷಡ್ವರ್ಗದ ರೂಪದಲ್ಲಿರುವುದೆಂದೂ, ಈ ಅರಿಷಡ್ವರ್ಗವನ್ನು ಜಯಿಸದೆ ಇರುವವರೆಗೂ ಎಲ್ಲರೂ ಭವಿಗಳೇ ಆಗಿರುತ್ತಾರೆಂದೂ ತಾನು ಜ್ಞಾನಿಯಾಗಿ ತಿಳಿದಿದ್ದರೂ ಮತಪ್ರಚಾರದ ದೃಷ್ಟಿಯಿಂದ ಭಕ್ತರಿಗೆ ಹೆಚ್ಚಿನ ಸ್ಥಾನವನ್ನು ಕೊಟ್ಟು ಪುನಃ ಮತಾಂತರ ಹೊಂದಬೇಡಿರೆಂದು ಉಪದೇಶ ಮಾಡಬೇಕಾಗಿತ್ತು.

೧೩೬. "ಭವಿತನಕ್ಕೆ ಹೇಸಿ ಭಕ್ತನಾದ ಬಳಿಕ, ಆ ಭವಿಸಂಗ ಭಂಗವೆಂದರಿವುದು ನೋಡಾ. ಭವಿಮಿಶ್ರದ ಭಂಗಗಾರರು ನಮ್ಮ ಕೂಡಲ ಚೆನ್ನಸಂಗನು ದೇವರಲ್ಲಿ ಅವರು ಅತ್ತಲೂ ಅಲ್ಲ ಇತ್ತಲೂ ಅಲ್ಲ"

೧೩೭. "ಮಂಡಲ ಸುತ್ತಿದ ಹಾವಿನಂತೆ, ಮಡಿಲಲ್ಲಿ ಕಟ್ಟಿದರೇನು, ಕೊರಳ ಸುತ್ತಿದ ಹಾವಿನಂತೆ ಕೊರಳಲ್ಲಿ ಸುತ್ತಿದರೇನು ಹುಸಿ ಕಳವು ಪರದಾರ ಅನ್ಯದೈವಭಜನೆ ಭವಿಬಳಕೆ ಬಿಡದನ್ನಕ್ಕರ? ಲಿಂಗಭಕ್ತನೆನಿಸಬಾರದು. ಭಕ್ತ ಲಿಂಗವೆನಲಿಲ್ಲ. ಆಚಾರ ಸಹಿತ ಭಕ್ತ, ಅನಾಚಾರ ಸಹಿತ ನರರು ಇಂತೆನಲಾಗಿ ಆಚಾರ ಭ್ರಷ್ಟರಾದ ಅನಾಮಿಕರ ನಮ್ಮ ಕೂಡಲ ಚೆನ್ನಸಂಗಯ್ಯ ಬಲ್ಲನಾಗಿ ಒಲ್ಲನು"

ಷಟ್ಸ್ಥಲ ಸಿದ್ಧಾಂತದ ತತ್ತ್ವಗಳನ್ನು ಸಮಾಜ ರಚನೆಗೆ ಸಮನ್ವಯಿಸಿಕೊಂಡು ಪಾರಮಾರ್ಥದಲ್ಲಿ ಸರ್ವ ಸಮಾನತೆಯಿರುವಂತೆ ಲೌಕಿಕದಲ್ಲಿಯೂ ಸರ್ವ ಸಮಾನತೆ ಇರಬೇಕೆಂದು ಒತ್ತಿ ಹೇಳಿ ಚೆನ್ನಬಸವನು ತನ್ನ ಪ್ರಭಾವವನ್ನು ಬೀರಿದ್ದಾನೆ. ಸಮಾಜ ರಚನೆಯ ಪ್ರಕರಣದಲ್ಲಿ ಇದರ ಹೆಚ್ಚಿನ ವಿವರಗಳನ್ನು ಕೊಟ್ಟಿದ್ದೇವೆ. ಇಲ್ಲಿ ಸ್ಥೂಲವಾಗಿ ಆ ಕಾರ್ಯಗಳ ಸ್ವರೂಪವನ್ನು ಹೇಳಲಾಗುತ್ತದೆ. ಲಿಂಗಧಾರಿಗಳೆಲ್ಲ ಒಂದೇ ಜಾತಿ ಎಂಬುದನ್ನು ತೀರ್ಮಾನಿಸಿದ ಮೇಲೆ, ಅವರಲ್ಲಿ ಹೆಚ್ಚು ಕಡಮೆಗಳಿಲ್ಲೆಂದೂ, ಸಮಾಜದಲ್ಲಿ ಸಮನಾದ ಹಕ್ಕುಗಳಿವೆಯೆಂದೂ ಆದುದರಿಂದ ಸಹಪಂಕ್ತಿಭೋಜನ ಮತ್ತು ಕೊಳ್ಕೊಡೆಯಿಂದ ಸಂಬಂಧವನ್ನು ಬೆಳಸಬೇಕೆಂದೂ, ಹಾಗೆ ಮಾಡದೆ ಇನ್ನೂ ಪೂರ್ವಾಶ್ರಯವನ್ನು ನೆನೆಯುವವರೂ ವರ್ಣ ವ್ಯತ್ಯಾಸಗಳನ್ನು ನೋಡುವವರೂ ನರಕಕ್ಕೆ ಹೋಗುವರೆಂದೂ ಆತನು ತಿಳಿಯ ಹೇಳಿದನು ಗುರುಗಳಾದವರು ದೀಕ್ಷೆಯನ್ನು ಕೊಟ್ಟಮೇಲೆ ಭಕ್ತರಲ್ಲಿ ಭೇದವೆಣಿಸದೆ

೧೩೬. ಚೆ. ಬ. ವ. ಪುಟ ೫. ೧೩೭. ಚೆ. ಬ. ವ. ಪುಟ ೫.

ಅವರಲ್ಲಿ ಧಾರಾಳವಾಗಿ ಹೊಕ್ಕು ಬಳಸಬೇಕೆಂದೂ, ಭೋಜನಕ್ಕೆ ಕರೆದಾಗ ನಿಸ್ಸಂಕೋಚವಾಗಿ ಆಹ್ವಾನ ಸ್ವೀಕಾರಮಾಡಬೇಕೆಂದೂ, ಹಾಗಲ್ಲದೆ ಪಡಿಪದಾರ್ಥಗಳನ್ನು ತೆಗೆಯಿಸಿಕೊಂಡು ಬಂದು ಬೇರೆ ಅಡಿಗೆಯನ್ನು ಮಾಡಿಕೊಂಡರೆ ಅಂತಹ ಗುರುವನ್ನು ಎಲ್ಲರೂ ತಿರಸ್ಕರಿಸಬೇಕೆಂದೂ ಹೇಳಿದನು. ಇಷ್ಟಲಿಂಗವೆಂಬುದು ಸಾಧನೆಗಾಗಿ ಕೊಟ್ಟ ಉಪಕರಣವಾದದ್ದರಿಂದ ಅದೇ ಸರ್ವಸ್ವವಲ್ಲವೆಂದೂ, ಪ್ರಾಣಲಿಂಗಜ್ಞಾನ ಅದಕ್ಕಿಂತ ಮುಖ್ಯವಾಗಿರುವುದರಿಂದ ಅಂತರಂಗ ಪೂಜೆಯಿಂದ ಹೆಚ್ಚುಫಲವಲ್ಲದೆ ಬಾಹ್ಯಪೂಜೆಯಿಂದ ಪ್ರಯೋಜನವಿಲ್ಲವೆಂದೂ ಹೇಳಿದ್ದಲ್ಲದೆ, ಬಾಹ್ಯದಲ್ಲಿರುವ ಕುರುಹು—ಇಷ್ಟಲಿಂಗ—ಒಂದು ವೇಳೆ ದೇಹದಿಂದ ಬಿದ್ದು ಹೋದರೆ, ಅಥವಾ ನಷ್ಟವಾಗಿ ಹೋದರೆ, ಆತ್ಮಘಾತಮಾಡಿಕೊಳ್ಳಕೂಡದೆಂದೂ, ಹಾಗೆ ಮಾಡಿಕೊಂಡವರು ನರಕಕ್ಕೆ ಹೋಗುವುದು ಖಂಡಿತವೆಂದೂ ಸಪ್ರಮಾಣವಾಗಿ ತೋರಿಸಿಕೊಟ್ಟನು. ಚೆನ್ನಬಸವನು ಕೊಟ್ಟಿರುವ ದೃಷ್ಟಾಂತಗಳು, ಆತನ ವಾದಸರಣಿ, ನಿಶ್ಚಿತಜ್ಞಾನ, ಒಂದು ಆತ್ಮವಿಶ್ವಾಸ, ಧೈರ್ಯ, ಅನುಪಮಗಳಾಗಿ ಪ್ರತಿವಾದಿಗಳ ಬಾಯನ್ನು ಮುಚ್ಚಿಸತಕ್ಕುವಾಗಿವೆ. ಕಾಯಕದ ಮಹತ್ವವನ್ನು ಆತನು ಬಹಳ ಚೆನ್ನಾಗಿ ನಿರೂಪಿಸಿದ್ದಾನೆ. ಅದರಲ್ಲಿಯೂ ಕಷ್ಟಪಟ್ಟು ಕೆಲಸಮಾಡಿ ಸಂಪಾದಿಸಿದ ದ್ರವ್ಯದಿಂದ ದಾಸೋಹವನ್ನು ಮಾಡಿದರೆ ಫಲವುಂಟೆಂದೂ, ಹಿರಿಯರು ಗಳಿಸಿಟ್ಟದ್ದನ್ನು ಮಾತ್ರ ವೆಚ್ಚಮಾಡಿ ದಾಸೋಹವನ್ನು ಮಾಡುವ ಸೋಮಾರಿಗೆ ಫಲ ದೊರೆಯದೆಂದೂ ಹೇಳಿರುವುದಲ್ಲದೆ ತನು ಮನ ಬಳಲಿಸಿ, ಗಳಿಸಿ ತಂದವನ ಮನೆ ಕೈಲಾಸವೆಂದರಿತು ಹೋಗಬೇಕೆಂದೂ, ಸೋಮಾರಿಯಾದ ಐಶ್ವರ್ಯವಂತನ ಮನೆಯನ್ನು ಹೊಗಬಾರದೆಂದೂ ತಿಳಿಸಿದ್ದಾನೆ.

ಸಮಾಜರಚನೆಯ ಕ್ಷೇತ್ರದಲ್ಲಿ ಹೀಗೆ ಚೆನ್ನಬಸವನು ಅದ್ಭುತವಾದ ಕೆಲಸಮಾಡಿ ವೀರಶೈವರ ಕೃತಜ್ಞತೆಗೆ ಪಾತ್ರನಾಗಿರುವನು. ಅಲ್ಲಮ ಮತ್ತು ಸಿದ್ಧರಾಮ ಇವರಿಬ್ಬರೂ ಚೆನ್ನಬಸವನ ಜ್ಞಾನವನ್ನೂ ಸಾಮರ್ಥ್ಯವನ್ನೂ ಚೆನ್ನಾಗಿ ಬಲ್ಲವರಾಗಿದ್ದರು. ಸಿದ್ಧರಾಮನಾದರೋ ಚೆನ್ನಬಸವನಂಥ ಗುರು ಲೋಕದಲ್ಲಿ ಒಬ್ಬನೇ, ಅಂಥವರು ಮತ್ತೊಬ್ಬರು ದೊರೆಯಲಾರರು ಎಂದು ಮೆಚ್ಚಿಕೊಂಡಿದ್ದಾನೆ.

೧೩೮. "ಎಲ್ಲರ ವರ್ಣಿಸ ಬಹುದು. ಎನ್ನ ನಲ್ಲ ಗುರುದೇವನ ವರ್ಣಿಸ ಬಾರದು. ಅಲ್ಲನ ನುಡಿಸ ಬಹುದು. ಎನ್ನ ನಲ್ಲ ಕಪಿಲ ಸಿದ್ಧ ಮಲ್ಲೇಂದ್ರನ ರೂಪು ಚೆನ್ನ ಬಸವನ ನುಡಿಸಿ ಗೆಲಬಾರದು ಖುಲ್ಲತನದಿಂದಾದರೂ ಕಲ್ಲಯ್ಯ"

ಎಂದು ಸ್ವಂತ ಅನುಭವದಿಂದ ಸಿದ್ಧರಾಮನು ಹೇಳಿದ್ದಾನೆ. ಇಷ್ಟ ಲಿಂಗ ಪತನವಾದರೆ ಗುರುವಿಲ್ಲವೆ? ಗುರುವಿನಿಂದ ಬೇರೊಂದು ಲಿಂಗವನ್ನು ಪಡೆಯಬಹುದು ಎಂದು ಚೆನ್ನಬಸವನು ಹೇಳುತ್ತಿದ್ದದ್ದು ಸಿದ್ಧರಾಮನಿಗೆ ಸರಿಬೀಳದೆ

೧೩೯. "ಲಿಂಗ ಹೋದರೇನು? ಗುರು ಉಂಟೆಂಬ ಬಾಲಭಾಷೆಯ ಕೇಳಲಾಗದು. ಕೇಳಿದವನ ಸಂಗ ಸಿಂಗಿ ಕಾಳಕೂಟ ವಿಷವು. ಆತನ ಸಂಗದಲ್ಲಿರಲು ಪಂಚ ಮಹಾಪಾತಕ ತಪ್ಪದಯ್ಯ ಕಪಿಲ ಸಿದ್ಧ ಮಲ್ಲಿಕಾರ್ಜುನಾ"

ಎಂದು ಪ್ರತಿ ಹೇಳಿ ವಾದಿಸಿದ್ದಕ್ಕೆ ಚೆನ್ನಬಸವನು ತಕ್ಕರೀತಿ ಸಮಾಧಾನ ಕೊಟ್ಟು ಬಾಯಿ ಮುಚ್ಚಿಸಿದ ಫಲವನ್ನು ಕಲ್ಲಯ್ಯನಿಗೆ ಹೇಳಿದ ವಚನವಲ್ಲಿ ಕಾಣಬಹುದಾಗಿದೆ. ಎಂತಹ ಗಹನ ವಿಚಾರದ ತಿರುಳನ್ನಾದರೂ ಸರಿಯೆ ಸುಲಭವಾಗಿ, ಸ್ವಲ್ಪದರಲ್ಲಿ, ಮನದಟ್ಟಾಗುವಂತೆ ಹೇಳಬೇಕೆಂದು ಕೇಳಿದರೆ ಚೆನ್ನಬಸವನು ಹಾಗೆಯೇ ಹೇಳುತ್ತಿದ್ದನು. ಷಟ್ಸ್ಥಲ ಸಾಧನೆ ಎಂಬುದು ಏನು? ಎಂದು ಕೇಳಿದರೆ,

"ಒಡಲುಗೊಂಡು ಒಡಲುವಿಡಿಯದೆ, ಒಡಲಿಲ್ಲದ ನಿಜದ ಬೆರಸೆಲವೋ"

ಎಂದು ಹೇಳುವನು.

೧೪೦. "ಕಾಯವಿಲ್ಲದ ಸಂಸಾರ ಚೋದ್ಯ. ಕಾಯದೊಳಗೆ ನಿರಾಳ ಚೋದ್ಯ. ನಿರಾಳ ದೊಳಗೊಂದು ಕೂಡಲ ಚೆನ್ನಸಂಗಯ್ಯನೆಂಬ ಶರಣ ಸನ್ಮುಕ್ ಚೋದ್ಯ ಮಹಾಚೋದ್ಯ"

ಎಂದು ಮಹಾತತ್ವವನ್ನು ಮಹಾಚೋದ್ಯವಾಗಿಯೇ ವಿವರಿಸುವನು. ಪಾದರಸದಂತೆ, ಮಿಂಚಿನಂತೆ, ಆತನ ಪ್ರತಿಭೆ. ಭಕ್ತರಾದ ಬಸವಣ್ಣನವರ ವರ್ತನೆಯನ್ನು ಸರಿಯಾದ ಮಿತಿಯಲ್ಲಿಡುವುದಕ್ಕೂ, ತಪ್ಪಿದಾಗ ಜ್ಞಾನ

೧೩೮. ಸಿ. ರಾ. ವ. ಪುಟ ೧೧೬. ೧೩೯. ಸಿ. ರಾ. ವ. ಪುಟ ೯೫.
೧೪೦. ವ. ಶಾ. ಸಾ. ಭಾಗ (ಪೂ) ಪುಟ ೭೪.

ಬೋಧೆಯನ್ನು ವಿನಯದಿಂದ ಮಾಡಿ ತಿದ್ದುವುದಕ್ಕೂ ಚೆನ್ನಬಸವನು ಸಹಾಯವಾಗಿದ್ದನು. ಆದರೂ ಸೋದರಮಾವನ ಎದುರಿಗೆ ನಿಂತು ತಾನು ಬಹು ಜ್ಞಾನಿಯೆಂದು ಹೆಮ್ಮೆಯಿಂದ ಎಂದೂ ನಡೆದುಕೊಳ್ಳಲಿಲ್ಲ; ಬುದ್ಧಿ ಚಮತ್ಕಾರವನ್ನು ಪ್ರದರ್ಶಿಸಲು ವಾದವನ್ನು ಮಾಡಲಿಲ್ಲ. ಬಸವಣ್ಣನವರೇ ತನಗೆ ಗುರುವೆಂದೂ ಇಷ್ಟಲಿಂಗವನ್ನು ದಯಪಾಲಿಸಿ ತನ್ನನ್ನು ಉದ್ಧರಿಸಿದ ಮಹಾತ್ಮರೆಂದೂ ಚೆನ್ನಬಸವನು ಅವರನ್ನು ಗೌರವಿಸುತ್ತಿದ್ದನು.

---

೬ನೆಯ ಪ್ರಕರಣ

# ವೈರಾಗ್ಯ—ಅಲ್ಲಮಪ್ರಭು

ಅಲ್ಲಮ ಪ್ರಭುವಿನ ವಚನಗಳಲ್ಲಿ ಕೆಲವನ್ನು ಈಗಾಗಲೇ ನೋಡಿದ್ದೇವೆ. ಅವುಗಳಿಂದ ಪ್ರಭುವಿನ ಮಹತ್ವ ಎಂತಹುದು ಎಂಬುದು ಸ್ವಲ್ಪಮಟ್ಟಿಗೆ ತಿಳಿದಿರಬೇಕು. ನಿಜವಾಗಿ ನೋಡಿದರೆ ಅಲ್ಲಮ ಪ್ರಭು ವಚನಧರ್ಮ ಸಂಸ್ಥಾಪಕ. ಆಗಿನ ಕಾಲದ ಮುಖ್ಯ ಸಾಧಕರನ್ನೆಲ್ಲ ಸಂಧಿಸಿ ಜ್ಞಾನ ಬೋಧೆ ಮಾಡಿ ಸರಿಯಾದ ಮಾರ್ಗವನ್ನು ತಿಳಿಸಿದ ಮಹಾತ್ಮನಾತನು; ಕಲ್ಯಾಣದಲ್ಲಿ ಶಿವಾನುಭವ ಮಂಟಪದ ಅಧ್ಯಕ್ಷಪದವಿಯನ್ನಲಂಕರಿಸಿದ ಮಹಾ ಪ್ರಭು; ವೀರಶೈವ ಧರ್ಮಪುರುಷರಲ್ಲಿ ಅಗ್ರಗಣ್ಯ. ಬಸವಣ್ಣನವರು ಹೇಗೆ ಭಕ್ತಿಗೆ ಪ್ರಸಿದ್ಧಿ ಪಡೆದಿರುವರೋ ಹಾಗೆಯೇ ಅಲ್ಲಮ ಪ್ರಭು ಜ್ಞಾನ ಮತ್ತು ವೈರಾಗ್ಯಗಳಿಗೆ ಪ್ರಸಿದ್ಧಿಪಡೆದಿದ್ದಾನೆ. ಈ ಜ್ಞಾನ ಮತ್ತು ವೈರಾಗ್ಯ ಗಳನ್ನು ನೋಡಿದರೆ, ನಮಗೆ ಬುದ್ಧದೇವನ ನೆನಪು ಬರುತ್ತದೆ.

ಆತ್ಮಜ್ಞಾನಕ್ಕೆ ವೈರಾಗ್ಯ ಪೂರ್ವಹಂತವೆಂದು ಹೇಳುವುದುಂಟು. ವೈರಾಗ್ಯ ಆತ್ಮಜ್ಞಾನದ ಫಲವೂ ಆಹುದು. ಬೇರೊಂದು ಸಂದರ್ಭದಲ್ಲಿ ಮಹದೇವಿಯಕ್ಕ ಹೇಳಿದ

"ಆವುದು ಹಿಂದು ಆವುದು ಮುಂದು ಎಂಬುದನರಿಯೆನಯ್ಯಾ"

ಎಂಬಂತೆ, ಬೀಜವೃಕ್ಷ ನ್ಯಾಯದಂತೆ, ಇವುಗಳ ಸಂಬಂಧ. ಆತ್ಮನಿಗೆ ಪುಣ್ಯಪಾಪ, ಸುಖದುಃಖ, ಮೊದಲಾದುವುಗಳ ಲೇಪ ಇಲ್ಲದಿದ್ದರೂ ಅಹಂಕಾರ ಕಾರಣದಿಂದ ಎಲ್ಲ ತೋರಿಕೆಯೂ ಉಂಟಾಗಿ ಜನ್ಮಗಳನ್ನು ಎತ್ತಬೇಕಾ ಗುತ್ತದೆ. ಅಹಂಕಾರದಿಂದಲೇ ಆತ್ಮನಿಗೆ ಪ್ರಪಂಚದ ಬಂಧನಗಳು. ಅಹಂಕಾರವಿಲ್ಲದಿರುವುದೇ ವೈರಾಗ್ಯ.

"ಒಲ್ಲೆನೆಂಬುದು ವೈರಾಗ್ಯ. ಒಲಿವೆನೆಂಬುದು ಕಾಯಗುಣ"

ಅಹಂಕಾರ ಒಂದೇ ಬಾರಿಗೆ ಹೋಗತಕ್ಕದ್ದಲ್ಲ. ಅದಕ್ಕೂ ಸಾಧನೆ ಬೇಕು. ಬ್ರಹ್ಮಚರ್ಯ, ಗೃಹಸ್ಥ, ವಾನಪ್ರಸ್ಥ ಎಂಬ ಮೂರು ಆಶ್ರಮಗಳು ಅಹಂಕಾರವನ್ನು ಹೋಗಲಾಡಿಸುವುದಕ್ಕಾಗದಿದ್ದರೂ ಅದನ್ನು ಬಹುಮಟ್ಟಿಗೆ

ಕಡಮೆ ಮಾಡುವುದಕ್ಕಾಗಿ ಏರ್ಪಟ್ಟಿರುವ ಆಶ್ರಮಗಳು. ಶ್ರಮ ಮಹಿಸದಿದ್ದ 'ಅಹಂ' ಹೋಗುವುದಿಲ್ಲವೆಂಬುದು ಸ್ಪಷ್ಟವಾಗಿದೆ. ವೈರಾಗ್ಯದ ದೃಷ್ಟಿಯಿಂದ ಮುಕ್ತಿ ಎಂಬುದಾದರೂ ಏನು? ಸಂಕುಚಿತ ಭಾವವನ್ನೂ ಸ್ವಾರ್ಥವನ್ನೂ ಉಂಟುಮಾಡುವ 'ಅಹಂ' ಎಂಬುದನ್ನು ಕಳೆದುಕೊಂಡು ವಿಶ್ವಾತ್ಮನಲ್ಲಿ ಏಕಭಾವವನ್ನು ಪಡೆಯುವುದೇ ಆಗಿದೆ. ನಿರಹಂಭಾವದ ಈ ವಿಶ್ವಾತ್ಮನಿಗೆ "ವಸುಧೈವ ಕುಟುಂಬಕಂ!" ಎಂಬ ಪರಿಣಾಮವುಂಟಾಗುತ್ತದೆ.

ಪರಮಾರ್ಥ ಜೀವನವನ್ನು ಬಯಸತಕ್ಕವರು ಇಂದ್ರಿಯ ಭೋಗಗಳನ್ನು ತ್ಯಜಿಸಬೇಕು. ಒಂದರಲ್ಲಿ ಲೋಲುಪ್ತರು ಮತ್ತೊಂದಕ್ಕೆ ವಿಮುಖರು.

೧೪೧. "ಸುಳಿದು ಸುತ್ತುವ ವ್ಯವಹರಣೆ ಉಳ್ಳನಕ್ಕರ ಅರಿಯೆನರಿಯೆ ನೆರೆ ಶಿವ ಪಥವ
ಗುಹೇಶ್ವರನ ನಿಜವನರಿದ ಬಳಿಕ ಅರಿಯೆನರಿಯೆ ನಾ ಲೋಕದ ಬಳಕೆಯ"

ಈಗಿನ ಶಿವಮೊಗ್ಗ ಡಿಸ್ಟ್ರಿಕ್ಟಿನ ಬಳ್ಳಿಗಾವೆಯಲ್ಲಿ ಅಲ್ಲಮ ಪ್ರಭು ಹುಟ್ಟಿದನು.

* "ವಾಸವದಿಶಾಂತರದೊಳರ್ಕನುದಯಿಸುವಂತೆ,
ಭಾಸುರದ ಪಾಲ್ಗಡಲೊಳಿಂದು ಜನಿಯಿಸುವಂತೆ,
ವಸುಧೆಯೊಳು ಸುರಕುಜದ ಸಸಿ ಪುಟ್ಟುವಂದದಿಂ"

* * * *

"ಬೆಳೆದನಾತಂ ಶಿವಪದಕ್ಕೆ ಪೊಸ ತೊಡವೆನಿಸಿ,
ಬೆಳೆದನಾತಂ ಭಕ್ತಿವಾರಿಧಿಗೆ ವಿಧುವೆನಿಸಿ"

ಹೀಗೆ ಬೆಳೆಯುತ್ತ ಮನೋಹರಾಕಾರನೂ ಮೃದಂಗವಿದ್ಯೆಯಲ್ಲಿ ನಿಸ್ಸೀಮನೂ ಆಗಿ ಗೊಗ್ಗೇಶ್ವರನಿಗೆ ಸೇವೆಯನ್ನು ಸಲ್ಲಿಸುತ್ತಿರಲು, ಅದೇ ಊರಿನಲ್ಲಿ ಕಾಮಲತೆ ಎಂಬವಳು ಶಶಿಕಿರಣದಂತೆ ಬೆಳೆಬೆಳೆದು ಒಂದು ದಿನ "ಮದನಶರವಿಕ್ಷುಧನುನಿಂದೆ ಪೊಜಿಮಡುವಂತೆ" ಹೊರಟು ಅದೇ

೧೪೧. ಪ್ರ. ದೇ. ವ. ಪುಟ ೧೪೯. * ಹರಿಹರನ ಪ್ರಭುದೇವರ ರಗಳೆ. ಹರಿಹರನನ್ನೇ ಅನುಸರಿಸಿ ಅಲ್ಲಮ ಪ್ರಭುವಿನ ಜೀವನ ಚರಿತ್ರೆಯನ್ನು ಇಲ್ಲಿ ಬರೆದಿದೆ. ಚಾಮರಸನು ಪ್ರಭುವನ್ನು ಮೊದಲಿನಿಂದಲೆ ಈಶ್ವರನ ಅವತಾರವೆಂದೂ ಪೂರ್ಣತೆ ಪಡೆದಿದ್ದವನೆಂದೂ ಚಿತ್ರಿಸಿದ್ದಾನೆ. ಹೆಚ್ಚಿನ ವಿವರಗಳಿಗೆ 'ಪ್ರಭುಲಿಂಗ ಲೀಲೆಯ ಸಂಗ್ರಹ'ದ ಪೀಠಿಕೆ ನೋಡಿ.

ಗೊಗ್ಗೇಶ್ವರಾಲಯಕ್ಕೆ ಸೇವೆಗೋಸ್ಕರ ಬಂದಳು. ಅಲ್ಲಿ ಅಲ್ಲಮ ಕಾಮಲತೆಯರು ಒಬ್ಬರನ್ನೊಬ್ಬರು ನೋಡಿ ಪರಸ್ಪರ ಮೋಹಗೊಂಡು ಮೂರ್ಛಿತರಾದರು. ಆನಂತರ ಅವರು ಸತಿಪತಿಗಳಾಗಿ ಕೆಲವು ಕಾಲ ಸಂಸಾರ ಮಾಡಿಕೊಂಡಿರಲು ಕಾಮಲತೆಗೆ ಜ್ವರ ಬಂದು ಆಕೆ ಪರ ಲೋಕವನ್ನೈದಿದಳು. ಅಲ್ಲಮನು ವಿರಹದುಃಖದಿಂದ ಬೆಂಡಾಗಿ ಇಹ ಲೋಕದಾಸೆಯನ್ನು ಬಿಟ್ಟು ಅನಿಮಿಷಯ್ಯನೆಂಬ ಶಿವಯೋಗಿಯ ಕೃಪಾಕಟಾಕ್ಷದಿಂದ ಇಷ್ಟಲಿಂಗವನ್ನು ಪಡೆದನು. ಇಷ್ಟಲಿಂಗ ಪ್ರಾಪ್ತ ವಾದುದೊಂದೇ ತಡ, ಅಲ್ಲಮನಿಗೆ ಸಾಧನ ಚತುಷ್ಟಯದ ಹಂಗಿಲ್ಲದೆ ಶಿವತತ್ತ್ವವೆಲ್ಲ ಕರತಳಾಮಲಕವಾಯಿತು.

* "ಶಶಿರವಿಗಳಂತೆ ಬೆಳಬೆಳಗುತಿರ್ದಂ ನೋಡ,
ಉಸುರಲಿಲ್ಲದ ಪರಬ್ರಹ್ಮವಾದಂ ನೋಡ"

ಅಲ್ಲಿಂದ ಊರು ಬಿಟ್ಟು ಅರಣ್ಯವನ್ನು ಪ್ರವೇಶಿಸಿದನು. ಎಷ್ಟು ವರ್ಷಗಳ ಕಾಲ ಗುಹೆಗಹ್ವರಗಳಲ್ಲಿ ನದೀತಟಾಕಗಳಲ್ಲಿ ಸರಸ್ತೀರಗಳಲ್ಲಿ ಲತಾಮಂಟಪ ಗಳಲ್ಲಿ ಬಿದಿರುಮೆಳೆಗಳಲ್ಲ ಮರಗಳ ಪೊಟರೆಗಳಲ್ಲಿ ಯೋಗಾರೂಢನಾಗಿ ದ್ದನೋ ತಿಳಿಯದು. ಪರಮಸಿದ್ಧಿಯನ್ನು ಪಡೆದು

* "ಶಿವನ ನೋಳ್ಪಂತೆಲ್ಲಮಂ ನೋಳ್ಪನಲ್ಲಮಂ
ಭವನೊಳಗಿರುತ್ತೆಲ್ಲರೊಳಗಿರ್ಪನಲ್ಲಮಂ

ಎಂಬಂತೆ ಮರಣವನ್ನು ಗೆದ್ದ ಮಹಂತನಾದನು. ಆತನು ಪರಬ್ರಹ್ಮದ ಪರಂಜ್ಯೋತಿಸ್ಸ್ವರೂಪವನ್ನು ಕಂಡು ಆಶ್ಚರ್ಯಪಟ್ಟವನಾಗಿ, ಕಡೆಗೆ ಆ ಜ್ಯೋತಿಸ್ಸ್ವರೂಪ ತಾನೇ ಎಂದು ಸೋಹಮಸ್ಮಿ ಭಾವದಿಂದ ಪರಮ ಸುಖಿಯಾದನು.

೧೪೩. "ನಿಮ್ಮ ತೇಜವ ನೋಡಲೆಂದು †ಹೆರಸಾರಿ ನೋಡುತ್ತಿರಲು ಶತ ಕೋಟಿ ಸೂರ್ಯರು ಮೂಡಿದಂತೆ ಇದ್ದುದಯ್ಯಾ. ಮಿಂಚಿನ ಬಳ್ಳಿಯ ಸಂಚವ ಕಂಡಡೆ ಎನ ಗಿದು ಸೋಜಿಗವಾಯಿತ್ತು. ಗುಹೇಶ್ವರಾ, ನೀನು ಜ್ಯೋತಿರ್ಲಿಂಗವಾದಡೆ, ಉಪಮಿಸಿ ನೋಡ ಬಲ್ಲವರಿಲ್ಲಯ್ಯಾ"

---

* ಪರಿಹರನ ಪ್ರಭುದೇವರ ರಗಳೆ

೧೪೩. ವ. ಶಾ. ಸಾ. ಭಾಗ ೧. (ಪೂ) ಪುಟ ೮.

೧೪೩. "ಸ್ವಸ್ಥಾನ ಸುಸ್ಥಿರದ ಸುಮನ ಮಂಟಪದೊಳಗೆ ನಿತ್ಯನಿರಂಜನ ಪ್ರಭೆಯ ಬೆಳಗು. ಶಿವಯೋಗಾನುಭಾವವು ಏಕಾರ್ಥವಾಗಿ, ಗುಹೇಶ್ವರಾ ನಿಮ್ಮ ಶರಣ ಅನುಪಮ ಸುಖಿಯಾಗಿದ್ದೆ ನಾ"

೧೪೪. "ಎಲೆ ಮನವೇ ನೀ ನಿನ್ನ ನಿಜವ ತಿಳಿವಡೆ ಆ ನಿನ್ನ ನಿಜನ ಹೇಳುವೆ ಕೇಳು. ಅದು ಕೇವಲ ಜ್ಯೋತಿ. ಅದು ವರ್ಣಾತೀತ"

ಈ ವಚನಗಳು ಈಶೋಪನಿಷತ್ತಿನ

"ಪೂಷನ್ನೇಕರ್ಷೇ ಯಮ ಸೂರ್ಯ ಪ್ರಾಜಾಪತ್ಯವ್ಯೂಹ ರಶ್ಮಿನ್ ಸಮೂಹ।
ತೇಜೋ ಯತ್ತೇ ರೂಪಂ ಕಲ್ಯಾಣತಮಂ ತತ್ತೇ ಪಶ್ಯಾಮಿ ಯೋಽಸಾವಸೌ
ಪುರುಷಃ ಸೋಽಹಮಸ್ಮಿ"।

ಎಂಬುದನ್ನು ಜ್ಞಾಪಕಕ್ಕೆ ತರುತ್ತವೆ. ಪರಂಜ್ಯೋತಿಸ್ವರೂಪವಾದ ಲಿಂಗ ಇಷ್ಟಲಿಂಗವಾಗಿ ತನ್ನ ಕರಸ್ಥಳಕ್ಕೆ ಬಂದುದನ್ನು ನೋಡಿ ಅಲ್ಲಮನು ಆಶ್ಚರ್ಯಗೊಂಡನು.

೧೪೫. "ಕಾಣಬಾರದ ಲಿಂಗವೆನ್ನ ಕರಸ್ಥಳಕ್ಕೆ ಬಂದರೆ ಹೇಳಲಮ್ಮೆ ಕೇಳಲಮ್ಮೆ. ಎನಗಿದು ಸೋಜಿಗ. ಗುಹೇಶ್ವರನೆಂಬ ಲಿಂಗ ನಿರಾಕಾರ ಬಯಲು ಸಾಕಾರವಾಗಿ ಎನ್ನಕರಸ್ಥಲಕ್ಕೆ ಬಂದರೆ ಹೇಳಲಮ್ಮೆ ಕೇಳಲಮ್ಮೆ"

ಆದರೆ ಅಲ್ಲಮ ಪ್ರಭು ಕೇವಲ ಅದ್ವೈತಿ. ಆತನ ವಚನಗಳಲ್ಲಿ ಈ ಭಾವ ಸ್ಪಷ್ಟವಾಗಿದೆ. ತಾನು ಸಂಧಿಸಿದ ಸಾಧಕರಿಗೆಲ್ಲ ಈ ಅದ್ವೈತವನ್ನೇ ತುತ್ತತುದಿಯ ಮೆಟ್ಟಲಾಗಿ ಆತ ಬೋಧೆಮಾಡಿದ್ದಾನೆ.

*"ಅದ್ವೈತವೆಂಬ ಶಿಶುವೆನ್ನ ಕರಸ್ಥಲವ ಸೋಂಕಲೊಡನೆ ಎನ್ನ ತನ್ನಂತೆ ಮಾಡಿತ್ತಾಗಿ"

೧೪೬. "ಪ್ರಾಣಲಿಂಗಕ್ಕೆ ಕಾಯವೇ ಸೆಜ್ಜೆ, ಆಕಾಶಗಂಗೆಯಲ್ಲಿ ಮಜ್ಜನ, ಹೂವಿಲ್ಲದ ಪರಿಮಳದ ಪೂಜೆ, ಹೃದಯ ಕಮಲದಲ್ಲಿ ಶಿವ ಶಿವ ಎಂಬ ಶಬ್ದ, ಇದು ಅದ್ವೈತ ಕಾಣಾ ಗುಹೇಶ್ವರಾ"

---

೧೪೩. ಪ್ರ. ದೇ. ವ. ಪುಟ ೧೪೩. ೧೪೪. ವ. ಶಾ. ಸಾ. ಭಾಗ ೧. (ಉ) ಪುಟ ೧೭೯.
* ಶೂ. ಸಂ. ಪುಟ ೧೫೧.
೧೪೫. ಪ್ರ. ದೇ. ವ. ಪುಟ ೪೨. ೧೪೬. ಪ್ರ. ದೇ. ವ. ಪುಟ. ೯೯.

ನಿರ್ವಿಕಲ್ಪ ಸಮಾಧಿ ಸಾಧಕನಾದ ಅಲ್ಲಮ ಪ್ರಭು ಗುಹೇಶ್ವರ ಲಿಂಗದೊಡನೆ ತನ್ಮಯತೆಯನ್ನು ಪಡೆದವನಾದ್ದರಿಂದ,

೧೪೭. "ನಾನೆಂಬಹಂಕಾರದಲ್ಲಿ ನಾನುಂಡೆನಾದರೆ ಎನಗದೇ ಭಂಗ. ಸ್ತುತಿ ನಿಂದೆಗೆ ನೊಂದೆನಾದಡೆ ಅಂಗೈಯಲ್ಲಿದ್ದ ಗುಹೇಶ್ವರ ಲಿಂಗಕ್ಕೆ ದೂರ"

ಎಂದು ಹೇಳುವ ಸಾಮರ್ಥ್ಯವನ್ನು ಪಡೆದಿದ್ದನು. ಪ್ರಭು ಪಡೆದಿದ್ದ ಜೀವನ್ಮುಕ್ತ ಸ್ಥಿತಿಯನ್ನು ಆತನ ಮಾತುಗಳಿಂದಲೇ ತಿಳಿಯುವುದು ಲೇಸು.

೧೪೮. "ಪುಣ್ಯಪಾಪ ಇಲ್ಲಾಗಿ ಯಮನ ಹಂಗಿಲ್ಲ. ಬಂದುದನುಂಬೆನಾಗಿ ಮಾನವರ ಹಂಗಿಲ್ಲ. ಭವಗೆಟ್ಟೆನಾಗಿ ದೈವದ ಹಂಗಿಲ್ಲ. ಸತ್ಯಜ್ಞಾನಾನಂದವೇ ತಾನಾಗಿ ಇನ್ನಾರ ಹಂಗೂ ಇಲ್ಲ. ಇನ್ನಾರ ಹಂಗೂ ಇಲ್ಲದಾತ * ಗುಹೇಶ್ವರನಲ್ಲಯ್ಯ ನೊಬ್ಬನೇ"

ಇನ್ನು ಬಸವಣ್ಣನವರಲ್ಲಿ ಕಂಡು ಬರುವ ಭಕ್ತಿಯ ಭರ ಪ್ರಭುವಿನಲ್ಲಿ ಹೇಗೆ ಕಂಡು ಬಂದೀತು? ಆತನದು ಜ್ಞಾನಮಾರ್ಗ; ಆತನು ಎಲ್ಲ ಉಪಾಧಿಗಳನ್ನೂ ಮೀರಿದವನು.

೧೪೯. "ಮಣಿಯನೆಣಿಸಿ ದಿನವ ಕಳೆಯಲು ಬೇಡ. ಕಣಿಯ ಪೂಜಿಸಿ ದಿನವ ಕಳೆಯಲು ಬೇಡ. ಕ್ಷಣವಾದರೂ ನಿಜದ ನೆನಹೇ ಸಾಕು. ಕ್ಷಣದೊಳಗಣ ಅರ್ಧವಾದರೂ ನಿಜದ ನೆನಹೇ ಸಾಕು. ಬೆಂಕಿಯೊಳಗುಳ್ಳ ಬಿಸಿ ನೀರೊಳಗುಂಟೇ ಗುಹೇಶ್ವರಾ"

ಎಂದು ಆತನು ಬೋಧಿಸಿದನು. ದ್ವೈತಭಾವನೆಯಿಂದ ಯಾರನ್ನು ದೇವರು ಎಂದು ಭಕ್ತರು ಪೂಜಿಸುವರೋ, ಯಾರ ಅನುಗ್ರಹವುಂಟಾಗಬೇಕೆಂದು ಅನವರತ ಮೊರೆಯಿಡುವರೋ ಆ ದೇವರನ್ನು ಕುರಿತು ಅಲ್ಲಮ ಪ್ರಭು ಹೇಳಿರುವುದು ಬಹಳ ಸ್ವಾರಸ್ಯವಾಗಿದೆ.

---

* 'ಗುಹೇಶ್ವರನಲ್ಲಯ್ಯ' ಎಂಬ ಅಂಕಿತ ಗಾಣದ ಕನ್ನಪ್ಪಯ್ಯನದೆಂದೂ ಆದುದರಿಂದ ಈ ವಚನ ಅಲ್ಲಮ ಪ್ರಭುವಿನದಲ್ಲವೆಂದೂ ರಾವ್ ಸಾಹೇಬ್ ಪಿ. ಜಿ. ಹಳಕಟ್ಟಿಯವರು ಅಭಿಪ್ರಾಯ ಪಡುತ್ತಾರೆ. ಪ್ರಭುದೇವರ ವಚನಗಳಲ್ಲಿ 'ಗುಹೇಶ್ವರನಲ್ಲಯ್ಯ' ಎಂಬ ಅಂಕಿತದ ವಚನಗಳು ಕೆಲವಿವೆ. ಇನ್ನು ಕೆಲವು ಕಾರಣಗಳಿಂದಲೂ ಈ ವಚನ ಅಲ್ಲಮ ಪ್ರಭುವಿನದೆಂದು ನಾವು ಅಭಿಪ್ರಾಯ ಪಡುತ್ತೇವೆ.

೧೪೭. ವ. ಶಾ. ಸಾ. ಭಾಗ ೧. (ಪೂ) ಪುಟ ೧೫೯. ೧೪೮. ವ. ಶಾ. ಸಾ. ಭಾಗ ೧. (ಉ) ಪುಟ ೫೬. ೧೪೯. ವ. ಶಾ. ಸಾ. ಭಾಗ ೧. (ಪೂ) ಪುಟ ೨೩೪.

೧೫೦. "ನಾ ದೇವನಲ್ಲದೆ ನೀ ದೇವನಾದರೆ ಎನ್ನನೇಕೆ ಸಲಹೆ? ಆರೈದು ಒಂದು ಕುಡಿತೆ ನೀರನೆರೆವೆ. ಹಸಿದಾಗ ಒಂದು ತುತ್ತು ಓಗರವನಿಕ್ಕುವೆ. ನಾ ದೇವ ಕಾಣಾ ಗುಹೇಶ್ವರಾ"

ಈ ಲೋಕದಲ್ಲಿ, ಈ ಜನ್ಮದಲ್ಲಿ, ಮುಕ್ತಿಯನ್ನು ಗಳಿಸಬೇಕಲ್ಲದೆ ಸತ್ತು ಪರಲೋಕದಲ್ಲಿ ಮುಕ್ತಿಯನ್ನು ಪಡೆಯುತ್ತೇನೆ ಎಂಬುದು ಯುಕ್ತಿಯಲ್ಲ; ಪರಲೋಕದಲ್ಲಿ ಏನೂ ದೊರೆಯುವುದಿಲ್ಲ ಎಂದು ಪ್ರಭು ಸ್ಪಷ್ಟವಾಗಿ ಹೇಳಿದ್ದಾನೆ.

೧೫೧. "ಸತ್ತಬಳಿಕ ಮುಕ್ತಿಯ ಹಡಪಹೆನೆಂದು ಪೂಜಿಸಿಹೋಪರೆ ಆ ದೇವರೇನ ಕೊಡುವರೋ? ಸಾಯದೆ ನೋಯದೆ ಸ್ವತಂತ್ರವಾಗಿ ಸಂದು ಭೇದವಿಲ್ಲದಿರ್ಪ ಗುಹೇಶ್ವರಾ ನಿಮ್ಮ ಶರಣ"

೧೫೩. "ತತ್ವವೆಂಬುದ ನೀನೆತ್ತ ಬಲ್ಲೆಯೋ? ಸತ್ತುಮುಂದೆ ನೀನೇನ ಕಾಂಬೆಯೋ! .......ಗುಹೇಶ್ವರನ ಕೂಡಿದ ಕೂಟ ಇಂದು ಸುಖ ಮುಂದೆ ಲೇಸು"

ಎಂಬ ಈ ವಚನಗಳು

"ಇಹ ಚೇದ ವೇದೀದಥ ಸತ್ಯಮಸ್ತಿ ನ ಚೇದಿಹಾವೇದೀನ್ಮಹತೀ ವಿನಷ್ಟಿಃ"

ಎಂಬ ಕೇನೋಪನಿಷತ್ತಿನ ವಾಕ್ಯವನ್ನೂ,

"ಇಹ ಚೇದಶಕದ್ಬೋದ್ಧುಂ ಪ್ರಾಕ್ ಶರೀರಸ್ಯ ವಿಸ್ರಸಃ ||
ತತಃ ಸರ್ಗೇಷು ಲೋಕೇಷು ಶರೀರತ್ವಾಯ ಕಲ್ಪತೇ"

ಎಂಬ ಕಠೋಪನಿಷತ್ತಿನ ವಾಕ್ಯವನ್ನೂ ನೆನಪಿಗೆ ತರುತ್ತವೆ.

ಅಲ್ಲಮ ಪ್ರಭು ಎಲ್ಲಿಯೋ ಒಂದು ಗುಹೆಯಲ್ಲಿ ಕುಳಿತು ಆತ್ಮ ಸಾರ್ಥಕ್ಯವನ್ನು ಗಳಿಸಿಕೊಂಡಿದ್ದಿದ್ದರೆ ವೀರಶೈವಧರ್ಮಕ್ಕೆ ಬಹಳ ನಷ್ಟ ವುಂಟಾಗುತ್ತಿತ್ತು. ಆತನು ನಿಜವಾಗಿಯೂ ವೀರಶೈವಧರ್ಮ ಸಂಸ್ಥಾಪ ನಾರ್ಥವಾಗಿ ಅವತಾರ ಪುರುಷನಾಗಿ ಬಂದಂತೆ ನಮಗೆ ತೋರುತ್ತದೆ. ಧರ್ಮ ಪ್ರಚಾರಕ್ಕಾಗಿ ಆತನು ಲೋಕಸಂಚಾರ ಮಾಡಿದನು. ಬಸವಣ್ಣ ನವರ ಖ್ಯಾತಿ ಆಗಲೇ ಕರ್ನಾಟಕದಲ್ಲೆಲ್ಲ ಹಬ್ಬಿದ್ದು,

---

೧೫೦. ಪ್ರ. ದೇ. ವ. ಪುಟ ೨೬೫. ೧೫೧. ಪ್ರ. ದೇ. ವ. ಪುಟ ೬೬.
೧೫೩. ಪ್ರ. ದೇ. ವ. ಪುಟ ೨೪೪

*"ಬಸವನ ಮಾತೆ ಮಾತು ಬಸವಣ್ಣನ ಭಕ್ತಿಯು ಓಜೆಯೋಜೆ ಕೇಳ್
ಬಸವನ ರೀತಿ ರೀತಿ ಬಸವಣ್ಣನ ಕಿಂಕರವೃತ್ತಿ ವೃತ್ತಿ ಮೇಣ್।
ಬಸವನ ಬಟ್ಟೆ ಬಟ್ಟೆ ಬಸವಣ್ಣನ ಬಿಂಕದ ಭಾಷೆ ಭಾಷೆ ಹೋ
ಬಸವನ ನಿಷ್ಠೆ ನಿಷ್ಠೆ ಬಸವಣ್ಣನ ನೇಮವೆ ನೇಮವುರ್ವಿಯೊಳ್॥

ಎಂದು ಭಕ್ತಜನರೆಲ್ಲ ಹೊಗಳುವಂತೆ ಆಗಿದ್ದು, ಅದು ಪ್ರಭುವಿನ ಗಮನಕ್ಕೂ ಬಂದಿದ್ದಿರಬೇಕು. ಆದುದರಿಂದ ಬಸವಣ್ಣನವರ ಭಕ್ತಿ ರೀತಿ ನೀತಿಗಳನ್ನು ಕಣ್ಣಾರೆ ನೋಡಬೇಕೆಂದು ಅಲ್ಲಮಪ್ರಭು ಕಲ್ಯಾಣ ಪಟ್ಟಣಕ್ಕೆ ಹೋದನು. ಬಸವಣ್ಣನವರ ಅರಮನೆಯನ್ನು ಹೊಕ್ಕಾಗ ಆತನಿಗೆ ಲೌಕಿಕ ರೀತಿಯಲ್ಲಿ ಸಂತೋಷ ವಿಸ್ಮಯಗಳುಂಟಾದುವೆಂದು ಹೇಳಬಹುದು. ಅಲ್ಲಿ ಮರುಳಶಂಕರದೇವರಂಥ ಗುಪ್ತ ಶಿವಾನುಭವಿಗಳು ಬಸವಣ್ಣನವರ ದೃಷ್ಟಿಗೂ ಗೋಚರವಾಗದೆ ಪ್ರಸಾದ ಕುಂಡದ ಬಳಿ ಹಗಲಿರುಳು ಸೇವಿಸುತ್ತ ಹಲವು ವರ್ಷಗಳಿಂದ ಕುಳಿತಿದ್ದಾರೆ. ಮತ್ತೊಂದು ಕಡೆ ಷಟ್ಸ್ಥಲಬ್ರಹ್ಮಿಗಳಾಗ ಬೇಕೆಂದು ಬಯಸುತ್ತಿದ್ದವರಿಗೆ ಷಣ್ಮುಖಸ್ವಾಮಿಯ ಅಪರಾವತಾರ ಚೆನ್ನ ಬಸವಣ್ಣ ಷಟ್ಸ್ಥಲೋಪದೇಶವನ್ನು ಮಾಡುತ್ತ ಕುಳಿತಿದ್ದಾನೆ. ವೀರ ಭದ್ರಾವತಾರನಾದ ಮಡಿವಳ ಮಾಚಿದೇವನು ಪರಮತಧ್ವಂಸನ ಕಾರ್ಯದಲ್ಲಿ ವೀರವ್ರತಿಯಾಗಿ ಕುಳಿತಿದ್ದಾನೆ. ಇಷ್ಟಲಿಂಗ ಪೂಜಾಸಕ್ತರಾಗಿ ಮಾತಿಗೆ ಇಂಬಿಲ್ಲದ ಉಪಚಾರಕ್ಕೆ ಎಡೆಯಿಲ್ಲದ ಬಸವಣ್ಣನವರು "ತನು ತನುವೊಂದಾಗಿ ಮನ ಮನವೊಂದಾಗಿ" ಲಿಂಗದಲ್ಲಿ ಸೇರಿಹೋಗಿರುವೆವೆಂದೂ ಹೊರಗಿರುವ ಜಂಗಮನನ್ನು ಒಳಕ್ಕೆ ಕರೆತರಬೇಕೆಂದೂ ಅಪ್ಪಣೆ ಮಾಡುತ್ತಿದ್ದಾರೆ! ಸಾವಿರಾರು ಭಕ್ತರು ಜಂಗಮರು ಬಸವಣ್ಣನವರ ಸ್ತೋತ್ರಪಾಠವನ್ನು ಹೇಳುತ್ತ ದಾಸೋಹದ ನಿರೀಕ್ಷಣೆಯಲ್ಲಿ ಗುಂಪುಗುಂಪಾಗಿ ಕುಳಿತಿದ್ದಾರೆ. ಅಲ್ಲಿಯ ಸ್ಥಿತಿಗತಿಗಳೆಲ್ಲ ಕ್ಷಣಮಾತ್ರದಲ್ಲಿ ಪ್ರಭುವಿನ ಮನಸ್ಸಿಗೆ ಹೊಳೆಯಿತು.

ಅಲ್ಲಮ ಪ್ರಭುವನ್ನು ಬಸವಣ್ಣ ಮೊದಲಾದವರು ಹಿಂದೆ ನೋಡಿಲ್ಲದಿದ್ದರೂ ಆತನ ಹೆಸರನ್ನು ಅವರೆಲ್ಲ ತಿಳಿದಿದ್ದರೆಂದು ತೋರುತ್ತದೆ. ಆತನೊಬ್ಬ ಮಹಾತ್ಮನೆಂದೂ ಜ್ಞಾನಮೂರ್ತಿಯೆಂದೂ ತಿಳಿದು, ಆತನ ಸಂದರ್ಶನ

* ಹರಿಹರನ ಬಸವರಾಜದೇವರ ರಗಳೆ.

ವನ್ನು ಪಡೆಯಬೇಕೆಂದು ಅವರು ಕಾತುರರಾಗಿದ್ದರೆಂದೂ ಹೇಳಬಹುದು. ಆದುದರಿಂದ ಅಲ್ಲಮ ಪ್ರಭು ಕಲ್ಯಾಣಕ್ಕೆ ಬಂದಾಗ, ತಮ್ಮ ಜನ್ಮ ಸಫಲವಾಯಿತೆಂದು ಸಂತೋಷಪಟ್ಟುಕೊಂಡಿರಬೇಕು. ತಾವು ಮಾಡುತ್ತಿರುವ ವಚನ ಧರ್ಮೋದ್ಧಾರ ಕಾರ್ಯವನ್ನು ಆತನು ಮೆಚ್ಚಿಕೊಳ್ಳುವನೆಂಬ ಭರವಸೆಯನ್ನೂ ಪಡೆದಿದ್ದಿರಬೇಕು. ಆದರೆ ಪ್ರಭುವನ್ನು ಮೆಚ್ಚಿಸುವುದು ಸುಲಭವಲ್ಲೆಂಬುದು ಅವರಿಗೆ ಶೀಘ್ರದಲ್ಲಿಯೇ ಗೊತ್ತಾಯಿತು. ಬಸವಣ್ಣನವರ ಹತ್ತಿರ ಸುಳಿದಾಡುತ್ತಿದ್ದವರಲ್ಲಿ ಹಲವರು ತಂತಮ್ಮ ಪ್ರತಾಪಗಳನ್ನು ತೋರಿಸುವುದಕ್ಕೆ ಬಂದವರು. ಭಕ್ತರಾದ ಬಸವಣ್ಣನವರು ಅವುಗಳನ್ನೆಲ್ಲ ಸಹಿಸಿಕೊಂಡು 'ಲಿಂಗವುಳ್ಳವರನ್ನೆಲ್ಲ ಸಂಗಮನಾಥನೆಂಬೆ' ಎಂಬ ಮನೋಭಾವವನ್ನು ವ್ಯಕ್ತಗೊಳಿಸುತ್ತಿದ್ದರು. ಬಸವಣ್ಣನವರ ಭಕ್ತಿಯನ್ನೂ ಅವರ ಸಾಧುಸ್ವಭಾವವನ್ನೂ ದುರುಪಯೋಗಪಡಿಸಿಕೊಂಡವರು ಇಲ್ಲದೆ ಹೋಗಲಿಲ್ಲ. ಆದುದರಿಂದ ಲಿಂಗವುಳ್ಳವರೆಲ್ಲ ಸಂಗಮನಾಥರಲ್ಲ, ಲಿಂಗಗುಣಗಳಿದ್ದವರು ಮಾತ್ರ ಸಂಗಮನಾಥರು—ಎಂಬುದನ್ನು ಪ್ರಭು ಹೇಳಬೇಕಾಯಿತು. ಬಸವಣ್ಣನವರ ಪರಮಾರ್ಥದ ಮನೆವಾರ್ತೆಗೆ ಚೆನ್ನಬಸವಣ್ಣ ಯಜಮಾನನಾಗಿದ್ದನು. ಆದುದರಿಂದ ಚೆನ್ನಬಸವಣ್ಣನನ್ನು ಒಂದೆಡೆಯಲ್ಲಿ ಕುಳ್ಳಿರಿಸಿಕೊಂಡು,—ದೊಡ್ಡ ಕೆಲಸಮಾಡುತಿದ್ದೀರಿ, ಈ ಕಲಿಕಾಲದಲ್ಲಿ ಹೀಗೆ ಭಕ್ತಿಯನ್ನು ಮಾಡುವವರು ಯಾರಿದ್ದಾರೆ,—ಎಂದು ಮೆಚ್ಚಿಕೆ ತೋರುತ್ತ

೧೫೩. "ಸದ್ಭಕ್ತಿ ಸದಾಚಾರವಿಲ್ಲದ ಗುರುತ್ವ ಉಂಟೇನೋ ಮರುಳೇ? ಸದ್ಭಕ್ತಿ ಸದಾಚಾರವಿಲ್ಲದ ನಿಜಲಿಂಗ ಉಂಟೇನೋ ಮರುಳೆ? ನಿಜ ಜಂಗಮ ಉಂಟೇ? ಸದಾಚಾರ ಸದ್ಭಕ್ತಿ ಇಲ್ಲದ ಶರಣತ್ವ ಉಂಟೇ? ಗುಹೇಶ್ವರ ಲಿಂಗದ ಸದಾಚಾರ ಸದ್ಭಕ್ತಿಯಿಂದಲ್ಲದೆ ಮುಕ್ತಿಯಿಲ್ಲ ನೋಡಾ ಚೆನ್ನಬಸವಣ್ಣ"

೧೫೪. "ಸತ್ಯವ ನುಡಿಯದ, ಸದಾಚಾರದಲ್ಲಿ ನಡೆಯದ, ಸದ್ಭಕ್ತಿಯ ಹಿಡಿಯದ, ನಿಜಮುಕ್ತಿ ಪಡೆಯದ, ಸತ್ಕ್ರಿಯೆ ವಶವಾಗದ, ಸಮ್ಯಕ್ ಜ್ಞಾನದ ಮುಟ್ಟದ ಸುಡು, ಸುಡು, ಈ ವೇಷದ ಭಾಷೆಯ ನೋಡಿ, ಗುಹೇಶ್ವರ ಲಿಂಗದಲ್ಲಿ ನಗುತ್ತಿದಾನೆ ಕಾಣಾ ಚೆನ್ನಬಸವಣ್ಣ"

೧೫೩. ವ. ಶಾ. ಸಾ. ಭಾಗ ೧. (ಪೂ) ಪುಟ ೧೯೯. ೧೫೪. ವ. ಶಾ. ಸಾ. ಭಾಗ ೧. (ಪೂ) ಪುಟ ೨೦೦.

ಎಂದು ಮಂದಹಾಸದಿಂದ ಹೇಳಿದನು.

ಇಷ್ಟಲಿಂಗದ ದೇವನು ಎಲ್ಲವನ್ನೂ ನೋಡುತ್ತಿದ್ದಾನೆ, ನೋಡಿ ನಗುತ್ತಿದ್ದಾನೆ. ಏನೆನ್ನುವೆ ಚೆನ್ನಬಸವಣ್ಣ? ಎಂದು ಅಲ್ಲಮನು ಕೇಳಿದಾಗ ಸೋದರ ಮಾವನ ಭಕ್ತಿಸಾಧನೆ ಕಣ್ಣಿಗೆ ಕಟ್ಟಿದಂತಾಗಿ,

೧೫೫. ಅಂಗದ ಮೇಲೆ ಲಿಂಗವುಳ್ಳುದೆಲ್ಲವು ಸಂಗಮನಾಥನೆಂಬ ಭಾವನೆ ಬಸವಣ್ಣಂಗಾಯಿತಲ್ಲದೆ ಎನಗೆ ಆ ಭಾವನಿಲ್ಲ ನೋಡಾ! ಲಿಂಗೈಕ್ಯ ಶರಣರ ಕಂಡರೆ ನಂಬಿ ನಚ್ಚಿ ಅವರ ಪಾದಕ್ಕೆರಗುವುದೆನ್ನ ಮನವು"

ಎಂದು ತನ್ನ ಅಂತರಂಗವನ್ನು ಬಿಚ್ಚಿ ಚೆನ್ನಬಸವಣ್ಣ ಹೇಳಿದನು. ಪ್ರಭುವಿಗೆ ಸಂತೋಷವಾಯಿತು. ಆದರೆ ಪ್ರಭು ಕಲ್ಯಾಣಕ್ಕೆ ಬಂದುದು ಹಲವರಿಗೆ ರುಚಿಸಿದಂತೆ ತೋರುವುದಿಲ್ಲ. ಅವರಲ್ಲಿ ಸ್ವಾರ್ಥ ಸಾಧಕರೂ ಕಪಟವರ್ತನೆಯವರೂ, ಕೇವಲ ಉದರಪೋಷಕರೂ ಪ್ರತಿಷ್ಠಾಕಾಂಕ್ಷಿಗಳೂ ಹೆಚ್ಚಾಗಿದ್ದಿರಬೇಕು; "ನಾನು ಘನ, ತಾನು ಘನ" ಎಂಬ ಗುಂಪಿಗೆ ಸೇರಿದ ಆಡಂಬರದ ಅಯ್ಯಗಳು ಹೆಚ್ಚಾಗಿದ್ದಿರಬೇಕು. ಬಸವಣ್ಣ ಚೆನ್ನಬಸವಣ್ಣಾದಿಗಳು ಪ್ರಭುವಿನಲ್ಲಿ ಗೌರವವನ್ನು ತೋರಿ ವಿನೀತರಾಗಿ ನಡೆದುಕೊಳ್ಳುವುದು ಏತಕ್ಕೆಂಬುದು ಅವರಿಗೆ ತಿಳಿದಂತೆ ಕಾಣಲಿಲ್ಲ. ಬಂದ ಬಡಜೋಗಿ ಇಂದ್ರಜಾಲ ವಿದ್ಯೆಯಿಂದ ಏನೂ ಅರಿಯದ್ದ ಬಸವಣ್ಣನವರನ್ನು ಮೋಸಗೊಳಿಸಿದನೆಂದು ಅವರು ಗೊಂದಲಮಾಡಿದರು. ಈ ಜಂಗಮ ಜಂಗುಳಿಯನ್ನು ನೋಡಿ, ಪ್ರಭು

೧೫೬. "ಅಂಗಜೀವಿಗಳೆಲ್ಲ ಅಶನಕ್ಕೆ ನೆರೆದು ಲಿಂಗವಾರ್ತೆಯ ನುಡಿವರಯ್ಯ! ಕಾಯಜೀವಿಗಳೆಲ್ಲ ಕಳವಳಿಸಿ ನುಡಿವರಯ್ಯ! ಮನಬಂದ ಪರಿಯಲ್ಲಿ ನುಡಿವವರಿಗೆ ಗುಹೇಶ್ವರನೆಂಬ ಲಿಂಗ ನಿಮಗೆಲ್ಲಿಯದೋ?"

೧೫೭. "ಇಷ್ಟಲಿಂಗಕೆ ತೋರಿ ಮೃಷ್ಟಾನ್ನವ ಹೊಡೆದವರಿಗೆ ನಿಮಗೆಲ್ಲಿಯದೋ ಇಷ್ಟಾರ್ಥಸಿದ್ಧಿ? ಅದೆಲ್ಲಿಹುದೋ ಲಿಂಗ? ಅದೆಲ್ಲಿಹುದೋ ಜಂಗಮ? ಅದೆಲ್ಲಿಹುದೋ ಪ್ರಸಾದ ಪಾದೋದಕ? ಅಲ್ಲದ ಆಟವ ನಾಡಿ ಎಲ್ಲರೂ ಮುಂಡು ಗೆಟ್ಟಿರು ಗುಹೇಶ್ವರಾ ನಿಮ್ಮಾಣೆ"

---

೧೫೫. ಶೂ. ಸಂ. ಪುಟ ೨೧೨. ೧೫೬. ಪ್ರ. ದೇ. ವ. ಪುಟ ೧೭೪.
೧೫೭. ಪ್ರ. ದೇ. ವ. ಪುಟ ೨೨೮.

ಎಂದು ಕಶಾಪ್ರಹಾರದಂಥ ವಚನಗಳನ್ನಾಡಿದನು.

ಅದುವರೆಗೂ ಬಸವಣ್ಣನವರನ್ನು ಹೇಗೋ ಮೆಚ್ಚಿಸಿ ಬೇಕಾದುದನ್ನು ಸೂರೆಗೊಳ್ಳುತ್ತಿದ್ದವರಿಗೆ ಬರೆಗಳನ್ನು ಎಳೆದಂತಾಯಿತು. ತಮ್ಮನ್ನು ಆಕ್ಷೇಪಿಸುವುದಕ್ಕೆ ಇವನಾರು? ಎಂದು ದುರದುರನೆ ಅಲ್ಲಮನನ್ನು ನೋಡಿರ ಬಹುದು. ಶ್ರೀ ಗುರುವಿನಿಂದ ದೀಕ್ಷಾಯುತರಾಗಿ ಇಷ್ಟಲಿಂಗ ಧಾರಕರಾಗಿ ಷಟ್ಸ್ಥಲದ ಜಿಜ್ಞಾಸೆಮಾಡುತ್ತಿದ್ದ ತಮ್ಮನ್ನು ಒಬ್ಬ ಬಡ ಜೋಗಿ ಆಕ್ಷೇಪಿಸುವುದು ಅವರಿಗೆ ಸಹಿಸಲಿಲ್ಲ. ದೀಕ್ಷೆಯಿಂದ ಕರ್ಮತ್ರಯಗಳೂ ಮಲತ್ರಯಗಳೂ ನಷ್ಟವಾಗಿ ನರಜನ್ಮಹೋಗಿ ಹರಜನ್ಮವಾಗುವುದೆಂದು ಆಗಮಗಳು ಸಾರುತ್ತಿಲ್ಲವೇ? ಎಲ್ಲವನ್ನೂ ಲಿಂಗಕ್ಕರ್ಪಿಸಿ ಪ್ರಸಾದವನ್ನಾಗಿ ಮಾರ್ಪಡಿಸಿ ಸ್ವೀಕಾರ ಮಾಡಬೇಕೆಂದು ಗುರು ಹೇಳಿದಂತೆ ತಾವು ಆಚರಿಸು ತ್ತಿರುವುದು ತಪ್ಪೆ? ಎಂದು ಕೇಳಿದರು. ಆದರೆ ಪ್ರಭು "ಮೂಲೇ ಕುಠಾರಃ" ಎಂಬಂತೆ

೧೫೮. "ಹೊಟ್ಟೆಯ ಮೇಲೆ ಕಟ್ಟೋಗರದ ಮೊಟ್ಟೆಯ ಕಟ್ಟದೊಡೇನೋ? ಹಸಿವು ಹೋಹುದೇ? ಅಂಗದ ಮೇಲೆ ಲಿಂಗ ಸ್ವಾಯತವಾದರೇನೋ? ಇಟ್ಟ ಕಲ್ಲು ಮೆಳೆಯ ಮೇಲೆ ಸಿಕ್ಕಿದಡೆ, ಆ ಕಲ್ಲು ಲಿಂಗವೆ? ಆ ಮೆಳೆ ಭಕ್ತನೆ? ಇಟ್ಟಾತ ಗುರುವೆ? ಇಂತಪ್ಪವರ ಕಂಡಡೆ ನಾನು ನಾಚುವೆನಯ್ಯ ಗುಹೇಶ್ವರಾ"

ಎಂದು ಹೇಳಿದನು. ಅಲ್ಲಿಗೆ ಅಷ್ಟಾವರಣಗಳ ಮಾಹಾತ್ಮ್ಯ ವ್ಯರ್ಥ ವಾದಂತಾಯಿತು. ಕೇವಲ ಬಾಹ್ಯಕ್ರಿಯೆಗಳಿಂದ ಫಲವಿಲ್ಲ, ಕರ್ಮಪಾಶ ಡಿಗಳಿಗೆ ಮುಕ್ತಿಯಿಲ್ಲ. ಸಾಧನೆಯಿಂದ ಭಕ್ತಿ ಜ್ಞಾನ ವೈರಾಗ್ಯಗಳು ಒಳಗೆ ವಿಕಾಸವಾಗಬೇಕು, ಅವು ಬಾಹ್ಯದಲ್ಲಿ ಕಾರ್ಯ ರೂಪದಲ್ಲಿ ತೋರಬೇಕು. ಆದುದರಿಂದ ಕೋಪ ಮಾಡಬೇಡಿ,

೧೫೯. "ಮುನಿಯದಿರಿ, ಮುನಿಯದಿರಿ, ನಿಮಗೊಂದು ಯುಕ್ತಿಯ ಹೇಳುವೆನು. ಅದೆಂತೆಂದೊಡೆ ನೀವೆನ್ನವಂಶೀಭೂತರಾದ ಕಾರಣ, ನಿಮ್ಮ ಹೆಚ್ಚು ಕುಂದು ಎನ್ನದಾಗಿ ನಿಮ್ಮ ಅಸ್ತಿನಾಸ್ತಿ ಎನ್ನದಾಗಿ, ನಿಮ್ಮ ಹಾನಿವೃದ್ಧಿ ಎನ್ನದಾಗಿ. ಹಾನಿ ಹಿಡಿವರು ಬೇಲಿಯ ಹೊಗದೆ ಹೋಹರೇ ಅಯ್ಯ? ವ್ಯಾಧನು ಸೂಸಲ ಚೆಲ್ಲಿ ಜಂತ್ರವ ಅಡಿಗಲ್ಲನೊಡ್ಡಿ ಹೋದ ಬಳಿಕ, ಸೂಸಲ ಕಂಪಿಂಗೆ ಹೆಗ್ಗಣ ಬಂದು ಹಣ್ಣೆ, ಬಿದ್ದಂತೆ ಬಿದ್ದಿರಲ್ಲಾ ಮಾಯದ ಬಲೆಯಲ್ಲಿ! ಕೋಪವೆಂಬ ರಾಡನೊಡ್ಡಿ

೧೫೮. ಪ್ರ. ದೇ. ವ. ಪುಟ ೯೨. ೧೫೯. ವ. ಶಾ. ಸಾ. ಭಾಗ ೧. (ಉ) ಪುಟ ೩೩೩.

ತಾಪವೆಂಬ ಅಡಿಗಲ್ಲನಿರಿಸಿ, ಹುಸಿ ಎಂಬ ಮಿಾಟುಗಣೆಯು ಜಂತ್ರಿಸಿ, ಹೊನ್ನು ಹೆಣ್ಣು ಮಣ್ಣೆಂಬ * ಸೂಸಲ ಚೆಲ್ಲಿ ಕೆಡಹಿದನಲ್ಲಾ ಸಿಂಕರುಣ ಮುಕ್ಕಣ್ಣವ್ಯಾಧನು. ಹೊನ್ನು ಹೆಣ್ಣು ಮಣ್ಣಿನಾಶೆಯು ಬಿಟ್ಟು, ಕೋಪತಾಪವಂ ಬಿಟ್ಟು, ಭ್ರಾಂತಿ ಭ್ರಮೆಯುಂ ಬಿಟ್ಟು ಜಂಗಮವಾಗಬೇಕು ಕಾಣಿರೋ ಮರುಳುಗಳಿರಾ. ಇಂತೀ ಷಡು ಲೋಭದ ರುಚಿಯು ಹಿಂಗಿ ಜಂಗಮವಾದಲ್ಲದೆ ಭವಹಿಂಗದು ಕಾಣಾ ಗುಹೇಶ್ವರಾ"

ಎಂದು ದೃಷ್ಟಾಂತ ಪೂರ್ವಕವಾಗಿ ಅಲ್ಲಮನು ತಿಳಿವು ನೀಡಿದನು. ಎಂತಹ ಚಿತ್ರ! ಎಂತಹ ದೃಷ್ಟಾಂತ! ವಚನಧರ್ಮದ ಸಾರ ಇದು. ಜಂಗಮ ಎಂಬುದು ಜಾತಿವಾಚಕವಲ್ಲ. ಅದು ಜ್ಞಾನಿಯ ಪದವಿ, ವೈರಾಗ್ಯದ ಶಿಖರ. ಅದನ್ನು ಸಾಧಿಸಿದವರು ಲಿಂಗವಂತರಲ್ಲದಿದ್ದರೂ ಜಂಗಮರು; ಸಾಧಿಸದವರು ಲಿಂಗವಂತರಾದರೂ ಜಂಗಮರಲ್ಲ. "ಇಟ್ಟ ಕಲ್ಲು ಮೆಳೆಯ ಮೇಲೆ ಸಿಕ್ಕಿದರೆ" ಹೇಗೋ ಹಾಗೆ. ಪ್ರಭು ಅಷ್ಟಕ್ಕೆ ಬಿಡದೆ ಮತ್ತೂ ದೃಷ್ಟಾಂತ ಗಳನ್ನು ಕೊಟ್ಟು ಅವರನ್ನೆಲ್ಲ ತಿದ್ದಿದನು.

೧೬೦. "ಘನತರ ಚಿತ್ರದ ರೂಹ ಬರೆಯಬಹುದಲ್ಲದೆ ಪ್ರಾಣವ ಬರೆಯಬಹುದೇ ಅಯ್ಯ? ದಿವ್ಯಾಗಮಂಗಳು ಹೇಳಿದ ಕ್ರಿಯೆಯಲು ದೀಕ್ಷೆಯು ಮಾಡಬಹುದಲ್ಲದೆ ಭಕ್ತಿಯ ಮಾಡಬಹುದೇ ಅಯ್ಯ? ಪ್ರಾಣವಹ ಭಕ್ತಿ ತನ್ಮಯ ನೀನು. ಅದು ಇದ್ದಲ್ಲಿ ನೀನಿರ್ಪೆ, ಇಲ್ಲದಲ್ಲಿ ನೀನಿಲ್ಲ ಗುಹೇಶ್ವರಾ"

ಚಿತ್ರಗಾರನು ಬಹಳ ಸೊಗಸಾಗಿ ಚಿತ್ರವನ್ನು ಬರೆಯಬಹುದು. ಪ್ರಾಣವಿರುವ ಹಾಗೆಯೇ ತೋರಿಸಬಹುದು, ಆದರೆ ಪ್ರಾಣಮಾತ್ರ ಅಲ್ಲಿಲ್ಲ. ಎಲ್ಲ ಕಳಶಸ್ಥಾಪನೆಗಳನ್ನೂ ಮಾಡಬಹುದು, ಎಲ್ಲ ಮಂತ್ರ ಗಳನ್ನೂ ಹೇಳಬಹುದು. ಆದರೆ ಭಕ್ತಿಯನ್ನುಂಟುಮಾಡುವುದು ಹೇಗೆ? ಅದನ್ನು ಯಾವ ದಿವ್ಯಾಗಮಗಳೂ ದೊರಕಿಸಲಾರವು. ಶಿಷ್ಯನ ಸ್ವಂತ ಸಾಧನೆಯಿಂದ ಮಾತ್ರ ಅದು ಸಾಧ್ಯ. ಶಿಷ್ಯನಲ್ಲಿ ಸುಜ್ಞಾನೋದಯ ವಾಗಬೇಕು, ಭಕ್ತಿ ಪ್ರಜ್ವಲಿಸಬೇಕು. ಆಗ ಭಕ್ತ. ಭಕ್ತಿ ಜ್ಞಾನ ಕ್ರಿಯೆ ಗಳೆಲ್ಲವೂ ಪಕ್ವವಾಗಿ ಮುಪ್ಪುರಿಗೊಂಡರೆ ಜಂಗಮ.

---

* ಅದಿಗಲ್ಲನೊಡ್ಡಿ—ಎಂಬುದು ಪುಸ್ತಕದ ಪಾಠ. ೧೬೦. ಪ್ರ. ದೇ. ವ. ಪುಟ ೫೦.

೧೬೧. "ಪ್ರಣತೆಯೂ ಇದೆ, ಬತ್ತಿಯೂ ಇದೆ. ಜ್ಯೋತಿಯ ಬೆಳಗುವಡೆ ತೈಲವಿಲ್ಲದೆ ಪ್ರಭೆ ತಾನೆಲ್ಲಿಯದೋ? ಗುರುವಿದೆ, ಲಿಂಗವಿದೆ, ಶಿಷ್ಯನ ಸುಜ್ಞಾನೋದಯವಾಗದನ್ನಕ್ಕರ ಭಕ್ತಿ ಎಲ್ಲಿಯದೋ? ಸೋಹಂ ಎಂಬುದ ಕೇಳಿ ದಾಸೋಹವ ಮಾಡದಿದ್ದಡೆ ಅತಿಗಳೆವೆ ಗುಹೇಶ್ವರಾ"

ಜ್ಞಾನಯುಕ್ತವಾದ ಭಕ್ತಿ, ಜ್ಞಾನಯುಕ್ತವಾದ ಕ್ರಿಯೆ, ಇವು ಮುಖ್ಯವೆಂದೂ, ಈ ಜ್ಞಾನ ಭಕ್ತಿಕ್ರಿಯೆಗಳು ಶಿಷ್ಯನಲ್ಲಿ ಉದಯವಾಗಬೇಕಲ್ಲದೆ ಹೊರಗಿನಿಂದ ಯಾರೂ ಕೊಡಲಾರರೆಂದೂ ಪ್ರಭು ತಿಳಿಸಿದನು. ಕೇವಲ ಆಚರಣೆಗಳನ್ನು ನಟಿಸುತ್ತಿದ್ದವರನ್ನು ನೋಡಿ ಅಲ್ಲಮ ಪ್ರಭು

೧೬೨. "ಒಳಗೆ ನೋಡಿಹೆನೆಂದರೆ ಒಳಗೆ ನೋಡಲಿಲ್ಲ. ಹೊರಗೆ ನೋಡಿಹೆನೆಂದರೆ ಹೊರಗೆ ನೋಡಲಿಲ್ಲ. ಜ್ಞಾನವೆಂತುಟೋ? ಬಲೆಯ ಬೀಸಿ ಕೊಲ್ಲುವವನ ಮನೆಯಲ್ಲಿ ಸತ್ತರೆ ಏನು ಕಾರಣ ಅಳುವಿರೋ ಗುಹೇಶ್ವರಾ"

ಎಂದನು. ಆದುದರಿಂದ ಒಳಗಿರುವ ಆಸೆ, ಕಪಟ, ಅಹಂಕಾರ ಮೊದಲಾದುವನ್ನೆಲ್ಲ ತ್ಯಜಿಸಿ. ಭಕ್ತರಿಗೆ ಸದಾಚಾರ ಸದ್ಗುಣಗಳು ಮುಖ್ಯ, ಜಂಗಮರಿಗೆ ಜ್ಞಾನ ಮುಖ್ಯ. ಇತ್ತ ನೀವು ಭಕ್ತರಲ್ಲ, ಅತ್ತ ಜಂಗಮರಲ್ಲ. ಇಂಥ ಠಕ್ಕರಿಗೆ ಗುಹೇಶ್ವರನು ಒಲಿಯುವನೇ? ಬಸವಣ್ಣನವರ ಹತ್ತಿರ ಹೋಗಿ ನಾನು ಅಂಥ ಜಂಗಮ, ಇಂಥ ಜಂಗಮ, ಸುಖಿ ಜಂಗಮ ಎಂದು ಹೇಳಿಕೊಳ್ಳುವಿರಿ. ಜಂಗಮ ಹೋಗಿ ಬೇಡುತ್ತಾನೆಯೆ? ಜಂಗಮ ತಾನು ಸುಖಿ ಎಂದುಕೊಳ್ಳುತ್ತಾನೆಯೆ?

೧೬೩. "ಆಚಾರವನರಿಯದೆ, ವಿಭವವಳಿಯದೆ, ಕೋಪ ಮುರಿಯದೆ, ತಾಪವುಡುಗದೆ ಬರಿದೆ ಭಕ್ತರಾದೆವೆಂದು ಬೆಬ್ಬನೆ ಬೆರೆವವರ ಕೇಡಿಂಗೆ ನಾನು ಮರುಗುವೆ ಕಾಣಾ ಗುಹೇಶ್ವರಾ"

೧೬೪. "ಸುಖವ ಬಲ್ಲಾತ ಸುಖಿಯಲ್ಲ. ದುಃಖವ ಬಲ್ಲಾತ ದುಃಖಿಯಲ್ಲ. ಸುಖ ದುಃಖವೆರಡನೂ ಬಲ್ಲಾತ ಜ್ಞಾನಿಯಲ್ಲ"

---

೧೬೧. ಪ್ರ. ದೇ. ವ. ಪುಟ ೪೯. ೧೬೨. ಪ್ರ. ದೇ. ವ. ಪುಟ ೧೬೦.
೧೬೩. ಪ್ರ. ದೇ. ವ. ಪುಟ ೫೬. ೧೬೪. ಪ್ರ. ದೇ. ವ. ಪುಟ ೧೭೧.

ಎಂಬುದನ್ನು ನೆನಪಿನಲ್ಲಿಟ್ಟುಕೊಳ್ಳಿ. ನಿಜವಾದ ಸುಖಿಯ ವರ್ತನೆ ಹೇಗಿರಬೇಕು ತಿಳಿದಿದೆಯೆ?

೧೬೫. "ತಾ ಸುಖಿಯಾದಡೆ ನುಡಿಯಲು ಬೇಡ. ತಾ ಸುಖಿಯಾದಡೆ ನಡೆಯಲು ಬೇಡ. ತಾ ಸುಖಿಯಾದಡೆ ಪೂಜಿಸಲು ಬೇಡ. ತಾ ಸುಖಿಯಾದಡೆ ಉಣ್ಣಲು ಬೇಡ"

ಇದು ಷಟ್ಸ್ಥಲಬ್ರಹ್ಮಿಗಳ ಸುಖ. ಇದನ್ನು ಬಲ್ಲವರಾರು? ಆ ಸತ್ಯವನ್ನು ಕಂಡವರಾರು? ಎಂದು ಪ್ರಭು ಕೇಳಿದನು. ಕೆಲವರು ಧೃಷ್ಟರು ತಾವು ಬ್ರಹ್ಮವನ್ನು ಅರಿತಿರುವುದಾಗಿ ಹೇಳಿದರು. ಅಲ್ಲಮ ಪ್ರಭುವಿಗೆ ಈ ಮಧ್ಯಮಜ್ಞಾನಿಗಳ ಅರಿವು ನೋಡಿ ಆಶ್ಚರ್ಯವಾಯಿತು. ಪ್ರಭು ಅವರಿಗೆ

೧೬೬. "ಅರಿದೆವು ಅರಿದೆವು ಎಂಬಿರಿ. ಅರಿದ ಪರಿ ಎಂತು ಹೇಳಿರೆ? ಅರಿದವರು ಅರಿದೆವೆಂಬರೆ? ಅರಿಯಬಾರದ ಘನವನು ಅರಿದವರು ಅರಿಯದಂತಿರ್ಪರು ಕಾಣಾ ಗುಹೇಶ್ವರಾ"

ಎಂದು ಬುದ್ಧಿ ಹೇಳಿದನು. ಪ್ರಭು ಹೇಳಿದ ಬುದ್ಧಿವಾದ ಕೇನೋಪನಿಷತ್ತಿನಲ್ಲಿ ಬರುವ,

"ಯೋ ನಸ್ತದ್ವೇದ ತದ್ವದೇ ನೋ ನ ವೇದೇತಿ ವೇದ ಚ"
"ತಸ್ಯಾಮತಂ ತಸ್ಯ ಮತಂ ಮತಂ ಯಸ್ಯ ನ ವೇದ ಸಃ।
ಅವಿಜ್ಞಾತಂ ವಿಜಾನತಾಂ ವಿಜ್ಞಾತಮವಿಜಾನತಾಂ"

ಎಂಬುದನ್ನು ಜ್ಞಾಪಕಕ್ಕೆ ತರುತ್ತದೆ. ನಾವು ತಿಳಿದಿದ್ದೇವೆ ಎಂದು ಹೇಳುವವರಿಗೆ ಅದು ತಿಳಿದೇ ಇಲ್ಲ ಎಂಬುದು ಸ್ಪಷ್ಟ. ಹೀಗೆ ನಾನಾ ಅಂತಸ್ತುಗಳಲ್ಲಿರುವ ಜನರನ್ನು ಪ್ರಭು ಚಮತ್ಕಾರವಾಗಿ ಚಿತ್ರಿಸಿದ್ದಾನೆ.

೧೬೭. "ಅಲ್ಪಜ್ಞಾನಿ ಪ್ರಕೃತಿ ಸ್ವಭಾವ. ಮಧ್ಯಮ ಜ್ಞಾನಿ ವೇಷಧಾರಿ. ಅತೀತ ಜ್ಞಾನಿ ಆರೂಢನನ್ನಾರೂ ಅರಿಯ ಬಾರದಯ್ಯಾ. ಜ್ಞಾನವನರಿಯದಾತ ಅಜ್ಞಾನಿ, ನಾಮ ನಷ್ಟ. ಈ ಚತುರ್ವಿಧದೊಳಗೆ ಆರಂಗವೂ ಇಲ್ಲ ಗುಹೇಶ್ವರಾ ನಿಮ್ಮ ಶರಣ"

---

೧೬೫. ಪ್ರ. ದೇ. ವ. ಪುಟ ೩೧೪. ೧೬೬. ಪ್ರ. ದೇ. ವ. ಪುಟ ೧೭೬.
೧೬೭. ಪ್ರ. ದೇ. ವ. ಪುಟ ೧೭೬.

ಹೀಗೆ ಕಲ್ಯಾಣಪಟ್ಟಣದಲ್ಲಿ ಪ್ರತಿಷ್ಠಾಕಾಂಕ್ಷಿಗಳ ಮಧ್ಯಮಜ್ಞಾನಿಗಳ ಬಾಯನ್ನು ಮುಚ್ಚಿಸಿ, ನಿಜವಾದ ಭಕ್ತರ ಮತ್ತು ಸಾಧಕರ ಪ್ರೀತಿಗೌರವಗಳಿಗೆ ಪಾತ್ರನಾಗಿ, ಅಲ್ಲಮನು ಶಿವಾನುಭವ ಮಂಟಪದ ಪ್ರಭುವಾದನು. ಪ್ರಭು ವಚನಧರ್ಮದಲ್ಲಿ ಮುಖ್ಯವಾದ ಕೆಲವಂಶಗಳನ್ನು ಸ್ಪಷ್ಟಪಡಿಸಿದ್ದಾನೆ. ಸ್ಥಾವರ ಲಿಂಗಪೂಜೆ, ದೇವಸ್ಥಾನಗಳ ರಚನೆ, ಇವುಗಳನ್ನು ಆತ ಖಂಡಿಸಿದ್ದಾನೆ.

೧೬೮. "ಮರ್ತ್ಯಲೋಕದ ಮಾನವರು ದೇಗುಲದೊಳಗೊಂದು ದೇವರ ಮಾಡಿದ ಅನು ಬೆರಗಾದೆನಯ್ಯ. ನಿಚ್ಚಕ್ಕೆ ನಿಚ್ಚ ಅರ್ಚನೆಯು ಪೂಜನೆಯ ಮಾಡಿ ಭೋಗವ ಮಾಡುವವರ ಕಂಡು ನಾನು ಬೆರಗಾದೆನು. ಗುಹೇಶ್ವರಾ ನಿಷ್ಠ ಶರಣರು ಹಿಂದೆ ಲಿಂಗವನಿರಿಸಿ ಹೋದರು"

ತಾವೇ ಲಿಂಗವಾಗಲರಿಯದೆ ಲಿಂಗವೆಂದು ಇದಿರಿಟ್ಟುಕೊಂಡು ಅನ್ಯ ವನ್ನು ಪೂಜಿಸಿ ಜನನಮರಣಗಳಿಗೆ ತುತ್ತಾಗುವುದು ಅದ್ವೈತಭಾವನೆಯ ಪ್ರಭುವಿಗೆ ಒಪ್ಪಿಕೆಯಿಲ್ಲ. ಕಲ್ಪನೆಯ ದೇವರು, ಕಲ್ಪನೆಯ ಭಕ್ತಿ—ಇವು ಗಳಿಂದ ಪ್ರಯೋಜನವಿಲ್ಲ,

೧೬೯. "ಭಾವದಲೊಬ್ಬ ದೇವರ ಮಾಡಿ, ಮನದಲೊಂದು ಭಕ್ತಿಯ ಮಾಡಿ ಕಾಯದ ಕಯ್ಯಲಿ ಕಾರ್ಯ ಉಂಟೆ? ವಾಯಕ್ಕೆ ಬಳಲುವರು ನೋಡ! ಎತ್ತನೇರಿ ಎತ್ತನರಸುವರು ಎತ್ತ ಹೋದರೈ ಗುಹೇಶ್ವರಾ''

೧೭೦. "ಕಲ್ಲ ಮನೆಯ ಮಾಡಿ, ಕಲ್ಲ ದೇವರ ಮಾಡಿ, ಕಲ್ಲು ಕಲ್ಲ ಮೇಲೆ ಕೆ ದರೆ, ದೇವರೆತ್ತ ಹೋದರೋ? ಲಿಂಗ ಪ್ರತಿಷ್ಠೆಯು ಮಾಡಿದವಂಗೆ ನಾಯಕ ನರಕ ಗುಹೇಶ್ವರಾ"

ಎಂದು ಹೇಳಿ ಲಿಂಗಪ್ರತಿಷ್ಠೆಯನ್ನು ಮಾಡಕೂಡದೆಂದು ಆಗಮಗಳಿ ವಿರೋಧವಾಗಿ ಆತ ನಿಷೇಧಿಸಿದ್ದಾನೆ. ಹಾಗಾದರೆ ಪ್ರಭುವಿನ ಅಭಿಪ್ರಾಯ ವಾದರೂ ಏನು? ಎಂದರೆ, ಅದು

"ದೇಹೋ ದೇವಾಲಯಃ ಪ್ರೋಕ್ತಃ, ಜೀವೋ ದೇವಸ್ಸನಾತನಃ"

ಎಂಬ ಉಪನಿಷತ್ಸಮ್ಮತವಾದ ಅಭಿಪ್ರಾಯವೇ ಆಗಿದೆ.

---

೧೬೮. ಪ್ರ. ದೇ. ವ. ಪುಟ ೯೧.
೧೬೯— ಪ್ರ. ದೇ. ವ. ಪುಟ ೯೩.
೧೭೦. ಪ್ರ. ದೇ. ವ. ಪುಟ ೧೦೬.

೧೭೧. "ದೇಹದೊಳಗೆ ದೇವಾಲಯವಿದ್ದು, ಮತ್ತೆ ಬೇರೆ ದೇವಾಲಯವೇಕೆ? ಎರಡಕ್ಕೆ ಹೇಳಲಿಲ್ಲಯ್ಯ. ಗುಹೇಶ್ವರಾ, ನೀನು ಕಲ್ಲಾದರೆ ನಾನೇನಪ್ಪೆ ನಯ್ಯ?"

೧೭೨. "ಪೂಜಿಸಿ ಕೆಳೆಯಿಂದ ಇಳುಹಲದೇನೋ? ಅನಾಗತ ಪೂಜೆಯ ಮಾಡಲ ದೇನೋ? ದೇಹವೇ ಪೀಠಿಕೆ, ಜೀವವೇ ಲಿಂಗ ಗುಹೇಶ್ವರಾ"

೧೭೩. "ಒಡಲುವಿಡಿದು ಪಾಷಾಣಕ್ಕೆ ಹಂಗಿಗರಾದಿರಲ್ಲಾ! ಲಿಂಗಸಂಗಿಗಳೆಲ್ಲ ಮಹಾ ಘನವನರಿಯದೆ ಹೋದರೋ. ಹುಸಿಯನೆ ಕೊಯ್ದು ಹುಸಿಯನೆ ಪೂಜಿಸಿ ಗಸಣಿಗೊಳಗಾದರು ಗುಹೇಶ್ವರಾ"

(೧೪೬.) "ಪ್ರಾಣಲಿಂಗಕ್ಕೆ ಕಾಯವೇ ಸೆಜ್ಜೆ. ಆಕಾಶ ಗಂಗೆಯಲ್ಲಿ ಮಜ್ಜನ. ಹೂವಿಲ್ಲದ ಪರಿಮಳದ ಪೂಜೆ. ಹೃದಯ ಕಮಲದಲ್ಲಿ ಶಿವಶಿವಾ ಎಂಬ ಶಬ್ದ. ಇದು ಅದ್ವೈತ ಕಾಣಾ ಗುಹೇಶ್ವರಾ"

ಆದುದರಿಂದ ಈ ಅದ್ವೈತವನ್ನು ಸಾಧಿಸಬೇಕಲ್ಲದೆ, ದ್ವೈತಭಾವನೆ ಯಿಂದ ವರ್ತಿಸುವುದು ಸರಿಯಲ್ಲ. ಸಾಧನೆಯೆಂಬುದಾದರೂ 'ಒತ್ತಿ ಹಣ್ಣ ಮಾಡಿದಡೆ ಅದೆತ್ತಣ ರುಚಿಯಪ್ಪುದೊ' ಎಂಬಂತೆ ಆಗಬಾರದು. ಅದು ಸಹಜವಾಗಿ, ನಿರಾಯಾಸವಾಗಿ ಆಗಬೇಕು.

೧೭೪. "ಬಿರುಗಾಳಿ ಬೀಸಿ ಮರ ಮುರಿವಂತೆ ಸುಳುಹು ಸುಳಿಯದೆ, ತಂಗಾಳಿ ಪರಿಮಳ ಮೊಡಗೂಡಿ ಸುಳಿವಂತೆ ಸುಳಿಯಬೇಕು. ಸುಳಿದಡೆ ನೆಟ್ಟನೆ ಜಂಗಮವಾಗಿ ಸುಳಿಯಬೇಕು. ಸುಳಿದಡೆ ನೆಟ್ಟನೆ ಭಕ್ತನಾಗಿ ನಿಲಬೇಕು. ಸುಳಿದು ಜಂಗಮವಾಗಲರಿಯದ, ನಿಂದು ಭಕ್ತನಾಗಲರಿಯದ, ಉಭಯಭ್ರಷ್ಟರನೇನೆಂಬೆ ಗುಹೇಶ್ವರಾ"

ಅಲ್ಲಮನು ಹೀಗೆ ಲಿಂಗವಾಗಿದ್ದವನು. ಆದುದರಿಂದಲೇ ಬಸವಣ್ಣ ನವರ ವಚನಗಳಲ್ಲಿ ಕಂಡುಬರುವಂಥ ಹೋರಾಟಗಳೂ, ಪ್ರಾರ್ಥನೆ ಗಳೂ, ಆತ್ಮಪರೀಕ್ಷೆಗಳೂ ಪ್ರಭುವಿನ ವಚನಗಳಲ್ಲಿಲ್ಲ. ಪ್ರಭು ಶಿವಶರಣರ ಮಧ್ಯದಲ್ಲಿ ಹಿಮಾಲಯದ ಗೌರೀ ಶಂಕರದಂತೆ ಅತ್ಯುನ್ನತನಾಗಿ ಕಾಣಿಸು ತ್ತಾನೆ. ಕೀಳು ಮನೋಭಾವನೆಗಳು ಆತನಲ್ಲಿಲ್ಲ. ಭವಿ ಭಕ್ತ ಎಂಬ

---

೧೭೧. ಪ್ರ. ದೇ. ವ. ಪುಟ ೧೧೬. ೧೭೨. ಪ್ರ. ದೇ. ವ. ಪುಟ ೯೪.
೧೭೩. ಪ್ರ. ದೇ. ವ. ಪುಟ ೯೯. ೧೭೪. ಪ್ರ. ದೇ. ವ. ಪುಟ ೧೬೭

ಭೇದಗಳನ್ನು ಆತ ಮಾಡಿದವನಲ್ಲ. ಭವಿಗಿಕ್ಕಬೇಡಿ, ಭವಿಯೊಡನೆ ಸೇರಬೇಡಿ—ಎಂಬ ಮುಂತಾದ ಉಪದೇಶಗಳು ಆ ವಿಶ್ವಹೃದಯದಲ್ಲಿ ಕಂಡುಬರುವುದಿಲ್ಲ. ಭವಿಯ ಮಾತನ್ನಾಡಿದವರಿಗೆ ಪ್ರಭು ತಾನೇ ದೊಡ್ಡ ಭವಿ, ತಾನು ಭವಿಯ ಪೂಜಿಸಿ ಮುಕ್ತಿ ಗಳಿಸಿದೆನೆಂದು ಚಮತ್ಕಾರವಾಗಿ ಹೇಳುತ್ತಿದ್ದನು.

೧೭೫. "ಭವಿಯ ಕಳೆದೆನೆಂಬ ಮರುಳು ಜನಂಗಳು ನೀವು ಕೇಳಿರೆ. ಭವಿಯಲ್ಲವೆ ನಿಮ್ಮ ತನು ಮನ ಗುಣಾದಿಗಳು? ಭವಿಯಲ್ಲವೇ ನಿಮ್ಮ ಪ್ರಾಣಗುಣಾದಿಗಳು? ಇವರೆಲ್ಲರು ಭವಿಗಳ ಹಿಡಿದು ಭವಭಾರಿಗಳಾದರು. ನಾನು ಭವಿಯ ಪೂಜಿಸಿ ಭವಂನಾಸ್ತಿಯಾದೆನು ಗುಹೇಶ್ವರಾ"

ಆತನಿಗೆ ಸ್ವಮತಾಭಿಮಾನವೆಂಬುದು ಕೂಡ ಇದ್ದಂತೆ ತೋರುವುದಿಲ್ಲ. ವಚನಧರ್ಮದ ನಿಜವಾದ ಧ್ಯೇಯವನ್ನು, ಸಾರವನ್ನು, ಆತ ಚೆನ್ನಾಗಿ ಹೇಳಿದ್ದಾನೆ.

೧೭೬. "ಕಾಮವ ಸುಟ್ಟು ಹೋಮವನುರುಹಿ ತ್ರಿಪುರ ಸಂಹಾರದ ಕೀಲನರಿಯಬಲ್ಲಡೆ ಯೋಗಿಯಾದಡೇನು? ಭೋಗಿಯಾದಡೇನು? ಶೈವನಾದಡೇನು? ಸಂನ್ಯಾಸಿಯಾದಡೇನು? ಅಶನವ ತೊರೆದಾತ, ವ್ಯಸನವ ಮರೆದಾತ ಗುಹೇಶ್ವರ ಲಿಂಗದಲ್ಲಿ ಅವರ ಹಿರಿಯರೆಂಬೆನು"

ಆಸೆಯನ್ನು ಬಿಟ್ಟು, ಜ್ಞಾನಿಗಳಾಗಿ, ಸ್ಥೂಲ ಸೂಕ್ಷ್ಮ ಕಾರಣ ತನುಗಳ ಸಕೀಲಗಳನ್ನು ಯಾರು ಬಲ್ಲರೋ ಅವರು ಜಾತಿಭೇದವಿಲ್ಲದೆ, ಲಿಂಗಭೇದವಿಲ್ಲದೆ, ವಯೋಭೇದವಿಲ್ಲದೆ 'ಹಿರಿಯರು' ಎಂದು ಪ್ರಭು ಘಂಟಾಘೋಷವಾಗಿ ಸಾರಿದ್ದಾನೆ. ಅಂಥವರು ಯಾವ ದೇಶದಲ್ಲಾದರೂ ಯಾವ ಜಾತಿಯಲ್ಲಾದರೂ ದೊರೆಯಬಹುದು. ಈ ವಿಶ್ವವ್ಯಾಪಕವಾದ ಹೃದಯವನ್ನು ದೊರಕಿಸುವುದು ವಚನಧರ್ಮದ ಧ್ಯೇಯ. ಮತಪ್ರಚಾರ ಕಾರ್ಯದಲ್ಲಿ ನಿರತರಾದವರಿಗೆ ಇಂಥ ವಿಶಾಲಭಾವನೆಯಿಂದ ತೊಂದರೆಯೇ ಸರಿ. ವೀರಶೈವಮತಕ್ಕೆ ಹೆಚ್ಚಿನ ಪ್ರಾಶಸ್ತ್ಯ ಹೇಗೆ ದೊರೆಯುವುದೆಂದು ಪ್ರಭುವನ್ನು ಆಗಿನ ಕಾಲದಲ್ಲಿ ಹಲವರು ಆಕ್ಷೇಪಿಸಿರಬಹುದು. ಆದರೆ ಪ್ರಭು ಅವರ ಆಕ್ಷೇಪಣೆಗಳನ್ನು ಲೆಕ್ಕಿಸಲಿಲ್ಲ.

---

೧೭೫. ಪ್ರ. ದೇ. ವ. ಪುಟ ೧೮೬. ೧೭೬. ಪ್ರ. ದೇ. ವ. ಪುಟ ೧೬೫.

೧೭೭. "ಬೆಟ್ಟಕ್ಕೆ ಚಳಿಯಾದಡೆ ಏನು ಹೊದ್ದಿಸುವಿರಯ್ಯ? ಬಯಲು ಬತ್ತಲೆ ನಿಂದಡೆ ಏನನುಡಿಸುವಿರಯ್ಯ? ಭಕ್ತನು ಭವಿಯಾದಡೆ ಆದೇನನುಪಮಿಸು ವೆನಯ್ಯ ಗುಹೇಶ್ವರಾ"

ಎಂದು ಸಮಾಧಾನ ಹೇಳಿ, ಸ್ವಯಂ ಲಿಂಗವಾದವನಿಗೆ ಯಾವ ವಿಧಿ ನಿಷೇಧಗಳೂ ಇಲ್ಲ, ಸಂಕುಚಿತ ಮನೋಭಾವನೆಯನ್ನು ಇಟ್ಟುಕೊಳ್ಳಬೇಡಿ ಎಂದು ಅವರಿಗೆ ಬುದ್ಧಿ ಹೇಳಿದನು.

ಪ್ರಭುವಿನ ಪ್ರಭಾವ ಶಿವಶರಣರ ಮೇಲೆಲ್ಲ ಬಹಳ ಪ್ರಬಲ ವಾಗಿದ್ದಿತು. ಆತನು ಸಾಧಕರ ಯೋಗ್ಯತಾನುಸಾರ ತಕ್ಕ ರೀತಿಯಲ್ಲಿ ಹೇಳುತ್ತಿದ್ದನು. ಹಲವು ಸಮಸ್ಯೆಗಳ ಪರಿಹಾರಕ್ಕೆ ಶರಣರು ಆತ ನನ್ನು ಆಶ್ರಯಿಸುತ್ತಿದ್ದರು. ಅವರಿಗೆಲ್ಲ ಸಮಾಧಾನವಾಗುವಂತೆ ಉಚಿತ ರೀತಿಯಲ್ಲಿ ಬೋಧೆಮಾಡಿ ವಚನಧರ್ಮದ ಮೂಲತತ್ತ್ವಗಳನ್ನು ಆತನು ತಿಳಿಸಿದನು. ಆತನ ವಚನಗಳು ಅಧಿಕಾರವಾಣಿಯಿಂದ ಬರುತ್ತವೆ. ಆತನನ್ನು ಸಂಧಿಸಿದವರೆಲ್ಲರೂ ಸತ್ಪರಿಣಾಮ ಹೊಂದಿದವರೇ ಹೊರತು ಹಾಗೆಯೇ ಹೋದವರಿಲ್ಲ. ಆದುದರಿಂದ ಪ್ರಭುವಿನ ಜೀವನ ಚರಿತ್ರೆ ವೀರಶೈವ ಪುರಾಣಗಳ ಸಂಗ್ರಹವಾಗಿಯೂ ಪ್ರಭುವಿನ ವಚನಗಳು ವಚನಧರ್ಮದ ಸಾರವಾಗಿಯೂ ಇವೆ.

---

೧೭೭. ಪ್ರ. ದೇ. ವ. ಪುಟ ೬೭.

## ೭ನೆಯ ಪ್ರಕರಣ

# ಕರ್ಮಯೋಗ—ಸಿದ್ಧರಾಮ

ದೇವರು ಪ್ರಪಂಚದ ಸೃಷ್ಟಿಯನ್ನು ಆತ್ಮದ ಉದ್ಧಾರಕ್ಕಾಗಿಯೇ ಮಾಡಿದ್ದಾನೆ. ಮಲಗಳನ್ನು ನೀಗಿಕೊಳ್ಳುವುದಕ್ಕೆ ಇದು ಸಾಧನರಂಗ. ದೇವ ಲೋಕದವರಾದರೂ ಮನುಷ್ಯಲೋಕದಲ್ಲಿ ಮನುಷ್ಯರಾಗಿ ಜನ್ಮವೆತ್ತಿ ಇಲ್ಲಿಯ ಸಾಧನೆಯಿಂದ ನಿಜವನ್ನರಿಯಬೇಕಾಗಿದೆ.

* "ಭೋಗ ಭೂಮಿಯ ಭೋಗ ತನುವಿನ<br>
ಲಾಗದನುಪಮ ಸಿದ್ಧಿ ಕರ್ಮೋ<br>
ದ್ಯೋಗ ಭೂಮಿಯ ಕರ್ಮ ತನುವಿನಲಲ್ಲದದಱಿಂದ<br>
ಯೋಗಯೋಗ್ಯರು ಯೋಚಿಸುತ ಭೂ ।<br>
ಭಾಗದೊಳು ಮಾನವ ಶರೀರಿಗ ।<br>
ಳಾಗಿ ಸಾಧಿಸಿ ನಿಜನವಱಿವರು ಗಿರಿಜೆ ಕೇಳೆಂದ"

ಆದುದರಿಂದ ಕರ್ಮತನು, ಕರ್ಮೋದ್ಯೋಗ ಭೂಮಿ, ಇವುಗಳ ಪ್ರಾಮುಖ್ಯವನ್ನು ಅಲ್ಲಗಳೆಯುವುದು ಹೇಗೆ? ನಿರ್ವ್ಯಾಪಾರಿಯಾಗಿರುವುದು ಸಾಧ್ಯವೇ? ಅದು ಮುಕ್ತಿದಾಯಕವೇ? ಕೆಲವು ಕರ್ಮಗಳು ಶಾಸ್ತ್ರ ವಿಹಿತಗಳಾಗಿವೆ.

"ತಸ್ಯ ತಪೋ ದಮಃ ಕರ್ಮೇತಿ ಪ್ರತಿಷ್ಠಾ ವೇದಾಃ ಸರ್ವಾಂಗಾನಿ ಸತ್ಯಮಾಯ ತನಮ್" ಎಂದು ಕೇನೋಪನಿಷತ್ತೂ

"ಯಜ್ಞದಾನ ತಪಃ ಕರ್ಮ ನ ತ್ಯಾಜ್ಯಂ ಕಾರ್ಯಮೇವ ತತ್ ॥<br>
ಯಜ್ಞೋದಾನಂ ತಪಶ್ಚೈವ ಪಾವನಾನಿ ಮನೀಷಿಣಾಮ್" ॥

ಎಂದು ಭಗವದ್ಗೀತೆಯೂ ಹೇಳುತ್ತವೆ. ಎರಡನೆಯದಾಗಿ ಪ್ರಾಣ ವಿರುವ ಪರ್ಯಂತ ಕೆಲವು ಕರ್ಮಗಳನ್ನು ಮಾಡದೇ ಇರುವುದು ಸಾಧ್ಯವೇ ಇಲ್ಲ.

---

* ಪ್ರ. ಲಿಂ. ಲೀ.

೧೭೮. "ಕಂಗಳೇಕೆ ನೋಡಬೇಡವೆಂದರೆ ಮಾಣವು. ಶ್ರೋತ್ರಂಗಳೇಕೆ ಆಲಿಸ ಬೇಡವೆಂದರೆ ಮಾಣವು. ನಾಸಿಕವೇಕೆ ವಾಸಿಸಬೇಡವೆಂದರೆ ಮಾಣದು. ತ್ವಕ್ಕೇಕೆ ಸೋಂಕಬೇಡವೆಂದರೆ ಮಾಣದು. ಈ ಭೇದವನರಿದು ನುಡಿಯಲು ಸಮಧಾತುವಾಯಿತ್ತು. ಗುಹೇಶ್ವರ ಲಿಂಗಕ್ಕೆ ಒಲಿದ ಕಾರಣ ಅಭಿಮಾನ ಲಜ್ಜೆ ಬೇಸತ್ತು ಹೋಯಿತ್ತು"

ಆಯಾ ಇಂದ್ರಿಯ ಕಾರ್ಯಗಳನ್ನು ತಡೆಗಟ್ಟಿ ಹೋಗುವುದು ವ್ಯರ್ಥ. ಬುದ್ಧಿವಂತನಾದವನು ಅವುಗಳನ್ನೇ ಉಪಯೋಗಿಸಿಕೊಂಡು ತಾನು ಮುಕ್ತಿಯನ್ನು ಪಡೆಯುತ್ತಾನೆ. ಇಂದ್ರಿಯಗಳಲ್ಲಿರುವ ಚೈತನ್ಯ ಯಾರದು, ಎಂಬ ಭೇದವನ್ನು ತಿಳಿದರೆ 'ಸಮಧಾತುವಾಯಿತ್ತು'. ಆದುದರಿಂದ ಕರ್ಮದಲ್ಲಿ

"ಏತನ್ಯಾಪಿ ತು ಕರ್ಮಾಣಿ ಸಂಗಂ ತ್ಯಕ್ತ್ವಾ ಫಲಾನಿಚ ।
ಕರ್ತವ್ಯಾ ನೀತಿ ಮೇ ಪಾರ್ಥ ನಿಶ್ಚಿತಂ ಮತಮುತ್ತಮಮ್"

ಎಂಬ ಗೀತಾ ವಾಕ್ಯದಂತೆ 'ನಾನು ಮಾಡುತ್ತೇನೆ' ಎಂಬ ಭಾವ ವಿಲ್ಲದಿರುವುದೂ ಫಲಾಪೇಕ್ಷೆಯಿಲ್ಲದಿರುವುದೂ ಮುಖ್ಯ. ಇದೇ ಕರ್ಮ ಯೋಗದ ತಿರುಳು. ನಿರ್ವ್ಯಾಪಾರಿಯಾಗಿರುವುದೆಂದರೆ ಕರ್ಮದ ಮೂಲಕ ಸತ್ಕ್ರಿಯಾಚರಣೆಗಳು ರೂಢಮೂಲವಾಗಿ ಫಲಾಪೇಕ್ಷೆಯಿಲ್ಲದಂತೆ ಪರಿಪಾಕ ಹೊಂದಬೇಕು, ಕೇವಲ ಜಡವಾಗಿ ಕುಳಿತುಕೊಳ್ಳುವುದೆಂದಲ್ಲ.

೧೭೯. "ಕ್ರಿಯಾ ಮಥನವಿಲ್ಲದೆ ಕಾಣಬಂದುದೇ ಇಕ್ಷುವಿನೊಳಗಣ ಮಧುರ? ಕ್ರಿಯಾ ಮಥನವಿಲ್ಲದೆ ಕಾಣಬಂದುದೇ ತಿಲದೊಳಗಣ ತೈಲ? ಕ್ರಿಯಾ ಮಥನವಿಲ್ಲದೆ ಕಾಣಬಂದುದೇ ಕ್ಷೀರನೊಳಗಣ ತುಪ್ಪ? ಕ್ರಿಯಾ ಮಥನವಿಲ್ಲದೆ ಕಾಣಬಂದುದೇ ಕಾಷ್ಠದೊಳಗಣ ಅಗ್ನಿ? ಇದು ಕಾರಣ ನಮ್ಮ ಗುಹೇಶ್ವರ ಲಿಂಗವ ತನ್ನೊಳರಿದೆನೆಂಬ ಮಹಂತಂಗೆ ಸತ್ಕ್ರಿಯಾಚರಣೆಯೇ ಸಾಧನ ಕಾಣ ಭೋ"

೧೮೦. "ಗತಿ ಮತಿ ಚೈತನ್ಯ ಶಬ್ದವುಳ್ಳನ್ನಕ್ಕರ ಕ್ರಿಯೆಂತಂತೆ ನಡೆವುದು. ಉರುವಣಿ ಬೇಡ ಕಂಡೆಯಾ ಮನವೇ? ಎಲೆ ಮನವೇ, ಕ್ರಿಯೆಂತಂತೆ ನಡೆವುದು. ಹೂಮಿಡಿಯು ಹರಿದೊಡೆ ಹಣ್ಣಾಗ ಬಲ್ಲುದೇ? ಲಿಂಗದಲ್ಲಿ ಮನ ಲೀಯ್ಯವಾಗ ದನ್ನಕ್ಕರ ದೇವ ಸಕಳೇಶ್ವರನೆಂತೊಲಿವ?

---

೧೭೮. ಪ್ರ. ದೇ. ಪ. ಪುಟ ೫೯. ೧೭೯. ವ. ಶಾ. ಸಾ. ಭಾಗ ೧. (ಉ.) ಪುಟ ೨.
೧೮೦. ವ. ಶಾ. ಸಾ. ಭಾಗ ೧. (ಉ.) ಪುಟ ೨.

೧೮೧. "ಅಂಗವನರಿವನ್ನಕ್ಕ ಶಿವಲಿಂಗ ಪೂಜೆಯ ಮಾಡಲೇ ಬೇಕು. ಆತ್ಮನ ಕ್ಷುಧೆಯುಳ್ಳನ್ನಕ್ಕ ಬಂದ ಪದಾರ್ಥವ ಲಿಂಗಾರ್ಪಿತವ ಮಾಡಲೇ ಬೇಕು. ಇದು ಅರುವಿನ ಬಿತ್ತು, ಜ್ಞಾನದ ಗೊತ್ತು, ಸರ್ವ (ಸ)ಮಯದ ಯುಕ್ತಿ ಈಶಾನ್ಯಮೂರ್ತಿ ಮಲ್ಲಿಕಾರ್ಜುನ ಲಿಂಗವನರಿವ ಶಕ್ತಿ"

೧೮೨. "ತೊಟ್ಟು ಬಿಡುವನ್ನಕ್ಕ ಮತ್ತಾ ಬುಡದಾಸೆ ಬೇಕು. ಮರ್ತ್ಯದ ಹಂಗುಳ್ಳನ್ನಕ್ಕ ಸತ್ಯ ಶರಣರ ಸಂಗ ನಿತ್ಯ ಜಂಗಮಸೇವೆ ಕೃತ್ಯವಿರಬೇಕು ಅಮರೇಶ್ವರ ಲಿಂಗವನರಿವುದಕ್ಕೆ"

ಆದುದರಿಂದ ಕರ್ಮ ಮಾಡಬೇಕು, ಜ್ಞಾನವನ್ನು ಪಡೆಯಬೇಕು, ವೈರಾಗ್ಯವನ್ನು ಗಳಿಸಬೇಕು, ಮುಕ್ತಿ ದೊರೆಯಬೇಕು. ಹೀಗೆ ಕರ್ಮ ಜ್ಞಾನ ವೈರಾಗ್ಯಗಳನ್ನು ಸಾಮರಸ್ಯದಿಂದ ಹೊಂದಿಸಿ ಲಿಂಗತನು ಲಿಂಗಮನ ಲಿಂಗ ಕರ್ಮಗಳಾಗಿ ಪರಿಣಾಮಗೊಳಿಸುವುದು ವಚನಧರ್ಮದಲ್ಲಿ ಮುಖ್ಯವಾದ ಧ್ಯೇಯ. ಈ ಧ್ಯೇಯ ಸಾಧನೆಯಲ್ಲಿ ಹೇಗೆ ತೊಡಕುಗಳು ಬರುತ್ತವೆ ಎಂಬುದನ್ನೂ ಅವುಗಳನ್ನು ಹೇಗೆ ದಾಟಬಹುದೆಂಬುದನ್ನೂ ಸಿದ್ಧರಾಮನ ಜೀವನ ಚರಿತ್ರೆಯಿಂದ ತಿಳಿಯ ಬಹುದಾಗಿದೆ.

ವಚನಧರ್ಮದ ಬೆಳವಣಿಗೆಯಲ್ಲಿ ಸಿದ್ಧರಾಮನು ಒಳ್ಳೆಯ ಪ್ರಭಾವವನ್ನು ಬೀರಿದ್ದಾನೆ. ಆತನು ಸೊಲಾಪುರದವನು. ಮುದ್ದವ್ವೆ, ಮುದ್ದಯ್ಯ ಎಂಬ ವಯಸ್ಸಾದ ದಂಪತಿಗಳಿಗೆ, ಅವರ ಮುಪ್ಪಿನ ಕಾಲದಲ್ಲಿ ಆತನು ಹುಟ್ಟಿದನು. ತಂದೆ ತಾಯಿಗಳು ಆ ಅಪರವಯಸ್ಸಿನಲ್ಲಿ ತಮಗೊಬ್ಬ ಮಗ ಹುಟ್ಟುವನೆಂದು ಕನಸಿನಲ್ಲಿಯೂ ಎಣಿಸಿರಲಿಲ್ಲ. ರೇವಣಸಿದ್ಧಗುರು ಸೊನ್ನಲಾಪುರಕ್ಕೆ ಹೋದಾಗ ಪಾದಚಾರಿಯಾಗಿ ಮುದ್ದಯ್ಯನ ಮನೆಯ ಕಡೆಗೆ ಹೊರಟನು. ಸಮಸ್ತವಾಹನಗಳೂ ಸಿದ್ಧವಾಗಿರುವಾಗ ಬರಿಗಾಲಿನಲ್ಲಿ ನಡೆದು ಕೊಂಡು ಹೋಗುವುದುಂಟೆ? ಎಂದು ರಾಣಿಯಾದ ಚಾಮಲದೇವಿ ಆಶ್ಚರ್ಯದಿಂದ ಕೇಳಿದಳು. "ಇಲ್ಲಿ ಸಾಕ್ಷಾತ್ ಪರಶಿವ ಮೂರ್ತಿಯಾದ ಶಿವಯೋಗಿಯೊಬ್ಬನ ಅವತಾರವಾಗುವುದು" ಎಂದು ಗುರು ಹೇಳಿ, ಮುದ್ದಯ್ಯನ ಮನೆಯನ್ನು ಸೇರಿ ಸಿದ್ಧರಾಮನ ಜನನ ವೃತ್ತಾಂತವನ್ನು

೧೮೧—೨. ವ. ಶಾ. ಸಾ. ಭಾಗ ೧. (ಉ.) ಪುಟ ೪.

ತಿಳಿಸಿದನು. ಆದರೆ ಹುಟ್ಟಿದ ಮಗುವಿಗೆ ಮೊದಲು ಸಿದ್ಧರಾಮನೆಂದು ನಾಮಕರಣ ನಡೆಯಲಿಲ್ಲ; ಮನೆದೇವರಾದ ಧೂಳಿಮಾಕಾಳಯ್ಯನೆಂದು ಹೆಸರಿಟ್ಟರು. ಮಗನು ಬೆಳೆಯುತ್ತ ಬಂದ ಹಾಗೆಲ್ಲ ಅವನು ಕೇವಲ ಜಡ ಭರತನೆಂದು ತಂದೆ ತಾಯಿಗಳಿಗೆ ತೋರಿತು. ಆ ಮೊದ್ದು ಮತ್ತೆ ಯಾವ ಕೆಲಸಕ್ಕೂ ಯೋಗ್ಯನಲ್ಲೆಂದು ದನಕಾಯುವ ಕೆಲಸಕ್ಕೆ ಹಾಕಿದರು. ದನ ಕಾಯುವುದರ ಜೊತೆಗೆ ಆ ಮೊದ್ದು ಮರದಡಿಯಲ್ಲಿ ಲಿಂಗ ಪೂಜೆ ಮಾಡುತ್ತಿದ್ದನು!

ಒಂದು ದಿನ ಮಲ್ಲಿಕಾರ್ಜುನನು ಆ ಹುಡುಗನಿಗೆ ಪ್ರತ್ಯಕ್ಷನಾಗಿ ಹಂಜಕ್ಕಿಯನ್ನು ಬೇಡಿದನು. ಹಂಜಕ್ಕಿಯನ್ನು ಮನೆಯಿಂದ ತರುವುದರೊಳಗಾಗಿ ಶಿವನು ಅದೃಶ್ಯನಾಗಿರಲು "ಮಲ್ಲಯ್ಯ! ಮಲ್ಲಯ್ಯ!" ಎಂದು ಕೂಗುತ್ತ ಹುಡುಗನು ಹುಡುಕಾಡುತ್ತಿದ್ದನು. ಶ್ರೀ ಶೈಲದ ಜಾತ್ರೆಗೆ ಆ ಮಾರ್ಗವಾಗಿ ಹೋಗುತ್ತಿದ್ದ ಜನರು "ಮಲ್ಲಯ್ಯನನ್ನು ತೋರಿಸುತ್ತೇವೆ, ಬಾ" ಎಂದು ಜೊತೆಯಲ್ಲಿ ಅವನನ್ನು ಕರೆದುಕೊಂಡು ಹೋದರು.

೧೮೩. "ದೇವನಿಂತವನೆಂದು ನಂಬಲಾಗದಯ್ಯ. ಬಾ ಎಂದು ಹೇಳಿ ಬಯಲಾದ ದೇವನೊಳ್ಳಿದನೆ? ದೇವನಿಂತವನೆಂದು ನಂಬಲಾಗದಯ್ಯ. ತನ್ನ ಕಾರ್ಯಕ್ಕೆ ಹೆಣಗಾಡಿಸಿದ ಒಳ್ಳಿದನೆ? ಕಪಿಲ ಸಿದ್ಧ ಮಲ್ಲಯ್ಯ ನಿನ್ನ ಲೀಲೆ ತಿಳಿಯದಾರಿಂಗೆ"

ಎಂಬುದರ ಅನುಭವ ಸಿದ್ಧರಾಮನಿಗಾಯಿತು. ಇತ್ತ ಸಾಯಂಕಾಲವಾಯಿತು. ಮಗನು ಮನೆಗೆ ಹಿಂದಿರುಗಲಿಲ್ಲ. ತಂದೆ ತಾಯಿಗಳು ಊರೆಲ್ಲ ಹೊಲವೆಲ್ಲ ಹುಡುಕಿದರು, ಪತ್ತೆಯಾಗಲಿಲ್ಲ. ಜಾತ್ರೆಯ ಜನರೊಡನೆ ಹೊರಟು ಹೋಗಿರಬಹುದೆಂದು ತೋರಿತು. ಚಿಕ್ಕವಯಸ್ಸು, ಏನೂ ಅರಿಯದ ಹಸುಳೆ, ಸಾಲದುದಕ್ಕೆ ತೀರ ಮೊದ್ದು; ಅಲ್ಲದೆ, ತಮಗೆ ಮುಪ್ಪಿನಲ್ಲಿ ಹುಟ್ಟಿದ ಅಪರೂಪದ ಮಗ. ಸೊನ್ನಲಾಪುರವೆತ್ತ ಶ್ರೀ ಶೈಲವೆತ್ತ! ಹಲವು ದೇವರುಗಳಿಗೆ ಹರಕೆಯನ್ನು ಹೊತ್ತರು.

---

೧೮೩. ಸಿ. ರಾ. ವ. ಪುಟ ೮.

ಸಿದ್ಧರಾಮನು ಶ್ರೀ ಶೈಲವನ್ನು ಸೇರಿ ಮಲ್ಲಿಕಾರ್ಜುನನನ್ನು ಕಂಡನು. ತನ್ನೂರಿಗೆ ಬರಬೇಕೆಂದು ಪರಮೇಶ್ವರನನ್ನು ಮುಗ್ಧ ಬಾಲಕನು ಕರೆದನು. ಒಂದು ಗೊತ್ತಾದ ದಿನ ತಾನು ಬರುವುದಾಗಿ ಮಲ್ಲಿಕಾರ್ಜುನನೂ ಮಾತು ಕೊಟ್ಟನು. ಮಲ್ಲಿಕಾರ್ಜುನನಿಗೆ ತಕ್ಕ ದೇವಾಲಯವನ್ನು ಕಟ್ಟಬೇಕೆಂದು ಸಿದ್ಧರಾಮನು ಸೊನ್ನಲಾಪುರಕ್ಕೆ ಹಿಂದಿರುಗಿದನು. ಧೂಳಿಮಾಕಾಳಯ್ಯನ ಪೂಜೆಯನ್ನು ಬಿಟ್ಟು ಶಿವಪೂಜೆ ಮಾಡಿರೆಂದು ತಂದೆ ತಾಯಿಗಳಿಗೆ ಬೋಧಿಸಿದನು. ಅವರು ಒಪ್ಪದಿರಲು, ಮನೆಯನ್ನು ಬಿಟ್ಟು, ಊರಲ್ಲಿ ಒಂದು ಮಠವನ್ನು ಕಟ್ಟಿಕೊಂಡು ಸಂನ್ಯಾಸಿಯಾದನು; ಯತಿಯಾಗಿ ಮಹಾಯೋಗಿಯಾಗಿ ಪ್ರಸಿದ್ಧ ಗುರುವಾಗಿ ಸಾವಿರಾರು ಗುಡ್ಡರನ್ನು ಸಂಪಾದಿಸಿದನು.

* "ಸಾಕಾರನಿಷ್ಠೆ ಭೂತಂಗಳೊಳಗನುಕಂಪೆ ತಾನೆ ಪರಬೊಮ್ಮ" ಎಂಬ ನಿಶ್ಚಲಜ್ಞಾನದಿಂದ ಲೋಕೋದ್ಧಾರ ಕಾರ್ಯದಲ್ಲಿ ಸಿದ್ಧರಾಮನು ತೊಡಗಿದನು. ಕಿಸಗೌತಮಿ ತನ್ನ ಮಗುವನ್ನು ಬದುಕಿಸಿಕೊಡೆಂದು ದಯಾಮಯನಾದ ಬುದ್ಧದೇವನನ್ನು ಕಣ್ಣೀರಿಟ್ಟು ಬೇಡಿಕೊಂಡಳು. ಆದರೆ ಬುದ್ಧದೇವನು "ಹುಟ್ಟಿದ ಮೇಲೆ ಸಾವು ತಪ್ಪದು, ಎಲ್ಲರೂ ಸಾಯಲೇಬೇಕು, ಅನಿತ್ಯವಾದುದಕ್ಕೆ ವೃಥಾ ಶೋಕಿಸಬೇಡ" ಎಂದು ದೃಷ್ಟಾಂತ ಪೂರ್ವಕವಾಗಿ ಬೋಧಿಸಿ ತಿಳಿವನ್ನು ನೀಡಿದನು. ಸಿದ್ಧರಾಮನು ಹಲವು ಪ್ರಾಣಿಗಳಿಗೆ, ಮನುಷ್ಯರಿಗೆ, ಜೀವದಾನಮಾಡಿ ದುಃಖವನ್ನು ಬಿಡಿಸಿದನು. ಕಡೆಗೆ ತಾಯಿ ಸತ್ತ ಬೆಕ್ಕಿನ ಮರಿ ಕುಂಯಿಗುಟ್ಟುತ್ತಿರಲು, ಅನುಕಂಪದಿಂದ ಆ ತಾಯಿ ಬೆಕ್ಕನ್ನೂ ಬದುಕಿಸಿಕೊಟ್ಟನು. ಹಲವು ದಾನ ಧರ್ಮಗಳಿಂದ ಜನರಿಗೆ ಉಪಕಾರಮಾಡುತ್ತ,

* "ಅಜ್ಞಾನಿ ಜನ್ಮವೆತ್ತು ಹೊಜಿಗಿಪ್ಪ ಪಶುಪಕ್ಷಿ ಕ್ರಿಮಿ ಕೀಟಕಾವಳಿಗಜತು ನೀರ್ಗುಡಿಯೆ ಭವವಳಿವಂತು ಕಟ್ಟುವೆಂ ಕೆಜೆಯನು"

ಎಂದು ಸಂಕಲ್ಪಮಾಡಿ ಊರ ಮಧ್ಯದಲ್ಲಿ ದೊಡ್ಡದೊಂದು ಕೆರೆಯನ್ನು ತೋಡಿಸಿ, ಸಕಲ ತೀರ್ಥಗಳನ್ನೂ ಅಲ್ಲಿಗೆ ತರಿಸಿ, ಸಕಲ ತೀರ್ಥಕ್ಷೇತ್ರಗಳ ಅಭಿಮಾನಿಯಾದ ಪರಮೇಶ್ವರನನ್ನು ಕಪಿಲ ಸಿದ್ಧ ಮಲ್ಲಿಕಾರ್ಜುನನ್ನಾಗಿ ಕೆರೆಯ ಮಧ್ಯದ ದೇವಾಲಯದಲ್ಲಿ ಪ್ರತಿಷ್ಠಿಸಿ, ಸೊನ್ನಲಾಪುರವನ್ನು ಅಭಿನವ

* ಸಿ. ರಾ. ಚಾ.

ಶ್ರೀ ಶೈಲವನ್ನಾಗಿ ಮಾಡಬೇಕೆಂದು ಕೆಲಸವನ್ನಾರಂಭಿಸಿದನು. ಕಾಮ್ಯ ಕರ್ಮವನ್ನು ಮಾಡುವಾಗ ಅದು ಯಾವ ದೇವರಿಗೆ ವಿಾಸಲಾಗಿದ್ದರೂ ಕಾಮಕ್ರೋಧಾದಿಗಳು ನಿರ್ಮೂಲವಾಗುವುದಿಲ್ಲ. ಬೇಗ ಕೆಲಸವಾಗಬೇಕು, ಚೆನ್ನಾಗಿ ಕೆಲಸವಾಗಬೇಕು, ಎಂಬ ಹಿರಿಯ ಬಯಕೆಗಳೇ ಅಡಚಣೆಗಳು ಬಂದಾಗ ಕ್ರೋಧದ ಮೂಲಗಳಾಗುತ್ತವೆ. ಎಲ್ಲ ಕಡೆಯೂ ದೇವರಿರುವ ನೆಂಬ ಅರಿವು ಸಂಕುಚಿತವಾಗಿ ತನ್ನ ದೇವಸ್ಥಾನದಲ್ಲಿಯೇ ಆತನಿರುವನೆಂಬ ಭ್ರಮೆ ಬೇರೂರುತ್ತದೆ. ತಾನು ಕಟ್ಟಿಸಿದ ದೇವಸ್ಥಾನದಲ್ಲಿ ತಾನಿಟ್ಟಿರುವ ಮಮತೆಯೇ ತನಗೆ ಶತ್ರುವಾಗುತ್ತದೆ. ಪುಣ್ಯಕಾರ್ಯ ಮುಗಿಯುವ ಹೊತ್ತಿಗೆ ಸಮತೂಕದ ಪಾಪರಾಶಿ ಬೆನ್ನುಹತ್ತಿರುತ್ತದೆ. ಪ್ರಭುದೇವನಿಗೆ ಸಿದ್ಧರಾಮನು ಪಡುತ್ತಿರುವ ಪಾಡು ಗೊತ್ತಾಯಿತು.

* "ನೂಲ ಸಂಕಲೆಗಡಿದು ಕನಕದ ।
ಕೋಳವನು ಕಾಲಿಂಗೆ ಕೀಲಿಪ ।
ಕಾಳುಮತಿಯವನಂತೆ ಸತಿಸುತ ಕೂಟ ಭಯವೆಂದು ॥
ಬಾಳಿಕೆಯನತಿಗಳೆದು ಮರಳಿಯು ।
ಬೋಳುಮಂಡೆಯ ಕೀರ್ತಿಗೋಸುಗ ।
ಕೋಳು ಹೋದನೆ ರಾಮನೆನುತಲ್ಲಮನು ಬೆಱಗಾದ ॥

* ಚಿಕ್ಕ ಸಂಸಾರವನು ಸಡಿಲಿಸಿ ।
ಹೊಕ್ಕನಲ್ಲಾ ಹಿರಿಯ ಸಂಸಾ ।
ರಕ್ಕಕಟ ವಿಖ್ಯಾತಿ ಪೂಜಾಲಾಭದಿಚ್ಛೆಯಲಿ ॥
ಸಿಕ್ಕಿಬಿದ್ದನು ಸಿದ್ಧರಾಮನು ।
ಮಿಕ್ಕ ಭವಭಾರಿಗಳನಾದಡೆ ।
ಮುಕ್ಕದೇ ವಿಧಿಯೆನುತಲಲ್ಲಮ ನೋಡಿ ಬೆಱಗಾದ"

ಹೀಗೆ ಪ್ರಭು ಬೆರಗಾಗಿ "ಮಂಡೆ ಬೋಳಾದಡೇನು ಮನ ಬೋಳಾಗ ದನ್ನಕ್ಕರ" ಎಂದುಕೊಂಡು ಯೋಗಿಯ ಸಹಜ ಲಕ್ಷಣಗಳನ್ನು ಮನದಟ್ಟು ಮಾಡಿಸಲು ಹೊರಟು ಬಂದನು. ಪ್ರಭು ಸೊನ್ನಲಾಪುರಕ್ಕೆ ಬಂದು ಕೆರೆಯ ಕೆಲಸದಲ್ಲಿದ್ದ ಗುಡ್ಡರನ್ನು ಕೆಣಕಿ ಅವರ ಗುರುವಾದ ಸಿದ್ಧರಾಮನನ್ನು ಒಡ್ಡರಾಮನೆಂದು ಅಪಹಾಸ್ಯ ಮಾಡಿದನು. ಗುಡ್ಡರು ಸಿದ್ಧರಾಮನಲ್ಲಿಗೆ

* ಪ್ರ. ಲಿಂ. ಲೀ.

ಹೋಗಿ ಯಾವನೊ ಬಡಜಂಗಮ ನಿಮ್ಮನ್ನು ಅಲ್ಲಗಳೆಯುತ್ತಿದ್ದಾನೆ— ಎಂದು ಹೇಳಲು "ಅವನು ಯಾವನೇ ಆಗಲಿ, ಹರಿಯಾದಡಾಗಲಿ ಬ್ರಹ್ಮನಾದಡಾಗಲಿ, ಅವನನ್ನು ಸುಟ್ಟುರುಹಿ ಬಿಡುತ್ತೇನೆ" ಎಂದು *ಕೋಪಾವೇಶದಿಂದ ಗರ್ಜಿಸುತ್ತ ಆ ಮಹಾ ಯೋಗಿ ಮುಂದುವರಿದನು! ಅಲ್ಲಮನು ಅದನ್ನು ನೋಡಿ ಮುಗುಳುನಗೆ ನಕ್ಕನು. ಸಿದ್ದರಾಮನ ಕೋಪ ಅಲ್ಲಮನನ್ನು ಏನೂ ಮಾಡಲಾರದೇ ಹೋಯಿತು. ಪ್ರಭುವಿನ ವಿಶಾಲಕೀರ್ತಿ ಆಗಲೇ ಕರ್ನಾಟಕದಲ್ಲೆಲ್ಲ ಹಬ್ಬಿದ್ದುದರಿಂದ ಬಂದ ಮಹಾತ್ಮನು ಪ್ರಭುವೆಂದೇ ಸಿದ್ಧರಾಮನು ತಿಳಿದುಕೊಂಡನು. ಪ್ರಭು ನಗುತ್ತ,

೧೪೪. "ಅನ್ನವನಿಕ್ಕಿ ನನ್ನಿಯ ನುಡಿದು, ಅರವಟಿಗೆಯನಿಕ್ಕಿ ಕೆರೆಯ ಕಟ್ಟಿಸಿದರೆ ಮರಣದಿಂದ ಮೇಲೆ ಸ್ವರ್ಗ ಉಂಟಲ್ಲದೆ, ಶಿವನ ನಿಜವು ಸಾಧ್ಯವಾಗದು. ಗುಹೇಶ್ವರನ ಅರಿದ ಶರಣಂಗೆ ಅವ ಫಲವೂ ಇಲ್ಲ"

ಎಂದು ಹೇಳಿದನು. ಯೋಗಿಯಾದವನು ಕೋಪವಿಲ್ಲದಿರಬೇಕು, ಪುಣ್ಯಪಾಪಗಳ ಲೇಪವಿಲ್ಲದಿರಬೇಕು ಎಂದು ಅಲ್ಲಮನು ತಿಳಿಸಿ ಕೆರೆಯನ್ನು ಕಟ್ಟಿಸುವುದರಲ್ಲಿ ನಿಪುಣನಾಗಿದ್ದ ಸಿದ್ಧರಾಮನಿಗೆ ಕೆರೆಯ ಉಪಮಾನವನ್ನೇ ಕೊಟ್ಟು, 'ನಿನ್ನ ಕೆರೆಗಿಂತ ನನ್ನಕೆರೆ ಸ್ಥಿರವಾಗಿದೆ' ಎಂದನು.

೧೪೫. "ತನುವೆಂಬ ಏರಿಗೆ ಮನವೆಂಬ ಕಟ್ಟೆ, ಆಚಾರವೆಂಬ ಸೋಪಾನ, ಪರಮಾನಂದವೆಂಬ ಜಲವ ತುಂಬಿ, ಕೆರೆಯ ಕಟ್ಟಬಲ್ಲವರನಾರನೂ ಕಾಣೆ. ನಾ ಕಟ್ಟಿದ ಕೆರೆ ಸ್ಥಿರವಾಯಿತ್ತು ಗುಹೇಶ್ವರಾ ನಿಮ್ಮಾಣೆ"

ಆದುದರಿಂದ ನೆಲವನ್ನು ಅಗೆದು ಜಲವನ್ನು ತುಂಬುವ ಬದಲು ಲಿಂಗದ ಬೆಳಕಿನ ಪರಮಾನಂದ ಜಲವನ್ನು ಆತ್ಮನಲ್ಲಿ ತುಂಬು; ಆ ಕೆರೆ ಸ್ಥಿರವಾದುದು; ಸ್ಥಾವರಲಿಂಗ ಪ್ರತಿಷ್ಠೆ, ಪೂಜೆ, ಮೊದಲಾದುವು ಸಾಮಾನ್ಯಜನರ ಉಪಾಸನಾಮಾರ್ಗ; ಯೋಗಿಯಾದವನು ಈ ಮೂರ್ತಿಪೂಜೆಯ ಅಂತಸ್ತನ್ನು ದಾಟಬೇಕು,—ಎಂದು ತಿಳಿಸಿದನು.

---

* ಪ್ರಭು ಲಿಂಗ ಲೀಲೆ, ಶೂನ್ಯ ಸಂಪಾದನೆಗಳ ಪ್ರಕಾರ. ರಾಘವಾಂಕನ ಸಿದ್ಧರಾಮ ಚಾರಿತ್ರದಲ್ಲಿ ಈ ಕೋಪದ ಸನ್ನಿವೇಶವಿಲ್ಲ.

೧೪೪—೫. ಶೂ. ಸಂ. ಪುಟ ೩೬.

ಹಲವು ಆಗಮಗಳು ಲಿಂಗಪ್ರತಿಷ್ಠೆ ಮಾಡಬೇಕೆಂದೂ, ಅದರಿಂದ ಮಹತ್ಫಲವುಂಟೆಂದೂ ಹೇಳುತ್ತವೆ. ದೇವಸ್ಥಾನಗಳ ರಚನೆಗೆ ಆವಶ್ಯಕವಾದ ವಾಸ್ತುಶಿಲ್ಪವನ್ನೂ ಚೆನ್ನಾಗಿ ವಿವರಿಸುತ್ತವೆ. ಹಿಂದೆ ಆಗಮಗಳನ್ನನುಸರಿಸಿ ಲಕ್ಷಾಂತರ ದೇವಾಲಯಗಳನ್ನೂ ಕಟ್ಟಿದ್ದಾರೆ. ಈಗಲೂ ಕಟ್ಟುತ್ತಿದ್ದಾರೆ. ಪ್ರಭು 'ಲಿಂಗಪ್ರತಿಷ್ಠೆ ಮಾಡುವವರಿಗೆ ನಾಯಕನರಕ' ಎಂದು ದೇವಾಲಯಗಳನ್ನೂ ಸ್ಥಾವರಲಿಂಗಗಳನ್ನೂ ಖಂಡಿಸಿ ಹೇಳಿದುದು ಸಿದ್ಧರಾಮನಿಗೆ ಸಿಡಿಲು ಬಡಿದಂತಾಯಿತು.

೧೮೬. "ಅಣುವಿನೊಳಗೆ ಅಣುವಾಗಿಪ್ಪಿರಿ, ಎಲೆ ದೇವಾ ನೀವು ಮನದೊಳಗೆ ಘನವಾಗಿಪ್ಪಿರಿ, ಎಲೆ ದೇವಾ ಜಗದೊಳಗೆಲ್ಲಿಯು ನೀವಿಲ್ಲದೆಡೆಯುಂಟೆ? ಎಂಬತ್ತುನಾಲ್ಕು ಲಕ್ಷ ಶಿವಾಲಯಂಗಳ ನೀವು ಮಾಡಿ ಒಳಗಿಪ್ಪುದ ಕಂಡು ನಾನು ಮಾಡಿದೆನಲ್ಲದೆ ಕಪಿಲಸಿದ್ಧಮಲ್ಲಿನಾಥಯ್ಯ, ಎನಗೆ ಬೇರೆ ಸ್ವತಂತ್ರವಿಲ್ಲವೆಂದರಿಯೆನು"

೧೮೭. "ಸಕಲ ಲಿಂಗವ ಹಿಡಿದು ಅಗಲದೆ ನಡೆ ಎಂದಿರಾಗಿ ನಡೆವುತ್ತಿದ್ದೆನು. ಲಿಂಗಪ್ರತಿಷ್ಠೆಯ ಮಾಡೆಂದು ಎನಗೆ ನಿರೂಪಿಸುತ್ತಿದ್ದ ಕಾರಣ ಮಾಡುತ್ತಿದ್ದೆನಲ್ಲದೆ ಎನಗೆ ಬೇರೆ ಸ್ವತಂತ್ರ ಉಂಟೆ? ಹಿಂದೆ ನೀವು ಕೊಟ್ಟ ನಿರೂಪ ನಿಮಗೆ ಹುಸಿಯಾದರೆ ಇನ್ನು ಮುಂದೆ ಸ್ವಯವಪ್ಪಂತೆ ನಡಿಸಾ ಕಪಿಲಸಿದ್ಧ ಮಲ್ಲಿನಾಥಯ್ಯ"

ಎಂದು ಸಿದ್ಧರಾಮನು ಹೇಳಿದನು. ಆಗಮಗಳು ಶಿವನ ಉಸಿರಲ್ಲವೆ? ಸಾಕ್ಷಾತ್ ಪರಮೇಶ್ವರನು ಶ್ರೀಶೈಲಾದಿ ಕ್ಷೇತ್ರಗಳಲ್ಲಿ ನೆಲಸಿಲ್ಲವೆ? ಮಲ್ಲಿಕಾರ್ಜುನನ ಅಪ್ಪಣೆಯ ಪ್ರಕಾರವಲ್ಲವೆ ತಾನು ಸೊನ್ನಲಾಪುರದಲ್ಲಿ ದೇವಸ್ಥಾನವನ್ನು ಕಟ್ಟಿಸುತ್ತಿರುವುದು. ಇವೆಲ್ಲ ಹುಸಿಯೆ? ಇನ್ನು ನಮಗೆ ದಿಕ್ಕಾವುದು? ಎಂದು ಪ್ರಭುವನ್ನು ಕೇಳಲು, ಪ್ರಭು ಆಗಮಗಳಲ್ಲಿರುವುದು ಸುಳ್ಳಲ್ಲ, ಆದರೆ ಆಗಮಗಳಲ್ಲಿ ಇನ್ನೂ ಹೆಚ್ಚಿನ ವಿಷಯಗಳಿವೆ,

೧೮೮. "ಕೆರೆ ದೇಗುಲಂಗಳೆಲ್ಲವು ಹಿಂದಣ ಅಡಿವಜ್ಜೆಗೊಳಗು. ಕರ್ಮಕಾಂಡ ಯೋಗಂಗಳೆಲ್ಲವು ಭವದ ತೆಕ್ಕೆಗೆ ಒಳಗು. ಹಿಂದಣ ಮುಂದಣ ಸಂದನಳಿದು, ಗುಹೇಶ್ವರ ಲಿಂಗದಲ್ಲಿ ಸಂದಿರಬೇಕು ಸಿದ್ಧರಾಮಯ್ಯ"

---

೧೮೬—೮, ಶೂ. ಸಂ. ಪುಟ ೫೬.

ಎಂದು ಪರಮಾರ್ಥವನ್ನು ಉಪದೇಶಿಸಿದನು. ಎಂತಹ ಘನತರ ವಾದ ಪುಣ್ಯಕಾರ್ಯವನ್ನೂ ಮಾಡಿದರೂ, ಆ ಪುಣ್ಯದ ಫಲ ತೀರಿದ ಮೇಲೆ ಭೂಮಿಯಲ್ಲಿ ಹುಟ್ಟಲೇಬೇಕು. ನಿಜವಾದ ಯೋಗಿಗೆ ಮಂಡೆ ಬೋಳಾಗು ವುದಿರಲಿ ಈ ಹುಟ್ಟು ಬೋಳಾಗಬೇಕು. ಆದುದರಿಂದ ಸಾಯುವುದು ತಪ್ಪುವಂತೆ, ಹುಟ್ಟುವುದು ತಪ್ಪುವಂತೆ, ಜನ್ಮ ಜನ್ಮಗಳಲ್ಲಿ ಬರುವುದು ತಪ್ಪುವಂತೆ ಜ್ಞಾನಿಯಾಗಬೇಕು. ವೇದಗಳ ಕರ್ಮಕಾಂಡವನ್ನೂ, ಆಗಮ ಗಳ ಚರ್ಯಾಪಾದವನ್ನೂ ಮೀರಿ ನಿಜವನ್ನು ಸಾಧಿಸಬೇಕು, ಎಂದು ಅಲ್ಲಮನು ಹೇಳಿದನು. ಆದರೆ ಸಿದ್ಧರಾಮನು—ಕರ್ಮದಿಂದ ಮನಸ್ಸು ಪರಿ ಪಾಕವಾಗುವುದೆಂದು ಹಿರಿಯರು ಹೇಳಿದ್ದಾರೆ, ಸತ್ಕರ್ಮಾಚರಣೆಯಿಂದ ಮನ ಸ್ಸನ್ನು ಪರಿಶುದ್ಧಗೊಳಿಸಿ ಮುಂದಿನ ಮೆಟ್ಟಲನ್ನು ಏರುವುದರಲ್ಲಿ ತಪ್ಪೇನು? ಸತ್ಕರ್ಮಾಚರಣೆಯಿಲ್ಲದಿದ್ದರೆ ಮನಸ್ಸಾದರೂ ಪಕ್ವವಾಗುವುದು ಹೇಗೆ?— ಎಂದು ಕೇಳಿದನು.

೧೮೯. "ಕೃಷಿಯ ಮಾಡಿ ಉಣ್ಣದೆ, ಹಸಿವು ಹರಿವ ಪರಿ ಇನ್ನೇಂತೋ? ಕರ್ಮ ಯೋಗವ ಮಾಡದೆ ನಿರ್ಮಲ ಸುಚಿತ್ತವನರಿವ ಪರಿ ಇನ್ನೆಂತೋ? ಬೇಯದೆ ಅಶನವನುಂಬ ಠಾವಾವುದು ಕಪಿಲ ಸಿದ್ಧ ಮಲ್ಲಿಕಾರ್ಜುನ ಲಿಂಗಕ್ಕೆ?"

ಅಲ್ಲಮನು ಈ ವಾದವನ್ನು ಸ್ವಲ್ಪ ಒಪ್ಪಿಕೊಂಡನು. ಅಹುದು ನಿರ್ಮಲ ವಾದ ಚಿತ್ತ ದೊರೆಯದಿದ್ದರೆ ಆತ್ಮಜ್ಞಾನವುಂಟಾಗುವುದಿಲ್ಲ. ನಿರ್ಮಲವಾದ ಚಿತ್ತ, ಸಾಧನೆಯಿಂದ ದೊರೆಯುತ್ತದೆ. ಆದರೆ

೧೯೦. "ಕರ್ಮವೇ ಪ್ರಾಣವೆಂದು ಮಾಡುವಾಗ ಜ್ಞಾನವನರಿವ ನೆಲೆ ಶುದ್ಧವಿನ್ನಾ ವುದು? ಸಾವನ್ನಕ್ಕ ಸಾಧನೆಯ ಮಾಡಿ, ಕಾದುವ ಠಾವಿನ್ನಾವುದು? ಅರಿದುದ ನತಿಗಳೆದು ಮೇಲರಿದುದ ಕರಿಗೊಳುತ್ತ ತುಪ್ಪವ ನೀಡಿದ ತಂಡುಲದಂತೆ ಕಾಯ ದೆಸೆ ಶುದ್ಧವಾಗಿರಬೇಕು ಗುಹೇಶ್ವರ ಲಿಂಗವನರಿವುದಕ್ಕೆ ಸಿದ್ಧರಾಮಯ್ಯ"

ಆದುದರಿಂದ ಕಡೆಯತನಕ ಕರ್ಮದಲ್ಲಿಯೇ ಮಗ್ನನಾಗಿ, ನಿರ್ಮಲ ಚಿತ್ತ ವನ್ನು ಪಡೆಯುವುದರಲ್ಲಿಯೇ ಆಯುಸ್ಸನ್ನು ಕಳೆದು ಬಿಟ್ಟರೆ, ಜ್ಞಾನೋದಯ ವಾಗುವುದೆಂದಿಗೆ? ಜ್ಞಾನಿ ತಾನಾಗಿ ಕರ್ಮಲೇಪವಾಗದಂತೆ ಇರುವುದು ಅತ್ಯಾವಶ್ಯಕ. ಹೀಗಿಲ್ಲದಿದ್ದರೆ ಗುಹೇಶ್ವರ ಲಿಂಗವನರಿಯುವುದು ಸಾಧ್ಯವಿಲ್ಲ.

---

೧೮೯—೧೯೦. ಶೂ. ಸಂ. ಪುಟ ೫೭.

ಸಿದ್ಧರಾಮನು ನಮ್ಮ ಕರ್ಮ ಒಳಗೂ ಹೊರಗೂ ಆವರಿಸಿಕೊಂಡು ಆಜೀವಪರ್ಯಂತವೂ ಕರ್ಮಿಯನ್ನಾಗಿ ಮಾಡಿರುತ್ತದೆ; ಪರವಸ್ತುವಿನ ಪೂಜೆ, ಧ್ಯಾನ, ಎಲ್ಲವೂ ಕರ್ಮಗಳೇ ಆಗಿವೆಯಲ್ಲ ಎಂದು ಆಕ್ಷೇಪಿಸಿದನು.

೯೧. "ಕೈಯಲ್ಲಿ ಹಿಡಿದು ಕಾಂಬುದು ಕರ್ಮದ ಪೂಜೆಯಲ್ಲವೆ? ಮನದಲ್ಲಿ ನೆನೆದು ಮಾಡುವುದೆಲ್ಲವು ಕಾಯದ ಕರ್ಮವಲ್ಲವೆ? ಭಾವ ಶುದ್ಧವನರಿವ ಪರಿ ಇನ್ನು ಆವುದು ಕಪಿಲ ಸಿದ್ಧ ಮಲ್ಲಿಕಾರ್ಜುನ?

ಇಷ್ಟಲಿಂಗವನ್ನು ಕರಸ್ಥಳದಲ್ಲಿಟ್ಟುಕೊಂಡು ತನ್ಮೂಲಕ ಪರವಸ್ತುವನ್ನು ಪ್ರಾಣಲಿಂಗವನ್ನಾಗಿಯೂ ಭಾವಲಿಂಗವನ್ನಾಗಿಯೂ ಕಾಣುವುದರಲ್ಲಿ ಕರ್ಮವಿದ್ದೇ ಇದೆ ಎಂದು ಸಿದ್ಧರಾಮನು ಹೇಳಲು ಅಲ್ಲಮನು 'ಅಹುದು, ಎಲ್ಲಿಯವರೆಗೆ ಈ ಬಾಹ್ಯಪೂಜೆಗಳಲ್ಲಿಯೂ, ಮನಸ್ಸಿನಲ್ಲಿ ಪ್ರತ್ಯೇಕವಾಗಿ ಪ್ರಾಣಲಿಂಗವನ್ನು ಭಾವಿಸಿಕೊಳ್ಳುವುದರಲ್ಲಿಯೂ ಕಾಲವನ್ನು ಕಳೆಯುವೆವೋ ಅಲ್ಲಿಯವರೆಗೆ ಸ್ವಯಂ ಲಿಂಗವಾಗಲನುಕೂಲವಿಲ್ಲ' ಎಂದನು. ಆದುದರಿಂದಲೇ ಈ ಕರ್ಮ ಶೃಂಖಲಗಳಿಂದ ಬಿಡುಗಡೆಯನ್ನು ಪಡೆಯಬೇಕು:

೯೨. "ಚಿನ್ನವನೊರೆಯಬಹುದಲ್ಲದೆ, ಬಣ್ಣವನೊರೆಯಬಹುದೆ? ಹೂವ ಮುಡಿಯಬಹುದಲ್ಲದೆ, ಗಂಧವ ಮುಡಿಯಬಹುದೆ? ಕರ್ಮವ ಮಾಡಬಹುದಲ್ಲದೆ ವಸ್ತುವನರಿಯಬಹುದೇ? ಗುಹೇಶ್ವರನ ನೆನೆಯಬಹುದಲ್ಲದೆ ಲಿಂಗವು ತಾನಾಗಬಾರದು ಸಿದ್ಧರಾಮಯ್ಯ"

ಸಿದ್ಧರಾಮನು ದ್ವೈತಿಯಾಗಿದ್ದುದರಿಂದ ಅದ್ವೈತವನ್ನು ಗ್ರಹಿಸದೆಯೋ, ಅದಕ್ಕೆ ಭಯಪಟ್ಟೋ ಮನಸ್ಸಿನಲ್ಲಿ ಕಳವಳಗೊಂಡಿದ್ದಾನೆ.

೯೩. "ಕಾಯ ಸೊನೆಯರತಲ್ಲದೆ ಹಣ್ಣಿನ ಸೊನೆರಸ ಚಿಹ್ನ ತೋರದು. ಕಾಯದ ಕರ್ಮವ ಮಾಡಿ ಜೀವ ಜ್ಞಾನವನರಿದು ತ್ರಿವಿಧ ಭಾವಶುದ್ಧಿಯಾದಲ್ಲದೆ ಮೇಲೆ ಕಾಣಲಿಲ್ಲ ಕಪಿಲ ಸಿದ್ಧ ಮಲ್ಲಿಕಾರ್ಜುನ ಲಿಂಗವ"

ಎಂದು ಸಿದ್ಧರಾಮನು ತನ್ನ ನಂಬಿಕೆಯನ್ನು ಹೇಳಿದನು. ಪ್ರಭು ಈ ಮಾತಿನ ಬಣಬೆ ಪ್ರಯೋಜನಕಾರಿಯಲ್ಲ—ಎಂದನು. ಕರ್ಮ ಮಾಡುತ್ತಿದ್ದೀಯೆ, ಅದರಲ್ಲೇ ಮಗ್ನನಾಗಿದ್ದೀಯೆ, ಜೀವಜ್ಞಾನವನರಿಯಲಿಲ್ಲ, ತ್ರಿವಿಧ

---

೯೧—೨. ಶೂ. ಸಂ. ಪುಟ ೫೭. ೯೩. ಶೂ. ಸಂ. ಪುಟ ೫೮.

ಭಾವಶುದ್ಧಿ ದೊರೆಕೊಳ್ಳಲಿಲ್ಲ. ಮಹಾಯೋಗಿ ಎನ್ನಿಸಿಕೊಂಡ ನೀನು ನಾನು ಬಂದಾಗ ಅಷ್ಟು ಕೋಪವನ್ನು ಪ್ರದರ್ಶಿಸಿದೆ, ನನ್ನನ್ನು ದಹಿಸುವಂತೆ ಮುಂದುವರಿದೆ. ನಿನ್ನ ಮನಸ್ಸು ಪರಿಪಕ್ವವಾಗಿದೆಯೆ? ಕಾಯದ ಕರ್ಮದಿಂದ ಏನು ಲಾಭವನ್ನು ಪಡೆದಂತಾಯಿತು? ಎಂದು ಕೇಳಲು ಸಿದ್ಧರಾಮನು ಸಿಗ್ಗಾಗಿ ತಲೆ ತಗ್ಗಿಸಿದನು.

ಸಮಾಧಾನ ಚಿತ್ತವನ್ನು ಕರುಣಿಸಬೇಕೆಂದು ಭಗವಂತನಲ್ಲಿ ಹಲವು ಬಗೆಯಾಗಿ ಸಿದ್ಧರಾಮನು ಮೊರೆಯಿಟ್ಟಿದ್ದಾನೆ. ಕೋಪತಾಪಗಳಿಂದ ಕಾವೇರದೆ, ಸ್ತೋತ್ರದಿಂದ ಉಬ್ಬದೆ, ತೆಗಳಿಕೆಯಿಂದ ಕುಸಿಯದೆ, ಸಮತೆಯಿಂದಿರಬೇಕೆಂದು ಸಿದ್ಧರಾಮನು ಪ್ರಯತ್ನಿಸಿದನು.

೧೯೪. "ಆರೇನೆಂದರೂ ಓರಂತಿಪ್ಪುದೇ ಸಮತೆ. ಆರು ಜರೆದರೂ ಅವರೆನ್ನ ಮನದ ಕಾಳಿಕೆಯ ಕಳೆದರೆಂಬುದೇ ಸಮತೆ. ಆರು ಸ್ತೋತ್ರಮಾಡಿದರೂ ಅವರೆನ್ನ ಜನ್ಮದ ಹಗೆಗಳೆಂಬುದೇ ಸಮತೆ. ಇಂತಿದು ಗುರುಕಾರುಣ್ಯ. ಮನ ವಚನ ಕಾಯದಲ್ಲಿ ಅಹಿತವಿಲ್ಲದೆ ಕಪಿಲ ಸಿದ್ಧ ಮಲ್ಲಿಕಾರ್ಜುನಯ್ಯ ನಿಮ್ಮವರ ನೀನೆಂಬುದೇ ಸಮತೆ"

೧೯೫. "ಆವನಾಗಿ ಒಬ್ಬನು ನಿಡುಮುಳ್ಳಿನ ಮೇಲೆ (ಎನ್ನ) ಹೊರಳ್ಚುಗೆ ಮೇಣು ಪಾಂಸೆಯ ಹಾಸಿನ ಮೇಲೆ ಹೊರಳ್ಚುಗೆ. ಹೊರಳ್ಚಿದೊಡೆ ಮನ ವಿಸ್ಕಂದವಾಗದೊಂದೀಯಂದದಲ್ಲಿಪ್ಪಂತಪ್ಪ ನಿಮ್ಮದೊಂದು ಸಮತಾ ಗುಣ ಎನ್ನನೆಂದು ಹೊರ್ದಿಪ್ಪುದು ಹೇಳಾ ಕಪಿಲ ಸಿದ್ಧ ಮಲ್ಲಿಕಾರ್ಜುನಾ"

೧೯೬. "ಆವನಾಗಿ ಒಬ್ಬನು ಅವಿಚಾರದಿಂದ ಶಿರಸ್ಸಿನ ಮೇಲೆ ಕೈದುವನಿಕ್ಕುಗೆ. ಮೇಣು ಗಂಧಾಕ್ಷತೆ ಪುಷ್ಪದಲ್ಲಿ ಪೂಜೆ ಮಾಡುಗೆ. ಪೂಜೆ ಮಾಡಿದೊಡೆ ಮನವಿಸ್ಕಂದವಾಗದೊಂದೀಯಂದದಲ್ಲಿಪ್ಪಂತಪ್ಪ ನಿಮ್ಮದೊಂದು ಸಮತಾ ಗುಣ ಎನ್ನನೆಂದು ಹೊರ್ದಿಪ್ಪುದು ಹೇಳಾ ಕಪಿಲ ಸಿದ್ಧ ಮಲ್ಲಿಕಾರ್ಜುನಾ"

೧೯೭. "ಆವನಾನೊರ್ವನು ನಾಸ್ತಿಕವನಾಡಿ ನಗುತಿಪ್ಪುದನು ತಾ ಕೇಳಿ ಮತ್ತಾವನಾಗಿ ಬಂದು ಪೇಳ್ವೊಡೆ, ಮನವಿಸ್ಕಂದವಾಗದೊಂದೀಯಂದದಲ್ಲಿಪ್ಪಂತಪ್ಪ ನಿಮ್ಮದೊಂದು ಸಮತಾ ಗುಣ ಎನ್ನನೆಂದು ಹೊರ್ದಿಪ್ಪುದು ಹೇಳಾ ಕಪಿಲ ಸಿದ್ಧ ಮಲ್ಲಿಕಾರ್ಜುನಾ"

---

೧೯೪—೧೯೭. ವ. ಶಾ. ಸಾ. ಭಾಗ ೧. (ಪೂ.) ಪುಟ ೧೩೯—೪೦.

೧೯೮. "ಆವನಾಗಿ ಒಬ್ಬನು ಕರವ ಪಿಡಿದು ಒಡಗೊಂಡೊಯ್ದು ಒಳ್ಳಿತ್ತನಾದಡೂ ನೀಡುಗೆ, ಮೇಣು ಮಣ್ಣನಾದಡೂ ನೀಡುಗೆ. ನೀಡಿದೊಡೆ ಮನ ವಿಸ್ಕಂದವಾಗದೊಂದೀಯಂದದಲ್ಲಿಪ್ಪಂತಪ್ಪ ನಿಮ್ಮದೊಂದು ಸಮತಾ ಗುಣ ಎನ್ನನೆಂದು ಪೊರ್ದಿಪ್ಪುದು ಹೇಳಾ ಕಪಿಲ ಸಿದ್ಧ ಮಲ್ಲಿಕಾರ್ಜುನಾ"

೧೯೯. "ಸಿರಿಯಾಯಿತ್ತೆಂದು ಉಚ್ಚ್ವಹದಿಂದುಬ್ಬದೆ, ಕೆಟ್ಟಿತೆಂದು ಮನನೊಂದು ಭಿನ್ನನಾದಂತಿರದೆ, ಮನವಿಸ್ಕಂದವಾಗದೊಂದೀಯಂದದಲ್ಲಿಪ್ಪಂತಪ್ಪ ನಿಮ್ಮದೊಂದು ಸಮತಾ ಗುಣ ಎನ್ನನೆಂದು ಪೊರ್ದಿಪ್ಪುದು ಹೇಳಾ ಕಪಿಲ ಸಿದ್ಧ ಮಲ್ಲಿಕಾರ್ಜುನಾ"

ಈ ಸಮತಾ ಗುಣ ಯಾರ ಅನುಗ್ರಹದಿಂದಾಗಲಿ ಬರತಕ್ಕದ್ದಲ್ಲ, ಸ್ವಂತಸಾಧನೆಯಿಂದ ಮೆಲ್ಲಮೆಲ್ಲನೆ ಮನಸ್ಸನ್ನು ಜಯಿಸಿಕೊಂಡು ಪಡೆಯ ಬೇಕಾದದ್ದು ಎಂದು ಪ್ರಭು ಹೇಳಿದನು. ಇದಲ್ಲದೆ ಬಡವರು ಭಾಗ್ಯ ವಂತರು, ಬ್ರಾಹ್ಮಣರು ಇತರರು, ಎಂದು ಭೇದ ಭಾವವನ್ನಿಡದೆ ಎಲ್ಲರನ್ನೂ ಸಮತಾಭಾವದಿಂದ ಕಾಣಬೇಕೆಂದೂ ಪ್ರಭು ತಿಳಿಸಿದನು. ತಾನು ಬಡಜಂಗಮನಾಗಿ ಕಾಣಿಸಿಕೊಳ್ಳದೆ ಪಂಚವಕ್ತ್ರಗಳಿಂದಲೂ ದಶಭುಜ ಗಳಿಂದಲೂ ಗೌರೀ ಸಮೇತನಾಗಿ, ನಂದಿವಾಹನನಾಗಿ, ಕಾಣಿಸಿಕೊಂಡಿದ್ದಿ ದ್ದರೆ ಸಿದ್ಧರಾಮನು ಬಹಳ ಭಕ್ತಿಯಿಂದ ಆದರಿಸುತ್ತಿದ್ದನೆಂಬುದು ಗೊತ್ತು. ಆದರೆ ಜ್ಞಾನಿ ಎಲ್ಲರಲ್ಲಿಯೂ, ಎಲ್ಲದರಲ್ಲಿಯೂ, ಭಗವಂತನ ಸಾಕ್ಷಾತ್ಕಾರ ವನ್ನು ಕಾಣಬೇಕಲ್ಲದೆ ಹೀಗೆ ಭೇದದಿಂದ ವರ್ತಿಸುವುದುಂಟೆ? ಆದುದರಿಂದ ಬರಿಯ ಕರ್ಮದಿಂದ ಫಲವೇನೂ ಇಲ್ಲ. ಸಾಕಾರನಿಷ್ಠೆ ಯಿಂದ ತಾನು ಪರಬ್ರಹ್ಮವಾಗುವುದಿಲ್ಲ. ಮನಸ್ಸಿನಲ್ಲಿ ಕಲ್ಪಿಸಿಕೊಂಡರೆ ದೊರೆ ಯದು. ದೇಹಗುಣಗಳೂ ಜೀವಗುಣಗಳೂ ನಷ್ಟವಾಗಿ, ಜ್ಞಾನ ತಲೆದೋರಿ, ಜ್ಞಾನದಿಂದ ಭಿನ್ನತೆ ಹೋಗಿ, ಮುಸುಕಿರುವ ಮಾಯೆ ಕಳಚಿ ಬೀಳಲು, ಗುಹೇಶ್ವರ ಲಿಂಗ ತಾನಲ್ಲದೆ ಬೇರಲ್ಲ ಎಂದಾಗುತ್ತದೆ. ಆದುದರಿಂದ

೨೦೦. "ದೇಹಭಾವವಳಿದಲ್ಲದೆ, ಜೀವಭಾವವಳಿಯದು. ಜೀವಭಾವವಳಿದಲ್ಲದೆ ಭಕ್ತಿಭಾವವಳವಡದು. ಭಕ್ತಿಭಾವವಳವಟ್ಟಲ್ಲದೆ, ಅರಿವು ತಲೆದೋರದು. ಅರಿವು ತಲೆದೋರಿದಲ್ಲದೆ ಕುರುಹು ನಷ್ಟವಾಗದು, ಕುರುಹು ನಷ್ಟವಾದಲ್ಲದೆ

---

೧೯೮—೧೯೯. ವ. ಶಾ. ಸಾ. ಭಾಗ ೧. (ಪೂ.) ಪುಟ ೧೩೯—೪೦.

೨೦೦. ಶೂ. ಸಂ. ಪುಟ ೬೧.

ಮಾಯೆ ಹಿಂಗದು. ಇದು ಕಾರಣ ಕಾಯದ ಜೀವದ ಹೊಲಿಗೆಯುಳಿದ ಭೇದವ ತಿಳಿಯಬಲ್ಲರೆ, ಗುಹೇಶ್ವರಲಿಂಗದ ಅರಿವು ಸಾಧ್ಯವಪ್ಪುದು ಕಾಣಾ ಸಿದ್ಧರಾಮಯ್ಯ"

ಎಂಬುದನ್ನು ಗ್ರಹಿಸಿ ಮೊತ್ತಮೊದಲು ದೇಹವಿಲ್ಲದಂತೆ ಜೀವಭಾವವಿಲ್ಲದಂತೆ ಮಾಡಿಕೊಳ್ಳಬೇಕು, ಎಂದು ಅಲ್ಲಮನು ತಿಳಿಸಿದನು. ಇರುವ ದೇಹವನ್ನು ಇಲ್ಲವೆಂದು ಮಾಡಿಕೊಳ್ಳುವುದು ಹೇಗೆ? ನಿರ್ದೇಹಿಯಾಗಿ ನಿಲ್ಲಲು ಸಾಧ್ಯವೆ? ಕರಣಗಳು ಇಂದ್ರಿಯಗಳು, ಮನಸ್ಸು ಎಲ್ಲವೂ ಇದ್ದು ಜೀವಭಾವವಳಿಯುವುದು ಹೇಗೆ? ಇದು ಸಾಧ್ಯವಲ್ಲದೆ ಇಲ್ಲ. ಆತ್ಮವನ್ನು ಹಿಂದಿಕ್ಕಿ 'ನಾನು' ಎಂಬುದು ತಾನು ದೇಹವೆಂದು ತಿಳಿದು ಪಾಡುಪಡುತ್ತದೆ, ಸುಖದುಃಖಗಳನ್ನು ಅನುಭವಿಸುತ್ತದೆ. 'ನಾನು' ಎಂಬುದು ಅಡಗಿದರೆ ದೇಹಕ್ಕೆ ಕಳವಳವೆಲ್ಲಿಯದು? ಪುಣ್ಯ ಪಾಪಗಳೆಲ್ಲಿಯುವು?

೨೦೧. "ಕಾಯದ ಕಳವಳವ ಕಾಣೆನೆಂದಲ್ಲಿ ಹೋಯಿತ್ತು. ಜೀವದ ದುಷ್ಕೃತ ದೂರವೆಂದಲ್ಲಿ ಹೋಯಿತ್ತು. ಕಾಯ ಜೀವ ಎಂಬ ಸೂತಕ ಮನ ನಿರ್ಮಲವಾದಲ್ಲಿ ಹೋಯಿತ್ತು. ಗುಹೇಶ್ವರನೆಂಬ ಲಿಂಗವನರಿಯಬೇಕಾದರೆ ನಿನ್ನೊಳಗೆ ತಿಳಿದು ನೋಡಾ, ಸಿದ್ಧರಾಮಯ್ಯ"

ಎಂದು ಅಲ್ಲಮನು ಹೇಳಲು, ಮನವನ್ನು ನಿರ್ಮಲ ಮಾಡಿದ್ದೇನೆ ಯೋಗದಿಂದ ಬ್ರಹ್ಮ ರಂಧ್ರಸ್ಥಾನದಲ್ಲಿ ಪರವಸ್ತುವನ್ನು ಕಂಡಿದ್ದೇನೆ— ಎಂದು ಸಿದ್ಧರಾಮನು ಉತ್ತರ ಕೊಟ್ಟನು. ಅದು ಕಲ್ಪಿತದ ಪರಬೊಮ್ಮ, ಪರಬೊಮ್ಮವನ್ನು ತಿಳಿದರೆ ಮಾತಿಗೆಡೆಯಿಲ್ಲ. ಅನ್ಯವನು ಇದಿರಿಟ್ಟು ನುಡಿಯುವವರಿಗೆ ಗುಹೇಶ್ವರನರಿವು ಆಗಿಲ್ಲವೆಂದೇ ಹೇಳಬೇಕು. ನೀನು ಅದೇ ಪರವಸ್ತುವಾಗಿರುವಾಗ ಮನಸ್ಸಿನಲ್ಲಿ ಬೇರೊಂದು ದೇವರನ್ನು ಕಲ್ಪನೆ ಮಾಡಿಕೊಳ್ಳುವುದೂ, ಅವನನ್ನು ಹುಡುಕಲು ಯತ್ನಿಸುವುದೂ ಎಷ್ಟು ಅವಿವೇಕ. ಜ್ಞಾನಿಯಾದವನು ಸ್ವಸ್ವರೂಪವನ್ನು ತಿಳಿದು ಅದರ ಆನಂದಾನುಭವದಲ್ಲಿ ಎರಡಿಲ್ಲದಾಗುವನು. ಮನ ನಿರ್ಮಲವಾಗುವುದೆಂದರೆ ಸ್ವಯಂ ಲಿಂಗವಾಗುವುದು. ಇದನ್ನು ತಿಳಿಯದೆ

೨೦೧. ಶೂ. ಸಂ. ಪುಟ ೬೧.

೨೦೨. "ಮನವ ತೊಳೆದು, ನಿರ್ಮಲವ ಮಾಡಿಹೆನೆಂಬ ಯೋಗವೆಂತುಟೊ? ಮನವ ಹಿಡಿದು ತಡೆದಿಹೆನೆಂಬವರ ಮರುಳ್ಮಾಡಿ ಕಾಡಿತ್ತು ನೋಡಾ ಮನವು. ಮನವ ವಿಕಲ್ಪಜ್ಞಾನದಿಂದ ಅರಿದು ಅದ ಶುದ್ಧವ ಮಾಡಿಹೆನೆಂಬುದು ತಾನೆ ಮನ ನೋಡಾ! ನಮ್ಮ ಗುಹೇಶ್ವರ ಲಿಂಗದ ಅನುವನರಿದಿಹೆನೆಂದರೆ ಮನವಿಲ್ಲದಿರಬೇಕು ನೋಡಾ ಸಿದ್ಧರಾಮಯ್ಯ"

೨೦೩. "ಮನವುಂಟೇ ಮರುಳೆ ಶಿವಯೋಗಿಗೆ? ಮತ್ತೊಮ್ಮೆ ಮನಮಗ್ನ ಉಂಟೆ ಶಿವಯೋಗಿಗೆ? ಇಲ್ಲದ ಮನ ಉಂಟೆಂದು ನುಡಿದು ಅಡಗಿಸಿದೆನೆಂಬ ಮಾತು ಮನವ ನೆಲೆಮಾಡಿ ತೋರುತ್ತಿದೆ. ಗುಹೇಶ್ವರನನರಿದ ಶರಣಂಗೆ ತೋರಲಿಲ್ಲ ಅಡಗಲಿಲ್ಲ ಕೇಳಾ"

ಎಂದು ಅಲ್ಲಮನು ತಿಳಿಸಿದನು. ಸಿದ್ಧರಾಮನಿಗೆ ಈಗ ಸಂಕಟಕ್ಕಿಟ್ಟು ಕೊಂಡಿತು. ಕಪಿಲಸಿದ್ಧ ಮಲ್ಲಿಕಾರ್ಜುನನ್ನು ಸದಾ ಮನಸ್ಸಿನಲ್ಲಿ ಸೆರೆ ಹಿಡಿದು ಆ ಪರಮಾತ್ಮನ ಧ್ಯಾನ ಪೂಜೆಗಳಿಂದ ಆನಂದಾನುಭವ ಮಾಡುತ್ತಿದ್ದ ತನಗೆ ಗತಿಯೇನು? ಆ ಆನಂದಕ್ಕಿಂತ ಹೆಚ್ಚಿನದು ಎಲ್ಲಿದೆ?

೨೦೪. "ಮನಮಗ್ನವಾದ ಯೋಗವೆಂದಡೇನು ಕೊರತೆ ಹೇಳಾ ಎಲೆ ಅಯ್ಯ? ಮನವಿಲ್ಲದ ಬಚ್ಚ ಬರಿಯ ಬೊಮ್ಮವೆಂದಡೇನು ಹೆಚ್ಚು ಹೇಳಾ ಎಲೆ ಅಯ್ಯ? ನುಡಿದ ಮಾತಿನಲ್ಲಿ ವಿವರ ತೋರುತ್ತಿದೆ ಎಂದಡೆ ತಾತ್ಪರ್ಯವಂತಪ್ಪುದೆ ಕಪಿಲ ಸಿದ್ಧ ಮಲ್ಲಿನಾಥ?"

ಎಂದು ಕೇಳಿದನು. ಅದಕ್ಕೆ ಪ್ರಭು

೨೦೫. "ಮನಮಗ್ನವೆಂತಪ್ಪುದು, ಅಂತೆ ಇರಬೇಕಲ್ಲದೆ, ಮತ್ತೊಂದು ಮನವೆಂಬುದುಂಟೆ ಹೇಳಾ! ಅರಿದು ಮರೆದುದ ಅರಿದು ಮರೆದೆನೆಂಬ ಜ್ಞಾನವುಂಟೆ? ಗುಹೇಶ್ವರಲಿಂಗ ಅರಿದೆನೆಂಬಲ್ಲಿಯೇ ಮನವ ಮರೆಮಾಡಿ ಕಾಡುವನು"

ಮನವೇ ಲಿಂಗ; ಲಿಂಗದಂತಿರಬೇಕಲ್ಲದೆ, ಲಿಂಗವೆಂಬುದೊಂದು, ಮನವೆಂಬುದೊಂದು ಉಂಟೆ? ಜ್ಞಾನ, ಜ್ಞಾತೃ, ಜ್ಞೇಯ ಈ ತ್ರಿಪುಟಿಗಳೊಂದಾದರೆ ಮನವುಂಟೆ? ಅಂಗ ಲಿಂಗವಾದ ಬಳಿಕ ಮನಸ್ಸನ್ನು

---

೨೦೨. ಶೂ. ಸಂ. ಪುಟ ೬೨. ೨೦೩. ಶೂ. ಸಂ. ಪುಟ ೬೫.

೨೦೪—೫. ಶೂ. ಸಂ. ಪುಟ ೬೫.

ಎಲ್ಲಿ ಮಗ್ನ ಮಾಡಿಸುವುದು? ಯಾವುದನ್ನು ಸ್ತೋತ್ರ ಮಾಡುವುದು? ಎಂದು ಸಿದ್ಧರಾಮನನ್ನು ಕೇಳಿದನು. ಅನೇಕ ವರ್ಷಗಳಿಂದ ಸಕಲನಾದ ಮಾಹೇಶ್ವರನನ್ನೂ, ಅವನ ಪಂಚವಿಂಶತಿ ಲೀಲೆಗಳನ್ನೂ ಭಕ್ತಿಯಿಂದ ಕಾಣುತ್ತ, ಆ ಮಲ್ಲಿಕಾರ್ಜುನನಿಗೆ ದಿವ್ಯವಾದೊಂದು ಆಲಯವನ್ನು ಕಟ್ಟಿಸುತ್ತಿದ್ದ ಸಿದ್ಧರಾಮನು, ಬೆಚ್ಚಿ ಬೆದರಿ ಆ ದೇವರು ಬೇರೆ ಇಲ್ಲವೆ? ತಾನೇ ದೇವರಾಗಿದ್ದರೆ, ಇನ್ನು ಯಾರಿಗೆ ಹಂಬಲಿಸುವುದು? ಮತ್ತೆ ಯಾರಿಗೆ ಆಲಯವನ್ನು ಕಟ್ಟುವುದು? ಎಂದು ಚಿಂತಿಸುತ್ತ,

೨೦೬. "ಅಂಗದಂತೆ ಲಿಂಗ, ಲಿಂಗದಂತೆ ಅಂಗವಾದ ಬಳಿಕ, ಅಂಗದಂತೆ ಲಿಂಗೈಕ್ಯ ಲಿಂಗದಂತೆ ಅಂಗೈಕ್ಯ. ಮನವೇ ಲಿಂಗ ಲಿಂಗವೇ ಮನವಾದ ಬಳಿಕ, ಮಾತು ಮಾತುಗಳೆಲ್ಲ ಹೊಳ್ಳಾದ ಕಾರಣ ಲಿಂಗೈಕ್ಯವೆ? ಸ್ವರಶಬ್ದ ಸಂದಣಿಗೆ ಇನ್ನು ತೆರಹುಂಟೆ? ಕಪಿಲ ಸಿದ್ಧ ಮಲ್ಲಿನಾಥ, ಇನ್ನು ನಿಮ್ಮ ದೇವರೆಂದು ಅರಸಲುಂಟೆ ಇಲ್ಲವೇ ಎಂಬುದನು ತಿಳುಹಿಕೊಡಾ ಎಲೆ ಅಯ್ಯಾ".

ಎಂದು ದೈನ್ಯದಿಂದ ಕಣ್ಣೀರಿಕ್ಕಿದನು. ಸಿದ್ಧರಾಮನ ಮನಸ್ಸಿನ ಕಳವಳವನ್ನು, ದುಃಖವನ್ನು, ನೋಡಿ ಪ್ರಭು ಕರಗಿದನು. ಆದರೆ ತಾನು ಕಂಡುಕೊಂಡಿದ್ದ ಅದ್ವೈತಸತ್ಯದ ಅನುಭವವನ್ನು ಸಿದ್ಧರಾಮನಿಗೆ ಮಾಡಿಕೊಡಬೇಕೆಂದು,

೨೦೭. ಕರ್ಪುರದ ಗಿರಿಯನುರಿ ಹಿಡಿದ ಬಳಿಕ ಇದ್ದಿಲುಂಟೆ? ಮಂಜಿನ ಶಿವಾಲಯಕ್ಕೆ ಬಿಸಿಲ ಕಲಶ ಉಂಟೆ? ಕೆಂಡದ ಗಿರಿಯ ಅರಗಿನ ಬಾಣದಲೆಚ್ಚಡೆ ಮರಳಿ ಬಾಣವನರಸಲುಂಟೆ? ಗುಹೇಶ್ವರಲಿಂಗವನರಿದ ಬಳಿಕ ದೇವರೆಂದು ಅರಸಲುಂಟೆ?"

ಎಂದು ಹೇಳಿ ಆತನನ್ನು ಅನುಗ್ರಹಿಸಿನು. ಸಿದ್ಧರಾಮನು ಕೂಡಲೆ ನಿರ್ವಿಕಲ್ಪ ಸಮಾಧಿಸ್ಥಿತಿಯಲ್ಲಿ ಮೈಮರೆತನು.

---

೨೦೬. ಶೂ. ಸಂ. ಪುಟ ೬೫. ೨೦೭. ಶೂ. ಸಂ. ಪುಟ ೬೬.

೨೦೮. "ನಿರ್ವಿಕಲ್ಪ ಅದ್ವೈತವ ನೋಡಿರೆ. ಬೆಳಗಿನ ಬೆಳಗು ಅಡಗಿತ್ತು ನೋಡಿರೆ. ಚಂದ್ರ ಸೂರ್ಯರು ಭೂಲೋಕದೊಳಂದಾರುವ ಕಾಣೆ. ಜ್ಯೋತಿಯಿಲ್ಲದ ಬೆಳಗಿನ ಪ್ರಭೆಯೋ ಗುಹೇಶ್ವರ ಲಿಂಗದಲ್ಲಿ ಸಿದ್ಧರಾಮಯ್ಯ ದೇವರ ಮಹಾ ಘನವ ನಾನೇನೆಂಬೆನು"

ಎಂದು ಅಲ್ಲಮಪ್ರಭು ಸಿದ್ಧರಾಮನನ್ನು ಹೊಗಳಿದನು. ಸಿದ್ಧರಾಮನು ಎಚ್ಚತ್ತು * ಕೆಲವು ಕಾಲದ ಮೇಲೆ ಕೆರೆಯ ಮಧ್ಯದ ದೇವಸ್ಥಾನದ ಹಿಂದೆ ಗುಹೆಯನ್ನು ತೋಡಿಸಿದನು. ತನ್ನ ಶಿಷ್ಯರಿಗೆಲ್ಲ ಮಲ್ಲಿಕಾರ್ಜುನನ ಸೇವೆಯನ್ನು ತಪ್ಪದೆ ಮಾಡುತ್ತಿರಿ ಎಂದು ಹೇಳಿ ತಾನು ಆ ಗುಹೆಯಲ್ಲಿ ಸಮಾಧಿಸ್ಥನಾಗಿ ಲಿಂಗೈಕ್ಯನಾದನು.



೨೦೮. ಶೂ. ಸಂ. ಪುಟ ೬೭.

* ಸಿದ್ಧರಾಮನ ಜೀವನ ಚರಿತ್ರೆಯನ್ನು ವೀರಶೈವ ಕವಿಗಳು ಒಂದೇ ಪ್ರಕಾರವಾಗಿ ಹೇಳಿಲ್ಲ. ಸಿದ್ಧರಾಮನು ಕಲ್ಯಾಣಕ್ಕೆ ಹೋದದ್ದು, ಅಲ್ಲಿ ಚೆನ್ನಬಸವನಿಂದ ಇಷ್ಟಲಿಂಗ ಧಾರಣವಾದದ್ದು, ಮೊದಲಾದುವನ್ನು ನಾವು ಪ್ರಸ್ತಾಪಿಸಿಲ್ಲ. . ರಾಘವಾಂಕನು ಈ ಭಾಗಗಳನ್ನು ತನ್ನ ಸಿದ್ಧರಾಮ ಚಾರಿತ್ರದಲ್ಲಿ ಹೇಳಿಲ್ಲ. ಇದೊಂದು ದೊಡ್ಡ ಸಮಸ್ಯೆ.

೬ನೆಯ ಪ್ರಕರಣ

## ಶರಣ ಸತಿ ಲಿಂಗ ಪತಿ—ಮಹದೇವಿಯಕ್ಕ

ಮಹದೇವಿಯಕ್ಕನ ಜೀವನ ಚರಿತ್ರೆ ಹೆಣ್ಣಿನ ಗೌರವಸಾಧನೆಯ, ಹೆಣ್ಣಿನ ಸ್ವಾತಂತ್ರ್ಯಸಾಧನೆಯ, ಹೆಣ್ಣಿನ ಪರಮಾರ್ಥ ಸಾಧನೆಯ, ಒಂದು ಮಹಾ ಪ್ರಕರಣ. ಶಿವಮೊಗ್ಗ ಪ್ರಾಂತದಲ್ಲಿ ಅನಾದಿ ರಾಜಧಾನಿಯೆಂದು ಹಿಂದೆ ಪ್ರಸಿದ್ಧವಾಗಿ ಮಹಾ ವೈಭವದಿಂದ ಬಾಳಿದ ಬಳ್ಳಿಗಾವೆಯ ಸಮೀಪದಲ್ಲಿ ಆಕೆ ಜನಿಸಿದಳು. ಉಡುತಡಿ ಎಂಬುದು * ಬಳ್ಳಿಗಾವೆಗೆ ಐದಾರು ಮೈಲಿಗಳ ದೂರದಲ್ಲಿದೆ. ಆಕೆಯ ತಂದೆತಾಯಿಗಳು "ಶಿವಭಕ್ತ ಶಿವಭಕ್ತೆ." ಮಹದೇವಿಯಕ್ಕ ಚಿಕ್ಕಂದಿನಿಂದಲೂ ಶಿವಭಕ್ತಿಯುಕ್ತಳಾಗಿ ಚೆನ್ನಮಲ್ಲಿಕಾರ್ಜುನನ ಹಂಬಲನ್ನು ಹಚ್ಚಿಕೊಂಡು, ಎಳತನದ ಬಾಲ ಲೀಲೆಯ ಮನೋಭಾವದಿಂದಲೊ, ಸಂಸ್ಕಾರ ವಿಶೇಷದಿಂದಲೊ, ದೈವ ಸಂಕಲ್ಪದಿಂದಲೊ, ಪರಮಾತ್ಮನನ್ನೇ ಮದುವೆಯಾಗಬೇಕೆಂದಿದ್ದಳು. ಪರ ಮಾತ್ಮನು ಸಾಕ್ಷಾತ್ತಾಗಿ ಎದುರಿಗೆ ಬಂದು ಮದುವೆ ಮಾಡಿಕೊಳ್ಳುವನೆಂದು ಮುಗ್ಧತನದಿಂದ ಭಾವಿಸಿ ಮನುಷ್ಯರು ಯಾರನ್ನೂ ಗಂಡನನ್ನಾಗಿ ಸ್ವೀಕರಿ ಸಲು ಒಲ್ಲದೆ ಹಾಗೆಯೇ ಬೆಳೆದು ಯೌವನವತಿಯಾಗಿದ್ದಳು. ಹೀಗೆ ಭಾವಿ ಸುತ್ತಿದ್ದ ಮಹದೇವಿಯಕ್ಕನಿಗೆ ಆ ಗಂಡನನ್ನು ದೊರಕಿಸಿಕೊಡುವುದು ಹೇಗೆಂದು ತಂದೆತಾಯಿಗಳು ಚಿಂತಿಸುತ್ತಿದ್ದರು. ಆಕೆಗಾದರೋ "ಶರಣ ಸತಿ ಲಿಂಗ ಪತಿ" ಎಂಬ ಭಾವ ಸ್ವಭಾವತಃ ಅಂಕುರಿಸಿ ಪಲ್ಲವಿಸಿತ್ತು. ಹೀಗೆ ಚೆನ್ನಮಲ್ಲಿಕಾರ್ಜುನನಲ್ಲಿ ಮಗ್ನಮಾನಸಳಾಗಿ ಸುಂದರಿಯಾಗಿ, ಯೌವನ ವತಿಯಾಗಿ, 'ಪುಟವನಿಕ್ಕಿದ ಮಿಸುನಿ'ಯಂತಿರಲು, ಆ ಊರಿನ ದೊರೆಯಾದ ಕೌಶಿಕನು ಒಂದು ದಿನ ವೈಹಾಳಿಯಿಂದ ಹಿಂದಿರುಗುತ್ತ ಮಹದೇವಿಯನ್ನು ನೋಡಿ, ಒಡನೆಯೆ ಮೋಹಿಸಿ, ಆಕೆಯನ್ನು ಮದುವೆಯಾಗಬೇಕೆಂದು ಬಯಸಿದನು. ಪ್ರೇಮಭಿಕ್ಷೆ ರಾಜಾಜ್ಞೆಯಾಯಿತು. ಮಹದೇವಿಯಕ್ಕನ

---

* ನೈಜಾಂ ರಾಜ್ಯದಲ್ಲಿ ಕಲ್ಯಾಣ ಪಟ್ಟಣಕ್ಕೆ ಸಮೀಪವಾಗಿ ಉಡುತಡಿ ಇರುವು ದೆಂದು ಕೆಲವರ ಅಭಿಪ್ರಾಯ.

ತಂದೆತಾಯಿಗಳು ಸಂಕಟಕ್ಕೊಳಗಾದರು. ಅದನ್ನು ಸೈರಿಸಲಾರದೆ ಶಿವಭಕ್ತರ ನೋವು ತನ್ನ ನೋವು ಎಂದುಕೊಂಡು, ಮಹದೇವಿ ಮದುವೆಗೆ * ಒಪ್ಪಿಕೊಂಡಳು. ಆದರೆ ತನಗೆ ಪೂಜಾಸ್ವಾತಂತ್ರ್ಯ ಗಳಿರಬೇಕೆಂದೂ, ದೊರೆ ಮೂರು ತಪ್ಪುಗಳನ್ನು ಮಾಡಿದರೆ ತಾನು ಬಿಟ್ಟು ಹೋಗುವುದಾಗಿಯೂ ನಿಯಮಗಳನ್ನು ಹಾಕಿದಳು. ಹೆಂಗಸಿಗಿರುವ ಪಾರ ತಂತ್ರ್ಯದಲ್ಲಿ ಸ್ವಲ್ಪ ಸ್ವಾತಂತ್ರ್ಯವನ್ನು ಗಳಿಸಲು ಪ್ರಯತ್ನ ಪಟ್ಟಳು. ಕೌಶಿಕನು ಒಪ್ಪಿಕೊಂಡನು. ಆದರೆ ಆಕೆಯದು ಪರಮಾರ್ಥ ಸಂಸಾರ, ಹಗಲಿರುಳು ಚೆನ್ನಮಲ್ಲಿಕಾರ್ಜುನನ ಧ್ಯಾನ, ವಿರಹದ ಮೊರೆ, ಈ ಲೌಕಿಕ ಬಂಧನದಿಂದ ಮುಕ್ತಳನ್ನಾಗಿ ಮಾಡೆಂಬ ದೀನಾಲಾಪ. ಕೌಶಿಕನಾದರೊ ಲೌಕಿಕ ಸಂಸಾರವನ್ನು ನಡಸಬೇಕೆಂದು ಆಕೆಯನ್ನು ಮದುವೆಯಾದುದು! ಈ ವಿರಸ ಸಂಸಾರ ಎಷ್ಟುಕಾಲ ನಡೆದೀತು? ಆಕೆಯನ್ನು ಕೇವಲ ಭೋಗ ಸಾಮಗ್ರಿಯೆಂದು ಭಾವಿಸಿ ವ್ರತಭಂಗಮಾಡಿದನೋ ಹೇಗೋ ಅವನು ಮೂರು ತಪ್ಪುಗಳನ್ನು ಮಾಡಿದನು. ಮಹದೇವಿಯಕ್ಕ ಸಂಸಾರತ್ಯಾಗ ಮಾಡಿ, ವಿರಕ್ತಳಾಗಿ, ಚೆನ್ನಮಲ್ಲಿಕಾರ್ಜುನನನ್ನು ಹುಡುಕಿಕೊಂಡು ಹೊರಟಳು.

೨೦೯. "ಅಜಕೋಟಿ ವರುಷದವರೆಲ್ಲರು ಹಿರಿಯರೆ? ಹುತ್ತೇರಿ ಬೆತ್ತ ಬೆಳೆದ ತಪಸ್ವಿಗಳೆಲ್ಲರು ಹಿರಿಯರೆ? ನಡು ಮುರಿದು ಗುಡುಗೂರಿ ತಲೆ ನಡುಗಿ, ನರೆ ತೆರೆ ಹೆಚ್ಚಿ ಮತಿಗೆಟ್ಟು ಒಂದನಾಡಹೋಗಿ ಒಂಬತ್ತನಾಡುವ ಅಜ್ಞಾನಿ ಗಳೆಲ್ಲರು ಹಿರಿಯರೆ? ಅನುವರಿದು ಘನವ ಬೆರಸಿ ಹಿರಿದು ಕಿರಿದು ಎಂಬ ಭೇದವ ಮರೆದು ಕೂಡಲ ಚೆನ್ನ ಸಂಗಯ್ಯನಲ್ಲಿ ಬೆರಸಿ ಬೇರಿಲ್ಲದಿಪ್ಪ ಹಿರಿಯ ತನ ನಮ್ಮ ಮಹದೇವಿಯಕ್ಕಂಗಾಯಿತ್ತು"

ಎಂದು ಚೆನ್ನಬಸವಣ್ಣ ಹೊಗಳಿದ ಮಹದೇವಿಯಕ್ಕನಿಗೆ ಆಗ ಹದಿನಾರು ಅಥವಾ ಹದಿನೆಂಟು ವರ್ಷ ವಯಸ್ಸಿದ್ದಿರಬಹುದು. ಆ ವಯಸ್ಸಿಗೆ ಮಹದೇವಿಯಕ್ಕ ತನುವಿನಾಸೆಯನ್ನು ಬಿಟ್ಟು ಮನಸ್ಸನ್ನು ಜಯಿಸಿ

---

* ಹರಿಹರನ ಮಹದೇವಿಯಕ್ಕನ ರಗಳೆಯನ್ನು ಅನುಸರಿಸಿ ಬರೆಯಲಾಗಿದೆ. ಪ್ರಭುಲಿಂಗಲೀಲೆಯಲ್ಲಿ ಮದುವೆಯ ವಿಷಯ ಬೇರೆ ರೀತಿ ಇದೆ (ಪ್ರಭುಲಿಂಗ ಲೀಲೆಯ ಸಂಗ್ರಹದ ಪೀಠಿಕೆ ನೋಡಿ).

೨೦೯. ಶೂ. ಸಂ. ಪುಟ ೨೪೯.

ಜ್ಞಾನಮೂರ್ತಿಯಾಗಿದ್ದಳು. ತಂದೆತಾಯಿಗಳು ನೆಂಟರಿಷ್ಟರು ಎಲ್ಲರೂ ಸೇರಿ,—ಈ ವಯಸ್ಸಿಗೆ ಇದೇನು ವೈರಾಗ್ಯ! ಇದೇನು ವೇಷ! ಹಿಂದಿರುಗು. ಒಬ್ಬಳೇ ಎಲ್ಲಿಗೆ ಹೋಗುವೆ? ಚೆನ್ನಮಲ್ಲಿಕಾರ್ಜುನನನ್ನು ನೀನು ಕಾಣಲಾಗುವುದೇ? ಚಿಕ್ಕಂದಿನಿಂದ ಸುಖವಾಗಿ ಬೆಳೆದವಳು, ಕಷ್ಟಗಳನ್ನರಿಯದವಳು, ಯೌವನದಲ್ಲಿರುವ ಸುಂದರಿ, ಪರದೇಸಿಯಂತೆ ಅಲೆಯುತ್ತ ಹೋಗುವುದುಂಟೆ? ಇಂಥ ಹುಚ್ಚುಧೈರ್ಯವನ್ನು ಮಾಡಬಾರದು ಎಂದು ವಿವೇಕವನ್ನು ಹೇಳಿದರು. ಮಾಯೆಯೊಂದು ಮನಸ್ಸನ್ನು ಹೊಕ್ಕು ಹಿರಿಯರ ಮಾತನ್ನು ಕೇಳು, ರಾಜ್ಯೈಶ್ವರ್ಯಗಳನ್ನು ತೊರೆಯಬೇಡ, ಸುಖಭೋಗಗಳನ್ನು ತ್ಯಜಿಸಬೇಡ, ಎಂದು ದುರ್ಬೋಧನೆ ಮಾಡಿತು. ಆದರೆ ಮಹದೇವಿಯಕ್ಕ ಯಾರ ಮಾತನ್ನೂ ಕೇಳಲಿಲ್ಲ, ಹಿಂದಿರುಗಲಿಲ್ಲ. ಚೆನ್ನಮಲ್ಲಿಕಾರ್ಜುನನಿದ್ದಾನೆ, ನನ್ನನ್ನು ನೋಡಿಕೊಳ್ಳುತ್ತಾನೆ, ನಾನು ಆತನಿಗೆ ಮೀಸಲು,

೨೧೦. "ಹಸಿವಾದೊಡೆ ಭಿಕ್ಷಾನ್ನಂಗಳುಂಟು. ತೃಷೆಯಾದೊಡೆ ಕೆರೆ ಹಳ್ಳ ಬಾವಿಗಳುಂಟು. ಶಯನಕ್ಕೆ ಹಾಳು ದೇಗುಲಗಳುಂಟು. ಚೆನ್ನ ಮಲ್ಲಿಕಾರ್ಜುನಯ್ಯ ಆತ್ಮಸಂಗಾತಕ್ಕೆ ನೀನೆನಗುಂಟು"

ಇನ್ನು ಯಾರ ಹಂಗೇನು ತನಗೆ? ಎಂದು ಹೇಳುತ್ತ ಹೊರಟಳು. ಹಿಂದೆ ಚೆನ್ನಮಲ್ಲಿಕಾರ್ಜುನನೇ ಕೈಬಿಟ್ಟು ಕೌಶಿಕನಿಗೆ ಒಪ್ಪಿಸಿದನು. ಪುನಃ ಚೆನ್ನಮಲ್ಲಿಕಾರ್ಜುನ ಕೈಬಿಡುವುದಾದರೆ ತಾನು ಪ್ರಾಣವನ್ನು ಧರಿಸಲುಂಟೆ? ಆದುದರಿಂದ ನಾನು ಯಾರಿಗೂ ಹೆದರುವುದಿಲ್ಲ. ಹೆಚ್ಚಾಗಿ ಕಾಡಿದರೆ ಪ್ರಾಣಬಿಡುವುದೇ ಸರಿ,

೨೧೧. "ಆರೂ ಇಲ್ಲದವಳೆಂದು ಅಳಿಗೊಳಲು ಬೇಡ ಕಂಡಯ್ಯ. ಏನು ಮಾಡಿದರೆಯೂ ನಾನಂಜುವಳಲ್ಲ. ತರಗೆಲೆಯ ಮೆಲ್ಲಿದು ನಾನಿಹೆನು. ಸುರಗಿಯ ಮೇಲೊರಗಿ ನಾನಿಹೆನು. ಚೆನ್ನ ಮಲ್ಲಿಕಾರ್ಜುನಯ್ಯ, ಕರಕಡೆ ನೋಡಿದಡೆ ಒಡಲನು ಪ್ರಾಣವನು, ನಿಮಗೊಪ್ಪಿಸಿ ಶುದ್ಧಳಹೆನು"

ಎಂದು ಧೈರ್ಯಮಾಡಿಕೊಂಡಳು. ಒಳಗೆ ಹೊರಗೆ, ಎಲ್ಲ ಕಡೆಯೂ ಚೆನ್ನಮಲ್ಲಿಕಾರ್ಜುನ ಇರುವನೆಂದು ನಂಬಿ, ಆತನನ್ನು ಧ್ಯಾನಿಸುತ್ತ, ಕರೆಯುತ್ತ, ಹಾಡುತ್ತ, ಇನ್ನು ಸಂಸಾರ ವಿಚ್ಛೇದವಾಯಿತು, ಬಂದು ಉದ್ಧರಿಸು ಎಂದು ಬೇಡುತ್ತ,

೨೧೦. ಮ. ದೇ. ವ. ಪುಟ ೨೪. ೨೧೧. ಮ. ದೇ. ವ. ಪುಟ ೨೪.

೨೧೨. "ವನವೆಲ್ಲ ನೀವೆ. ವನದೊಳಗಣ ದೇವತರುವೆಲ್ಲ ನೀವೆ. ತರುವಿನೊಳ ಗಾಡುವ ಖಗಮೃಗವೆಲ್ಲ ನೀವೆ. ಚೆನ್ನ ಮಲ್ಲಿಕಾರ್ಜುನ ಸರ್ವಭರಿತನಾಗಿ ಎನಗೆ ಮುಖದೋರ."

೨೧೩. "ಅಳಿ ಸಂಕುಳವೇ, ಬೆಳುದಿಂಗಳೇ, ಕೋಗಿಲೆಯೇ, ನಿಮ್ಮನೆಲ್ಲರನು ಒಂದು ಬೇಡುವೆನು. ಎನ್ನೊಡೆಯ ಚೆನ್ನ ಮಲ್ಲಿಕಾರ್ಜುನ ದೇವರ ಕರೆದು ತೋರಿರೆ"

೨೧೪. "ಚಿಲಿಮಿಲಿ ಎಂದೋದುವ ಗಿಳಿಗಳಿರಾ, ನೀವು ಕಾಣಿರೆ, ನೀವು ಕಾಣಿರೆ? ಸರವೆತ್ತಿ ಪಾಡುವ ಕೋಗಿಲೆಗಳಿರಾ, ನೀವು ಕಾಣಿರೆ ನೀವು ಕಾಣಿರೆ? ಎರಗಿ ಬಂದಾಡುವ ತುಂಬಿಗಳಿರಾ, ನೀವು ಕಾಣಿರೆ ನೀವು ಕಾಣಿರೆ? ಕೊಳನ ತಡಿ ಯೊಳಾಡುವ ಹಂಸಗಳಿರಾ, ನೀವು ಕಾಣಿರೆ, ನೀವು ಕಾಣಿರೆ? ಗಿರಿಗಂಪ್ವರ ದೊಳಾಡುವ ನವಿಲುಗಳಿರಾ, ನೀವು ಕಾಣಿರೆ, ನೀವು ಕಾಣಿರೆ? ಚೆನ್ನ ಮಲ್ಲಿ ಕಾರ್ಜುನನೆಲ್ಲಿರ್ದಿಹನೆಂದು ನೀವು ಹೇಳಿರೆ"

ಎಂದು ಅಂಗಲಾಚುತ್ತ ಕಾಡಿನಲ್ಲಿ ತೊಳಲುತ್ತಿದ್ದಾಳೆ. ಸಂತೋಷದಿಂದ ಗೀತಗಳನ್ನು ಹಾಡುತ್ತ ಕುಣಿಯುತ್ತ ಆಡುತ್ತ ನಲಿಯುತ್ತ ಸಂಭ್ರಮಗೊಳ್ಳುತ್ತ ಗಿಳಿ ಕೋಗಿಲೆ ಭೃಂಗ ಹಂಸೆ ನವಿಲು ಆ ಭಗವಂತನನ್ನು ಕಾಣುತ್ತಿವೆಯಲ್ಲ! ಅರಣ್ಯದ ಪಕ್ಷಿಗಳಿಗೆಲ್ಲ ಗೋಚರನಾಗಿ ನನಗೆ ಮಾತ್ರ ಅಗೋಚರನಾಗಿ ಕೋಟಲೆಗೊಳಿಸುತ್ತಿರುವುದು ನ್ಯಾಯವೇ ಚೆನ್ನಮಲ್ಲಿಕಾರ್ಜುನ?

೨೧೫. "ಆಲಿಸೆನ್ನ ಬಿನ್ನಪವ, ಲಾಲಿಸೆನ್ನ ಬಿನ್ನಪವ, ಪಾಲಿಸೆನ್ನ ಬಿನ್ನಪವ, ಏಕೆನ್ನ ಮೊರೆಯ ನೋಡೆ ಎನ್ನ ದುಃಖವ ಚೆನ್ನ ಮಲ್ಲಿಕಾರ್ಜುನಯ್ಯ"

ಎಂದು ಪರಿತಾಪಪಡುತ್ತ, ವಿರಹಸಂತಪ್ತಳಾಗಿ ಮಹದೇವಿಯಕ್ಕ ಮೊರೆಯಿಡುತ್ತಿದ್ದಾಳೆ. ಬಸವಣ್ಣನವರು ಕೂಡಲ ಸಂಗಮ ದೇವನ ಸಾಕ್ಷಾತ್ಕಾರಕ್ಕೆ ಹಂಬಲಿಸಿದಂತೆ ಮಹದೇವಿಯಕ್ಕ ಚೆನ್ನಮಲ್ಲಿಕಾರ್ಜುನನ ಸಾಕ್ಷಾತ್ಕಾರಕ್ಕೆ ಹಂಬಲಿಸುತ್ತಿದ್ದಾಳೆ. ಆಕೆ ಬಸವಣ್ಣನವರಂತೆ ಕರುವಿಟ್ಟ ಭಕ್ತಿಯ ಪುತ್ತಳಿ; ಪ್ರಭುವಿನಂತೆ ಜ್ಞಾನದ ಖನಿ. ಭಗವಂತನು ದಯೆಯಿಂದ ಕಾಣಿಸಿಕೊಂಡು ಭಕ್ತರನ್ನು ಉದ್ಧಾರಮಾಡುವನು; ಆದರೆ ಹಾಗೆ

---

೨೧೨—೨೧೪. ಮ. ದೇ. ವ. ಪುಟ ೧. ೩೪. ೩೪. ೨೧೫. ಮ. ದೇ. ವ. ಪುಟ ೩.

ಕಾಣಿಸಿಕೊಳ್ಳುವ ಮೊದಲು ಹಲವು ಬಗೆಗಳಲ್ಲಿ ಪರೀಕ್ಷೆಮಾಡುವನು ಎಂಬ ನಂಬಿಕೆ ಒಂದುಂಟು. ಮಹದೇವಿಯಕ್ಕ ಹೆಂಗಸು, ಆ ಕಠಿನ ಪರೀಕ್ಷೆಗಳನ್ನೆಲ್ಲ ಸಹಿಸಬಲ್ಲಳೆ?

೨೧೬. "ಬಲ್ಲಿದನ ಹಗೆ ತೆಗೆವನ್ನಬರ ಬಡವನ ಹರಣ ಹೋದ ತೆರನಂತಾಯಿತ್ತು ನೀ ಕಾಡಿ ನೋಡುವನ್ನಬರ. ಎನಗಿದು ವಿಧಿಯೇ ಹೇಳಾ ತಂದೆ? ಮೂರು ಆರುವನ್ನಬರ, ಒಮ್ಮೆ ಗಾಳಿಗೆ ಹಾರಿ ಹೋದ ತೆರನಂತಾಯಿತ್ತು. ಎನಗೆ ನೀನಾವ ಪರಿಯಲ್ಲಿ ಕರುಣಿಸುವೆಯಯ್ಯ ಚೆನ್ನ ಮಲ್ಲಿಕಾರ್ಜುನಾ"

ಆದುದರಿಂದ ಅಷ್ಟೆಲ್ಲ ಪರೀಕ್ಷಿಸಬೇಡ. ತನು ಮನ ಭಾವಗಳಲ್ಲಿ ಶುಚಿಯಾಗಿ ಏಕನಿಷ್ಠೆ ನೆಲೆಗೊಳ್ಳುವವರೆಗೂ ಕಾಯುವುದೆಂದರೆ ನಾನು ಉಳಿಯುವೆನೇ? ಮಾಯೆಯ ತೊಡಕನ್ನು ಒಡ್ಡಿದವನು ನೀನು, ಆ ತೊಡಕನ್ನು ಬಿಡಿಸಬೇಕಾದರೂ ನೀನೆ. ಬೇರೆಯವರ ಕೈಯಲ್ಲಿ ಆಗುವುದೆ?

೨೧೭. "ಕಾಯಕ್ಕೆ ನೆಳಲಾಗಿ ಕಾಡಿತ್ತು ಮಾಯೆ. ಪ್ರಾಣಕ್ಕೆ ಮನವಾಗಿ ಕಾಡಿತ್ತು ಮಾಯೆ. ಮನಕ್ಕೆ ನೆನಹಾಗಿ ಕಾಡಿತ್ತು ಮಾಯೆ. ನೆನಹಿಂಗೆ ಅರಿವಾಗಿ ಕಾಡಿತ್ತು ಮಾಯೆ. ಜಗದ ಜಂಗುಳಿಗಳಿಗೆ ಬೆಂಗೋಲನೆತ್ತಿ ಕಾಡಿತ್ತು ಮಾಯೆ. ಚೆನ್ನ ಮಲ್ಲಿಕಾರ್ಜುನ, ನೀನೊಡ್ಡಿದ ಮಾಯೆಯನಾರೂ ಗೆಲಲಾರರು"

ನೀನು ಕರುಣೆಯಿಂದ ಭಕ್ತಿಯನ್ನು ಕೊಟ್ಟರೆ ಉಂಟು, ಜ್ಞಾನವನ್ನು ಕೊಟ್ಟರೆ ಉಂಟು. ಆದುದರಿಂದ ನೀನೇ ನನಗೆ ಒಲಿಯಬೇಕಲ್ಲದೆ, ನಿನ್ನನ್ನು ಒಲಿಸಿ ಗೆಲ್ಲಲಾರೆ. ಚಿಕ್ಕಂದಿನಿಂದಲೂ ನಿನ್ನ ಕೈಹಿಡಿಯಬೇಕೆಂದು ನಿನ್ನೊಡನೆ ಸಂಸಾರ ಮಾಡಬೇಕೆಂದು ನಾನು ಬಯಸುತ್ತಿದ್ದೇನೆ. ನಿನ್ನಲ್ಲೆ ಮನಸ್ಸಿಟ್ಟು ಅನವರತ ಹಂಬಲಿಸುತ್ತಿದ್ದೇನೆ. ನಿನ್ನ ಪರೀಕ್ಷೆಯಲ್ಲಿ ನಾನು ತೇರ್ಗಡೆಯಾಗಲಾರೆ, ನಿನ್ನ ಒಲಿಸಲಾರೆ. ನೀನೇ ದಯೆಯಿಂದ ಒಲಿಯುವುದು ಮೇಲು.

೨೧೮. "ಅಷ್ಟವಿಧಾರ್ಚನೆಯ ಮಾಡಿ ಒಲಿಸುವೆನೇ ಅಯ್ಯ? ನೀನು ಬಹಿರಂಗ ವ್ಯವಹಾರ ದೂರಸ್ಥನು. ಅಂತರಂಗದಲ್ಲಿ ಧ್ಯಾನವ ಮಾಡಿ ಒಲಿಸುವೆನೇ ಅಯ್ಯ? ನೀನು ವಾಙ್ಮನಾತೀತನು. ಜಪ ಸ್ತೋತ್ರದಿಂದ ಒಲಿಸುವೆನೆ

೨೧೬. ಮ. ದೇ. ವ. ಪುಟ ೩. ೨೧೭. ಮ. ದೇ. ವ. ಪುಟ ೪.

೨೧೮. ಮ. ದೇ. ವ. ಪುಟ ೧೩.

ಅಯ್ಯ? ನೀನು ನಾದಾತೀತನು. ಭಾವಜ್ಞಾನದಿಂದೊಲಿಸುವೆನೆ ಅಯ್ಯ? ನೀನು ಮತಿಗತೀತನು. ಹೃದಯಕಮಲದಲ್ಲಿಂಬಿಟ್ಟುಕೊಂಬೆನೆ ಅಯ್ಯ? ನೀನು ಸರ್ವಾಂಗ ಪರಿಪೂರ್ಣನು. ಅಯ್ಯ ನಿನ್ನ ಒಲಿಸಲೆನ್ನಳವಲ್ಲ. ನೀನೊಲಿವುದೇ ಸುಖವಯ್ಯ ಚೆನ್ನ ಮಲ್ಲಿಕಾರ್ಜನಾ"

ಆದುದರಿಂದ ನೀನೇ ಬೇಗ ಒಲಿದು ಕೈಹಿಡಿದು ಉದ್ಧರಿಸು. ನೀನೇ ಗತಿಯೆಂದು ನಂಬಿ ಬಂದವಳಲ್ಲವೆ! ಹೊರದೂಡದಿರು, ಒಮ್ಮೆ ಮುಖದೋರು ಚೆನ್ನಮಲ್ಲಿಕಾರ್ಜುನ! ಗಿಡಮರಗಳಲ್ಲಿ ಖಗಮೃಗಗಳಲ್ಲಿ ಎಲ್ಲೆಲ್ಲಿಯೂ ಇರುವೆಯಲ್ಲ, ನನಗೊಮ್ಮೆ ರೂಪುದೋರಬಾರದೆ? ನೀನು ಸ್ವಾಮಿ, ನಾನು ತೊತ್ತು

೨೧೯. "ಬೆರಸುವರೆ ಬೇಗ ತೋರಾ. ಹೊರ ಹಾಕದಿರಯ್ಯ. ನಿಮ್ಮಲ್ಲಿಗೆ ಸಲೆ ಸಂದ ತೊತ್ತಾನು. ಎನ್ನ ಹೊರ ಹಾಕದಿರಯ್ಯ. ಚೆನ್ನ ಮಲ್ಲಿಕಾರ್ಜುನಯ್ಯ ನಿಮ್ಮ ನಂಬಲೆಂದು ಬಳಿಯ ಬಂದೆನು. ಇಂಬುಗೊಳ್ಳಯ್ಯ ಬೇಗದಲಿ."

ಎಂದು ತವಕಿಸುತ್ತ, ಮೊರೆಯಿಡುತ್ತ, ಬಳಲುತ್ತ, ಮಹದೇವಿಯಕ್ಕ ಕಾಡಿನಲ್ಲಿ ಅಲೆದಾಡಿ, ಊರೂರುಗಳನ್ನು ದಾಟಿ, ಕಲ್ಯಾಣ ಪಟ್ಟಣವನ್ನು ಬಂದು ಸೇರಿದಳು. ಚೆನ್ನಮಲ್ಲಿಕಾರ್ಜುನನನ್ನು ಸಾಕಾರವಾಗಿ ತೋರುವ ಗುರು, ಆತನನ್ನು ತನಗೆ ಮದುವೆ ಮಾಡಿಸುವ ಗುರು, ಅಲ್ಲಿದ್ದಾನೆಂದು ಬಂದು ಸೇರಿದಳು. ಕಲ್ಯಾಣ ಪಟ್ಟಣದ ಶಿವಶರಣರೂ ಶರಣೆಯರೂ ಆಶ್ಚರ್ಯದಿಂದ ಆಕೆಯ ಸೌಂದರ್ಯವನ್ನೂ ವಿರಕ್ತಿಯನ್ನೂ ನೋಡಿದರು. ಈ ದ್ವಂದ್ವ ಹೇಗೆ ಕೂಡಿಕೊಂಡಿದೆಯೆಂದು ಆಶ್ಚರ್ಯಪಟ್ಟರು. ಯಾರಿಗಾಗಿ ಅಲ್ಲಿಗೆ ಬಂದಳೊ? ಗಂಡನಿಲ್ಲವೋ? ಮಕ್ಕಳಿಲ್ಲವೋ? ಒಬ್ಬಳೇ ಬಂದವಳಾರು? ಎಂದು ಶರಣೆಯರು ಕೇಳಿದರು. ಮಹದೇವಿಯಕ್ಕ

೨೨೦. ಕಿಚ್ಚಿಲ್ಲದ ಬೇಗೆಯಲಿ ಬೆಂದೆನವ್ವಾ! ಏರಿಲ್ಲದ ಗಾಯದಲಿ ನೊಂದೆನವ್ವಾ! ಸುಖವಿಲ್ಲದ ಧಾವತಿಗೊಂಡೆನವ್ವಾ! ಚೆನ್ನ ಮಲ್ಲಿಕಾರ್ಜುನ ದೇವರಿಗೊಲಿದು ಬಾರದ ಭವಂಗಳಲಿ ಬಂದೆನವ್ವಾ."

---

೨೧೯. ಮ. ದೇ. ವ. ಪುಟ ೧೫.     ೨೨೦. ಮ. ದೇ. ವ. ಪುಟ ೧೫.

೨೨೧. "ಸಾವಿಲ್ಲದ, ಕೇಡಿಲ್ಲದ, ರೂಹಿಲ್ಲದ, ಚೆಲುವಂಗಾನೊಲಿದೆನವ್ವ. ಎಡೆಯಿಲ್ಲದ, ಕಡೆಯಿಲ್ಲದ, ತೆರಹಿಲ್ಲದ, ಕುರುಹಿಲ್ಲದ, ಚೆಲುವಂಗಾನೊಲಿದೆ ಎಲೆ ಅವ್ವಾ. ನೀನು ಕೇಳಾ ತಾಯೆ. ಭವವಿಲ್ಲದ, ಭಯವಿಲ್ಲದ, ನಿರ್ಭಯ ಚೆಲುವಂಗೆ ನಾನೊಲಿದೆ. ಇದು ಕಾರಣ ಚೆನ್ನಮಲ್ಲಿಕಾರ್ಜುನ ಚೆಲುವ ಗಂಡನೆನಗೆ. ಈ ಸಾವ, ಕೆಡುವ, ಗಂಡರನೊಯ್ದು ಒಲೆಯೊಳಗಿಕ್ಕು"

ಎಂದು ಚೆನ್ನಮಲ್ಲಿಕಾರ್ಜುನನೆಂಬ ಗಂಡ ತನಗುಂಟೆಂದು ಹೇಳಿದಳು. ಆಕೆಯ ಜ್ಞಾನವನ್ನು ನೋಡಿ ಶಿವಶರಣೆಯರು ಮುಗ್ಧರಾದರು.

ಶಿವಾನುಭವಮಂಟಪದಲ್ಲಿ ಮಹದೇವಿಯಕ್ಕ ಅಲ್ಲಮ ಪ್ರಭುವನ್ನು ಕಂಡಳು. ಆಕೆಯನ್ನು ನೋಡಿ ಪ್ರಭುವಿಗೂ ಸಂತೋಷವಾಯಿತು. ಅನುಭವ ಮಂಟಪದಲ್ಲಿರುವ ಗಣಗಳಿಗೆ ಜ್ಞಾನ ಭಕ್ತಿ ವೈರಾಗ್ಯಗಳ ಸ್ವರೂಪವನ್ನು ತಿಳಿಸುವುದಕ್ಕೆ ಆಕೆ ಒಳ್ಳೆಯ ಆದರ್ಶವಾಗಿದ್ದಳು. ಎಲ್ಲರೂ ಪ್ರಶ್ನೆಗಳನ್ನು ಕೇಳಿ ಪರೀಕ್ಷಿಸಿದರು. ಎಲ್ಲಕ್ಕೂ ತೃಪ್ತಿಕರವಾಗಿ ಆಕೆ ಉತ್ತರಗಳನ್ನು ಕೊಟ್ಟಳು. ಎಲ್ಲರಿಗಿಂತ ಹೆಚ್ಚಾಗಿ ಬಸವಣ್ಣನವರಿಗೆ ಮೆಚ್ಚಿಕೆಯಾದಳು ಮಹದೇವಿಯಕ್ಕ. ಚೆನ್ನಮಲ್ಲಿಕಾರ್ಜುನನನ್ನು ಸಾಕಾರವಾಗಿ ಕಾಣಬೇಕೆಂದು ಆಕೆ ಹಂಬಲಿಸುತ್ತಿರುವುದನ್ನು ನೋಡಿ ಬಸವಣ್ಣನವರು ಮನ ಕರಗಿದರು. ಚೆನ್ನಬಸವಣ್ಣನಿಗೆ 'ನಾನೇನು ಬಲ್ಲೆ, ನಾನು ಗುರುವಾಗಲೊಲ್ಲೆ' ಎಂದು ಹೇಳಿದ ಬಸವಣ್ಣನವರು, ಮಹದೇವಿಯಕ್ಕನ ವಿಷಯದಲ್ಲಿ ಮನಕರಗಿ ಇಷ್ಟಲಿಂಗವನ್ನು ಕೊಟ್ಟು ಗುರುವಾದುದು ಆಶ್ಚರ್ಯವಲ್ಲವೆ! ಶಿವಾನುಭವಮಂಟಪವನ್ನು ಸಜ್ಜುಗೊಳಿಸಿ, ಶಿವಗಣಗಳೆಲ್ಲ ಮಂತ್ರೋಚ್ಚಾರಣೆ ಮಾಡುತ್ತಿದ್ದಾಗ, ಶಿವಶರಣೆಯರೆಲ್ಲ ಮಂಗಳವಸ್ತು ವಸ್ತ್ರಗಳನ್ನು ಹಿಡಿದು ನಿಂತಿದ್ದಾಗ, ವಾದ್ಯಗಳು ಭೋರ್ಗರೆಯುತ್ತಿರಲು 'ಚುಳುಕಾಗಿ' ಬಂದ ವರನಿಗೆ ಚೆನ್ನಮಲ್ಲಿಕಾರ್ಜುನಯ್ಯನೆಂದೇ ಹೆಸರಿಟ್ಟು ಎಂದೆಂದೂ ಅಗಲದಿರೆಂದು, ನಿತ್ಯಸುಖಿಯಾಗಿರೆಂದು, ಮಹದೇವಿಯನ್ನು ಆಶೀರ್ವದಿಸಿ ದೀಕ್ಷಾವಿವಾಹವನ್ನು ಸದ್ಗುರು ಬಸವಣ್ಣನವರು ಮಾಡಿಸಿದರು.

---

೨೨೧. ಮ. ದೇ. ವ. ಪುಟ ೧೩.

೨೨೨. "ಗುರುವೇ ತೆತ್ತಿಗನಾದ, ಲಿಂಗವೇ ಮದುವಣಿಗನಾದ, ಆನು ಮದುವಳಿಗೆಯಾದೆನು. ವಸುಧೆಯ ಭಕ್ತರೆಲ್ಲರು ಬಿಬ್ಬಣಿಗರಾದರು. ಕೊಟ್ಟರು ಸಾದೃಶ್ಯವಪ್ಪ ಗಂಡನ ನೋಡಿ. ಇದು ಕಾರಣ ಚೆನ್ನಮಲ್ಲಿಕಾರ್ಜುನಯ್ಯನೇ ಗಂಡನೆನಗೆ"

ಎಂದು ಇಷ್ಟಾರ್ಥಸಿದ್ಧಿಯನ್ನು ಮಹದೇವಿಯಕ್ಕ ಪಡೆದಳು. ಆ ಪರಮಾತ್ಮನು ದೂರದಲ್ಲಿಲ್ಲ, ಎಲ್ಲಿಯೋ ಕೈಲಾಸದಲ್ಲಿ ಕುಳಿತಿಲ್ಲ, ತನ್ನ ಕೈಯಲ್ಲಿಯೇ ಇದ್ದಾನೆ.

೨೨೩. "ಅಯ್ಯ, ದೂರದಲ್ಲಿರ್ದಿಹೆಯೆಂದು ಬಾಯಾರಿ ಬಳಲುತ್ತಿದ್ದೆನಯ್ಯ ನಾನು. ಅಯ್ಯ ಸಾರಿ ಬಂದು, ನೀನೆನ್ನ ಕರಸ್ಥಲದಲ್ಲಿ ಮೂರ್ತಿಗೊಂಡರೆ, ಇನ್ನು ಆ ರತಿಯೆಲ್ಲವೂ ಲಿಂಗ. ಆಲಿ ನಿಮ್ಮಲ್ಲಿ ನೆಟ್ಟವು ನೋಡಯ್ಯ! ಚೆನ್ನಮಲ್ಲಿಕಾರ್ಜುನಯ್ಯ! ನಿಮ್ಮನೆನ್ನ ಕರಸ್ಥಲದಲ್ಲಿ ನೋಡಿ ನೋಡಿ ಕಂಗಳೇ ಪ್ರಾಣವಾಗಿದ್ದೆನಯ್ಯ"

೨೨೪. "ಅಯ್ಯ ಪಾತಾಳವಿತ್ತಿತ್ತ, ಶ್ರೀಪಾದವತ್ತತ್ತ. ಬ್ರಹ್ಮಾಂಡವಿತ್ತಿತ್ತ, ಮಣಿಮಕುಟವತ್ತತ್ತ. ಅಯ್ಯ ದಶದಿಕ್ಕು ಇತ್ತಿತ್ತ, ದಶ ಭುಜಗಳತ್ತತ್ತ. ಚೆನ್ನಮಲ್ಲಿಕಾರ್ಜುನಯ್ಯ ನೀನೆನ್ನ ಕರಸ್ಥಲಕ್ಕೆ ಬಂದು ಚುಳುಕಾದಿರಯ್ಯ"

ಇನ್ನು ಹಂಬಲಿಸ ಕಾರಣವಿಲ್ಲ. ಮನಸ್ಸಿಗೆ ಒಂದು ಶಾಂತಿ ದೊರೆಯಿತು. ಮಹದೇವಿಯಕ್ಕ ಇಷ್ಟಲಿಂಗದಲ್ಲಿ ನೆಟ್ಟನೋಟದಿಂದ ನೋಡುತ್ತಿರಲು ಪರಮಾತ್ಮ ಬಾಹ್ಯದಲ್ಲಿಯೂ ಅಂತರ್ಯದಲ್ಲಿಯೂ ರೂಪುದೋರಿದನು. ಮಹದೇವಿಯಕ್ಕ ಚಕಿತಳಾಗಿ, ಆನಂದಭರಿತಳಾಗಿ,

೨೨೫. "ಹರನೇ ನೀನೆನಗೆ ಗಂಡನಾಗಬೇಕೆಂದು ಅನಂತಕಾಲ ತಪಸಿದ್ದೆ ನೋಡಾ. ಹಸೆಯ ಮೇಲಣ ಮಾತ ಬೆಸಗೊಳಲಟ್ಟವರೆ, ಶಶಿಧರನ ಹತ್ತಿರಕ್ಕೆ ಕಳುಹಿವರೆಮ್ಮವರು. ಭಸ್ಮವನೆ ಹೂಸಿ, ಕಂಕಣವನೇ ಕಟ್ಟಿದರು ಚೆನ್ನಮಲ್ಲಿಕಾರ್ಜುನಯ್ಯ, ನನಗೆ ನೀನಾಗಬೇಕೆಂದು"

ಎಂದು ಗಂಡನನ್ನು ಮಾತನಾಡಿಸಿದಳು. ಆತನಿಗೆ ಶರಣಾಗತಳಾದಳು. ಹಲವು ವರ್ಷಗಳ ತಪಸ್ಸು ಇಂದಿಗೆ ಫಲಿಸಿತು; ನಿನಗೆ ನಾನು, ನನಗೆ ನೀನು, ಒಬ್ಬರಿಗೊಬ್ಬರು ಒಲಿದಿದ್ದೇವೆ. ನಿನ್ನೊಡನೆ ಒಗೆತನವನ್ನು ನಿನ್ನ ಮನ

---

೨೨೨. ಮ. ದೇ. ವ. ಪುಟ ೭.
೨೨೩. ಮ. ದೇ. ವ. ಪುಟ ೩೬.
೨೨೪. ಮ. ದೇ. ವ. ಪುಟ ೬.
೨೨೫. ಮ. ದೇ. ವ. ಪುಟ ೬.

ಮೆಚ್ಚು ಮಾಡುತ್ತೇನೆ. ನೀನು ಕರುಣಿ, ನನ್ನ ಹೆಚ್ಚು ಕುಂದುಗಳನ್ನು ನೋಡದೆ ಮನ್ನಿಸು. ನೀನು ಇರಿಸಿದಂತೆ ಇರುತ್ತೇನೆ, ನೀನು ಹೇಳಿದಂತೆ ಕೇಳುತ್ತೇನೆ,

೨೨೬. "ನಾನು ನಿನಗೊಲಿದೆ, ನೀನು ಎನಗೊಲಿದೆ. ನೀನೆನ್ನನಗಲದಿಪ್ಪೆ, ನಾ ನಿನ್ನ ನಗಲದಿಪ್ಪೆನಯ್ಯ. ನಿನಗೆ ನನಗೆ ಬೇರೊಂದು ಠಾವುಂಟೆ? ನೀನು ಕರುಣಿ ಎಂಬುದ ನಾನು ಬಲ್ಲೆನು. ನೀನಿರಿಸಿದ ಗತಿಯೊಳಗೆ ಇಪ್ಪವಳಾನಯ್ಯ, ನೀನೆ ಬಲ್ಲೆ ಚೆನ್ನ ಮಲ್ಲಿಕಾರ್ಜುನಾ"

೨೨೭. "ನಚ್ಚುಗೆ ಮನ ನಿಮ್ಮಲ್ಲಿ, ಮಚ್ಚುಗೆ ಮನ ನಿಮ್ಮಲ್ಲಿ. ಸಲ್ಲುಗೆ ಮನ ನಿಮ್ಮಲ್ಲಿ, ಸೋಲುಗೆ ಮನ ನಿಮ್ಮಲ್ಲಿ. ಆಳಲುಗೆ ಮನ ನಿಮ್ಮಲ್ಲಿ, ಬಳಲುಗೆ ಮನ ನಿಮ್ಮಲ್ಲಿ. ಕರಗುಗೆ ಮನ ನಿಮ್ಮಲ್ಲಿ, ಕೊರಗುಗೆ ಮನ ನಿಮ್ಮಲ್ಲಿ. ಎನ್ನ ಪಂಚೇಂದ್ರಿಯಂಗಳು ಕಬ್ಬುನ ಉಂಡ ನೀರಿನಂತೆ ನಿಮ್ಮಲ್ಲಿ ಬೆರಸುಗೆ ಚೆನ್ನ ಮಲ್ಲಿಕಾರ್ಜುನಯ್ಯ"

ನಿನ್ನ ಕರುಣದಿಂದ ಆತ್ಮಾರ್ಪಣಮಾಡಿ ಸಮರಸದ, ಪರಮಾರ್ಥದ ಸಂಸಾರ ನಡಸುವೆನು. ಹೀಗೆ "ಮನ ನಿಮ್ಮಲ್ಲಿ ಒಡವೆರೆದ ಬಳಿಕ ಎನಗೆ ಭವವುಂಟೆ ಚೆನ್ನಮಲ್ಲಿಕಾರ್ಜುನ!" ಎಂದು ಲಲ್ಲೆನುಡಿಯನ್ನಾಡಿದಳು.

೨೨೮. "ಹೊಳೆವ ಕೆಂಜೆಡೆಗಳ, ಮಣಿಮಕುಟದ ಒಪ್ಪುವ ಸುಲಿಪಲ್ಲ, ನಗೆಮೊಗದ ಕಂಗಳ, ಕಾಂತಿಯಿಂ ಈರೇಳು ಭುವನಮಂ ಬೆಳಗುವ, ದಿವ್ಯ ಸ್ವರೂಪನ ಕಂಡೆ ನಾನು. ಕಂಡೆನ್ನ ಕಂಗಳ ಬರ ಹಿಂಗಿತ್ತಿಂದು. ಗಂಡಗಂಡರನೆಲ್ಲ ಹೆಂಣ ಹೆಂಡಿರಾಗಿ ಆಳುವ ಗರುವನ ಕಂಡೆ ನಾನು. ಜಗದಾದಿ ಶಕ್ತಿಯೊಳು ಬೆರಸಿ ಒಡನಾಡುವ ಪರಮಗುರು ಚೆನ್ನ ಮಲ್ಲಿಕಾರ್ಜುನನ ನಿಲವ ಕಂಡು ಬದುಕಿದೆನು"

ಎಂದು ಸಕಲ ರೂಪವನ್ನು ಕಂಡು ಸಂತುಷ್ಟಳಾದಳು. ಲೌಕಿಕ ದೃಷ್ಟಿಯಿಂದ ಮದುವೆಯಾಗಬೇಕೆಂದು ಮಹದೇವಿಯಕ್ಕ ಪರಿತಪಿಸಲಿಲ್ಲ. ಆಕೆಯದು ಪಾರಮಾರ್ಥದ ದೃಷ್ಟಿ. "ಶರಣ ಸತಿ ಲಿಂಗ ಪತಿ" ಎಂಬ ಭಾವಕ್ಕೆ

---

೨೨೬. ಮ. ದೇ. ವ. ಪುಟ ೩೩. ೨೨೭. ಮ. ದೇ. ವ. ಪುಟ ೧೮.

೨೨೮. ಮ. ದೇ. ವ. ಪುಟ ೪೩.

ಅನುಗುಣವಾಗಿ ತನಗೆ ಆ ಪರಮಾತ್ಮನನ್ನು ತಂದು ಕೊಟ್ಟರು ಬಸವಣ್ಣನವರು. ಸದ್ಗುರು ಬಸವಣ್ಣನವರು ದೊರೆಯುವವರೆಗೆ ತಾನು ಎಷ್ಟು ಪಾಡು ಪಡಬೇಕಾಯಿತು.

೨೨೯. "ಅರಸಿ ತೊಳಲಿದರಿಲ್ಲ, ಬಯಸಿ ಹೊಕ್ಕರಿಲ್ಲ, ತಪಸ್ಸು ಮಾಡಿದರಿಲ್ಲ. ಅದು ತನ್ನ ಬಹ ಕಾಲಕ್ಕಲ್ಲದೆ ಸಾಧ್ಯವಾಗದು. ಶಿವನೊಲಿದಲ್ಲದೆ ಕೈಗೂಡದು. ಚೆನ್ನ ಮಲ್ಲಿಕಾರ್ಜುನನಿಗೊಲಿದೆನಾಗಿ, ನಾನು ಸಂಗನ ಬಸವಣ್ಣನ ಶ್ರೀಪಾದವ ಕಂಡು ಬದುಕಿದೆನು"

ಎಲ್ಲವನ್ನೂ ಸ್ವಪ್ರಯತ್ನದಿಂದಲೇ ಸಾಧಿಸುವೆವೆಂಬುದು ಹುಚ್ಚು. ಭಗವಂತನ ದಯೆಯುಂಟಾದರೆ ಆತನೇ ತಕ್ಕ ಗುರುವಾಗಿ ಬರುವನು, ಮನಸ್ಸು ಪಕ್ವವಾಗಿರುವ ಕಾಲಕ್ಕೆ ಉಪದೇಶಮಾಡುವನು. ಬಸವಣ್ಣನವರೇ ತನಗೆ ಗುರುವಾಗಿ ಪರಮಾರ್ಥದ ತಂದೆಯಾಗಿರುವುದರಿಂದ, ತನ್ನಂತೆ ಧನ್ಯರಾರಿರುವರು! ಹೀಗೆ ತನ್ನನ್ನು ಧನ್ಯಳನ್ನಾಗಿ ಮಾಡಿ ಉದ್ಧರಿಸಿದ ಬಸವಣ್ಣನವರಿಗೆ ತಾನು ಎಷ್ಟು ಕೃತಜ್ಞಳಾಗಿದ್ದರೂ ಸಾಲದೆಂದು ಗುರು ಸ್ತೋತ್ರವನ್ನೂ ಮಾಡಿದಳು.

೨೩೦. "ನರಜನ್ಮವ ತೊಡೆದು ಹರಜನ್ಮವ ಮಾಡಿದ ಗುರುವೇ, ಭವಬಂಧನವ ಬಿಡಿಸಿ ಪರಮ ಸುಖವ ತೋರಿದ ಗುರುವೇ. ಭವಿ ಎಂಬುದ ತೊಡೆದು ಭಕ್ತೆ ಎಂದೆನಿಸಿದ ಗುರುವೇ. ಚೆನ್ನ ಮಲ್ಲಿಕಾರ್ಜುನನ ತಂದೆನ್ನ ಕೈವಶಕ್ಕೆ ಕೊಟ್ಟ ಗುರುವೇ ಶರಣು"

೨೩೧. "ನಿತ್ಯವೆನ್ನ ಮನೆಗೆ ನಡೆದು ಬಂದಿತ್ತು. ಮುಕ್ತಿಯೆನ್ನ ಮನೆಗೆ ನಡೆದು ಬಂದಿತ್ತು. ಜಯ ಜಯ ಗುರುವೇ, ನಮೋ ಪರಮ ಗುರುವೇ, ನಮೋ ನಮೋ. ಚೆನ್ನ ಮಲ್ಲಿಕಾರ್ಜುನನ ತಂದೆನಗೆ ತೋರಿಕೊಟ್ಟ ಗುರುವೇ ನಮೋ ನಮೋ"

ಎಂದು ಬಸವಣ್ಣನವರನ್ನು ಆಕೆ ಹೊಗಳಿದಳು. ಬಸವಣ್ಣನವರು ಹೊಗಳಿಕೆಯನ್ನು ಬಯಸುವವರೂ ಅಲ್ಲ, ಕೈಕೊಳ್ಳುವವರು ಮೊದಲೇ ಅಲ್ಲ. "ಎನಗಿಂತ ಕಿರಿಯರಿಲ್ಲ ಶಿವಭಕ್ತರಿಗಿಂತ ಹಿರಿಯರಿಲ್ಲ" ಎಂಬ

---

೨೨೯—೩೧. ಮ. ದೇ. ವ. ಪುಟಗಳು ೧೪, ೬, ೮.

ಮನೋಭಾವದ ಬಸವಣ್ಣನವರು ನಾನು ನಿನಗೆ ಉಪದೇಶಮಾಡಿದವನಲ್ಲ, ಆ ಯೋಗ್ಯತೆ ನನ್ನಲ್ಲಿ ಇಲ್ಲವೂ ಇಲ್ಲ, ನನ್ನನ್ನೇಕೆ ಹೊಗಳುವೆ, ನಮಗೆಲ್ಲ ಗುರು, ಪರಮಗುರು ಅಲ್ಲಮಪ್ರಭು ಇದ್ದಾನೆ. ಆತ ನಡಸಿದಂತೆ ನಡೆಯುವ ಪಾಹೆಗಳು ನಾವು—ಎಂದು ಉತ್ತರ ಕೊಟ್ಟಿರಬಹುದು. ಪ್ರಭುವಿನ ಗುರುತ್ವವನ್ನು ಮಹದೇವಿ ಬಲ್ಲಳು ಆದರೂ

೨೩೨. "ಬಸವಣ್ಣ ನಿಮ್ಮಂಗದಾಚಾರವ ಕಂಡು ಎನಗೆ ಲಿಂಗ ಸಂಗವಾಯಿತ್ತು. ಅಯ್ಯ ಬಸವಣ್ಣ, ನಿಮ್ಮ ಮನದ ಸುಜ್ಞಾನವ ಕಂಡು ಎನಗೆ ಜಂಗಮ ಸಂಬಂಧವಾಯಿತ್ತು. ಬಸವಣ್ಣ ನಿಮ್ಮ ಸದ್ಭಕ್ತಿಯ ತಿಳಿದು ಎನಗೆ ನಿಜವು ಸಾಧ್ಯವಾಯಿತ್ತು. ಚೆನ್ನಮಲ್ಲಿಕಾರ್ಜುನಯ್ಯನ ಹೆಸರಿಟ್ಟು ಗುರು ನೀವಾದ ಕಾರಣ ನಿಮ್ಮ ಶ್ರೀಪಾದಕ್ಕೆ ನಮೋ ನಮೋ ಎನುತಿದ್ದೆನು"

ಎಂದು ಮಹದೇವಿಯಕ್ಕ ತನ್ನ ಕೃತಜ್ಞತೆಯನ್ನು ವ್ಯಕ್ತಪಡಿಸಿದಳು. ಬಾಯಿಬಿಟ್ಟು ಬಸವಣ್ಣನವರು ಉಪದೇಶ ಮಾಡಬೇಕೆ! ಎಲ್ಲವನ್ನೂ ಆಚರಣೆಯಲ್ಲೆ ತೋರುತ್ತಿದ್ದ ಬಸವಣ್ಣನವರನ್ನು ನೋಡಿದರೆ ಸಾಲದೆ? ಭಕ್ತಿಯ ಸ್ವರೂಪ, ಜ್ಞಾನದ ಸ್ವರೂಪ, ಅಂಗಲಿಂಗಗಳ ಸಾಮರಸ್ಯ ಎಲ್ಲವೂ ತಿಳಿಯುವುವು. ನಾನು ಯಾವ ಚೆನ್ನಮಲ್ಲಿಕಾರ್ಜುನನನ್ನು ಕೈಹಿಡಿಯ ಬೇಕೆಂದು ತವಕಿಸುತ್ತಿದ್ದೆನೋ ಆ ಚೆನ್ನಮಲ್ಲಿಕಾರ್ಜುನನನ್ನು ತಂದು ಎನ್ನ ಕೈವಶವ ಮಾಡಿದಿರಿ. ಲೌಕಿಕದ ಕಾಮವಾಸನೆಯನ್ನು ಗೆದ್ದು ಪರಮಾರ್ಥದ ಶರಣ ಮಾರ್ಗವನ್ನು ಹಿಡಿಯುವಂತಾಯಿತು. ಇದೆಲ್ಲವೂ ನಿಮ್ಮ ದಯೆಯಿಂದ ನನಗೆ ಲಭಿಸಿದ್ದಲ್ಲವೆ?

೨೩೩. "ಕಾಮನ ಗೆಲಿದೆನು ಬಸವಾ ನಿಮ್ಮ ದಯದಿಂದ. ಸೋಮಧರನ ಹಿಡಿತಪ್ಪೆನು ಬಸವಾ ನಿಮ್ಮ ಕೃಪೆಯಿಂದ. ನಾಮದಲ್ಲಿ ಹೆಂಗುಸೆಂಬ ಹೆಸ ರಾದರೇನು? ಭಾವಿಸಲು ಗಂಡು ರೂಪು. ಅತಿಕಾಮಿ ಚೆನ್ನಮಲ್ಲಿಕಾರ್ಜು ನಯ್ಯಂಗೆ ತೊಡರನಿಕ್ಕಿ ಎರಡರಿಯದೆ ಕೂಡಿದೆನು ಬಸವಾ ನಿಮ್ಮ ಕೃಪೆಯಿಂದ"

ಎಂದು ಬಸವಣ್ಣನವರಿಂದಾದ ಉಪಕಾರವನ್ನು ತಿಳಿಸಿದಳು. ಕಲ್ಯಾಣ ಪಟ್ಟಣದಲ್ಲಿ ಮಹದೇವಿಯಕ್ಕ ಕೆಲವು ಕಾಲವಿದ್ದಳು. ಶಿವಾನುಭವಮಂಟಪ ದಲ್ಲಿ ನಡೆಯುತ್ತಿದ್ದ ಚರ್ಚೆಗಳಿಂದ ಆಕೆ ಲಾಭವನ್ನು ಪಡೆದಳು.

---

೨೩೨—೩. ಮ. ದೇ. ವ. ಪುಟ ೨೦.

೨೩೪. "ಅಯ್ಯ ನಿಮ್ಮನುಭಾವಿಗಳ ಸಂಗದಿಂದ ಎನ್ನ ತನು ಶುದ್ಧವಾಯಿತ್ತು. ಅಯ್ಯ ನಿಮ್ಮನುಭಾವಿಗಳ ಸಂಗದಿಂದ ಎನ್ನ ಮನ ಶುದ್ಧವಾಯಿತ್ತು. ಅಯ್ಯ ನಿಮ್ಮನುಭಾವಿಗಳು ಒರೆದೊರೆದು ಆಗುಮಾಡಿದ ಕಾರಣ, ಚೆನ್ನ ಮಲ್ಲಿಕಾರ್ಜುನ ನಿಮಗಾನು ತೊಡಿಗೆಯಾದೆನು"

ಆದರ ಪರಿಣಾಮವಾಗಿ ಆಕೆ ಅಲ್ಲಮಪ್ರಭುವಿನ ಪ್ರತಿರೂಪವಾದಳು. ಅಪೂರ್ವವಾದ ಜ್ಞಾನ, ಸೈರಣೆ, ಲೋಕಾನುಭವ, ವಿರಕ್ತಿ, ಆಕೆಯಲ್ಲಿ ಕಂಗೊಳಿಸಿದವು. ಭವಿ ಭಕ್ತ ಎಂಬ ಭೇದ ಮಾಯವಾಯಿತು. ಆಕ್ಷೇಪಣೆ ಮಾಡಿದವರಿಗೆಲ್ಲ ಆಕೆ ಪ್ರಭುದೇವನಂತೆಯೇ ಭವಿತನದ ಸ್ವರೂಪವನ್ನು ವಿವರಿಸಿದಳು; ಕಪಟಿಗಳನ್ನು ಜರೆದಳು.

೨೩೫. "........ಕಾಮ ಒಂದು ಭವಿ, ಕ್ರೋಧ ಎರಡನೆಯ ಭವಿ, ಲೋಭ ಮೂರನೆಯ ಭವಿ, ಮೋಹ ನಾಲ್ಕನೆಯ ಭವಿ, ಮದ ಐದನೆಯ ಭವಿ, ಮತ್ಸರ ಆರನೆಯ ಭವಿ, ಆಮಿಷ ಏಳನೆಯ ಭವಿ. ಇಂತೀ ಏಳು ಭವಿಗಳ ತನ್ನೊಳಗಿಟ್ಟುಕೊಂಡು ಲಿಂಗವಿಲ್ಲದವರ 'ಭವಿ' ಎಂಬರು. ತಮ್ಮಂತರಂಗ ದಲ್ಲಿದ್ದ ಲಿಂಗಾಂಗದ ಸುದ್ದಿಯನರಿಯದೆ ಅಚ್ಚಪ್ರಸಾದಿ, ನಿಚ್ಚಪ್ರಸಾದಿ, ಸಮಯಪ್ರಸಾದಿಗಳೆಂದು, ಜಲಕ್ಕೆ ಕನ್ನವನಿಕ್ಕಿ ಉದಕವ ತಂದು ಲಿಂಗಕ್ಕೆ ಮಜ್ಜನಕ್ಕೆರೆವ ಹಗಲುಗಳ್ಳರಿಗೆ ಮೆಚ್ಚುವನೆ ಚೆನ್ನ ಮಲ್ಲಿಕಾರ್ಜುನ"

ಆಕೆಯ ವಚನಗಳಲ್ಲಿ ಬರುವ ಉಪದೇಶಗಳಾದರೋ ಬಹಳ ಮಹತ್ವ ವುಳ್ಳವು. ಸಮಾಧಾನಚಿತ್ತ ಸರ್ವಸಮತಾಭಾವ ದೊರೆಯಬೇಕು. ಅವು ದೊರೆಯದಿದ್ದರೆ ಅರಿಷಡ್ವರ್ಗಕ್ಕೆ ಈಡಾಗಿ, ಹುಟ್ಟು ಸಾವುಗಳೆಂಬ ಚಕ್ರ ದಲ್ಲಿ ಸುತ್ತುತ್ತಿರಬೇಕಾಗುತ್ತದೆ; ಪರಮಾರ್ಥವನ್ನು ತಿಳಿಯಲಾಗುವು ದಿಲ್ಲ. ಇವುಗಳನ್ನು ಪಡೆಯದೆ ಭಕ್ತರೆಂದೂ ಜ್ಞಾನಿಗಳೆಂದೂ ವೇಷ ವನ್ನು ಧರಿಸಿ ಪ್ರಯೋಜನವೇನು?

೨೩೬. "ಗುಣದೋಷಸಂಪಾದನೆಯ ಮಾಡುವನ್ನಕ್ಕರ ಕಾಮದ ಒಡಲು, ಕ್ರೋಧದ ಗೊತ್ತು, ಲೋಭದ ಇಕ್ಕೆ, ಮೋಹದ ಮಂದಿರ, ಮದದಾವರಣ, ಮತ್ಸರದ ಹೊದಿಕೆ. ಆ ಭವವರತಲ್ಲದೆ, ಚೆನ್ನ ಮಲ್ಲಿಕಾರ್ಜುನನನರಿವುದಕ್ಕೆ ಇಂಬಿಲ್ಲ ಕಾಣಿರಣ್ಣಾ"

---

೨೩೪. ಮ.ದೇ.ವ.ಪುಟ೧೭. ೨೩೫. ಮ.ದೇ.ವ.ಪುಟ೨೫. ೨೩೬. ಮ.ದೇ.ವ.ಪುಟ೧೨.

೨೩೭. "ಬೆಟ್ಟದ ಮೇಲೊಂದು ಮನೆಯಮಾಡಿ ಮೃಗಂಗಳಿಗಂಜಿದಡೆಂತಯ್ಯ! ಸಮುದ್ರದ ತಡಿಯಲ್ಲಿ ಮನೆಯಮಾಡಿ ನೊರೆ ತೆರೆಗಳಿಗಂಜಿದಡೆಂತಯ್ಯ! ಸಂತೆಯೊಳಗೊಂದು ಮನೆಯಮಾಡಿ ಶಬ್ದಕ್ಕೆ ನಾಚಿದಡೆಂತಯ್ಯ! ಚೆನ್ನ ಮಲ್ಲಿಕಾರ್ಜುನ ದೇವ ಕೇಳಯ್ಯ. ಲೋಕದೊಳಗೆ ಹುಟ್ಟಿದ ಬಳಿಕ ಸ್ತುತಿ ನಿಂದೆಗಳು ಬಂದಡೆ, ಮನದಲ್ಲಿ ಕೋಪವ ತಾಳದೆ ಸಮಾಧಾನಿಯಾಗಿರಬೇಕು"

ಎಂಬುದನ್ನು ಸಿದ್ಧರಾಮನಿಗಿಂತ ಸೊಗಸಾಗಿ, ತಕ್ಕ ದೃಷ್ಟಾಂತ ಗಳೊಂದಿಗೆ ಮಹದೇವಿಯಕ್ಕ ತಿಳಿಸಿದ್ದಾಳೆ.

೨೩೮. "ಅರಿಯದವರೊಡನೆ ಸಂಗವ ಮಾಡಿದರೆ, ಕಲ್ಲು ಹೊಯ್ದು ಕಿಡಿಯ ತೆಗೆದುಕೊಂಬಂತೆ. ಬಲ್ಲವರೊಡನೆ ಸಂಗವ ಮಾಡಿದರೆ, ಹೊಸೆದು ಬೆಣ್ಣೆಯ ತೆಗೆದುಕೊಂಬಂತೆ. ಚೆನ್ನ ಮಲ್ಲಿಕಾರ್ಜುನಯ್ಯ, ನಿಮ್ಮ ಶರಣರ ಸಂಗ ಕರ್ಪುರ ಉರಿಕೊಂಡಂತೆ"

ಹೀಗೆ ಅಜ್ಞಾನಿಗಳ ಸಹವಾಸದ ಫಲವನ್ನೂ ಜ್ಞಾನಿಗಳ ಸಹವಾಸದ ಫಲವನ್ನೂ ತಿಳಿಸಿ, ಶರಣರ ಸಹವಾಸ ಎಲ್ಲಕ್ಕಿಂತಲೂ ಮಿಗಿಲಾದುದು, ಸಾಮರಸ್ಯದಿಂದ ಐಕ್ಯವನ್ನು ದೊರಕಿಸುವುದಾಗಿದೆ ಎಂದು ಹೇಳಿದ್ದಾಳೆ. ಕಾಯವಿಡಿದು ಪರಮಾರ್ಥವನ್ನು ಸಾಧಿಸಬಹುದೇ? ಎಂದು ಕೇಳಿದವರಿಗೆ ಆಕೆ ಬಸವಣ್ಣನವರಿಗಿಂತ ಸೊಗಸಾಗಿ ಉಪದೇಶಮಾಡಿದ್ದಾಳೆ

೨೩೯. "ಹಾವಿನ ಬಾಯ ಹಲ್ಲು ಕಳೆದು ಹಾವನಾಡಿಸಬಲ್ಲರೆ ಹಾವಿನ ಸಂಗವೇ ಲೇಸು ಕಂಡಯ್ಯ, ಕಾಯದ ಸಂಗವೇ ಲೇಸು ಕಂಡಯ್ಯ. ತಾಯಿ ರಕ್ಕಸಿ ಯಾದಂತೆ ಕಾಯವಿಕಾರವು. ಚೆನ್ನ ಮಲ್ಲಿಕಾರ್ಜುನಯ್ಯ ನೀನೊಲಿದವರು ಕಾಯಗೊಂಡಿದ್ದರೆನಬೇಡ"

ಕಾಯವೆಂಬುದು ಸರ್ಪದಂತೆ. ಕಾಯದ ವಿಷದ ಹಲ್ಲುಗಳನ್ನು—ಮಾಯೆ, ಮೋಹಗಳನ್ನು—ಕಳೆದು ನಿರುಪಾಧಿಕನಾಗಿ, ನಿರ್ಲಿಪ್ತನಾಗಿ ಕಾಯದೊಳಗಿರಬಲ್ಲರೆ, ಕಾಯದಲ್ಲಿದ್ದು ಮುಕ್ತಿಯನ್ನು ಪಡೆಯಬಹುದು. ಆಗ ಕಾಯವಿಡಿದಿದ್ದರೂ ಅವರು ನಿಃಕಾಯರು, ಕರ್ಮಮಾಡಿದರೂ ನಿಷ್ಕರ್ಮಿಗಳು. ಲಿಂಗತನು, ಲಿಂಗಮನ ಆಗಿರುವುದರಿಂದ 'ಕಾಯದ

೨೩೭. ಮ. ದೇ. ವ. ಪುಟ ೧೨. ೨೩೮. ಮ. ದೇ. ವ. ಪುಟ ೧೮.
೨೩೯. ಮ. ದೇ. ವ. ಪುಟ ೩೧.

ಸಂಗವೇ ಲೇಸು ಕಂಡಯ್ಯ'. ಆದರೆ ಕಾಯದ ವಿಕಾರಕ್ಕೆ ಒಳಗಾಗಿ ಪಂಚೇಂದ್ರಿಯಗಳ ಅಧೀನನಾಗಿ, ವಿಷದ ಹಲ್ಲುಗಳಿಂದ ಕಚ್ಚಿಸಿಕೊಂಡರೆ, ಆತ್ಮನಷ್ಟ—ಎಂದು ಬಹು ಭಾವಗರ್ಭಿತವಾದ ವಚನವನ್ನು ಮಹದೇವಿ ಯಕ್ಕ ಹೇಳಿದ್ದಾಳೆ.

ಮಾಯೆ ಎಂಬುದು ಕೇವಲ 'ಪ್ರಪಂಚಿ'ಗಳನ್ನು ಮಾತ್ರ ಮುಸುಕಿ ರುವುದೆಂದು ತಿಳಿಯಬೇಡಿ. ಅದು ವಿವಿಧ ರೂಪಗಳಲ್ಲಿ ವಿವಿಧ ಜನರನ್ನು ಹಿಡಿದು ಕಾಡುತ್ತದೆ. ಅದರಿಂದ ಪಾರಾಗುವುದು ಸುಲಭವಲ್ಲ.

೨೪೦. "ಬಿಟ್ಟೆನೆಂದರೆ ಬಿಡದೀ ಮಾಯೆ. ಬಿಡದಿದ್ದರೆ ಬೆಂಬತ್ತಿತ್ತು ಮಾಯೆ. ಯೋಗಿಗೆ ಯೋಗಿಣಿಯಾಯಿತ್ತು ಮಾಯೆ. ಸವಣಂಗೆ ಸವಣಿಯಾಯಿತ್ತು ಮಾಯೆ. ಯತಿಗೆ ಪರಾಕಿಯಾಯಿತ್ತು ಮಾಯೆ. ನಿನ್ನ ಮಾಯೆಗೆ ನಾನಂಜು ವಳಲ್ಲ ಚೆನ್ನ ಮಲ್ಲಿಕಾರ್ಜುನ ದೇವ ನಿಮ್ಮಾಣೆ"

ಎಂಬ ದೊಡ್ಡ ಅನುಭವದ ನುಡಿಯನ್ನು ಆಕೆ ಹೇಳಿದ್ದಾಳೆ. ಎಲ್ಲಕ್ಕಿಂತ ಹೆಚ್ಚಾಗಿ "ಯತಿಗೆ ಪರಾಕಿಯಾಯಿತ್ತು ಮಾಯೆ". ಸರ್ವಸಂಗ ಪರಿತ್ಯಾಗ ಮಾಡಿದವನೂ, ಹೊನ್ನು ಹೆಣ್ಣು ಮಣ್ಣುಗಳನ್ನು ಆಶಿಸದವನೂ, ಪರಮ ವ್ರತಿಯೂ ಆದ ಯೋಗಿಗೆ 'ಹೊಗಳಿಕೆ' ಎಂಬುದು ಅಡ್ಡದಾರಿ ಹಿಡಿಸುವ ಮಾಯೆಯಾಗಿದೆ. "ಅಹಂ" ಎಂಬುದನ್ನು ಎಬ್ಬಿಸಿ ಅವನ ಗತಿಯನ್ನು ಕೆಡಿಸಿ, ನರಕಕ್ಕೆ ಇಳಿಸುವ ಮಾಯೆ ಆ ಹೊಗಳಿಕೆ.

ಮಹದೇವಿಯಕ್ಕ ಕೆಲವು ಕಾಲದ ಮೇಲೆ ಶ್ರೀಗಿರಿಗೆ ಹೊರಡಲುದ್ಯುಕ್ತ ಳಾದಳು. ಬಸವಣ್ಣಾದಿಗಳನ್ನು ಬಿಟ್ಟು ಹೊರಡುವುದು ಪರಮ ವಿರಕ್ತಳಾದ ಮಹದೇವಿಯಕ್ಕನಿಗೂ ಕಷ್ಟವೇ ಆಯಿತು. ಸಂಸಾರದ ಮಾಯೆ ಮೋಹ ಕ್ಷಣಕಾಲ ಆಕೆಯನ್ನು ಮುತ್ತಿ ವಿರಹದುಃಖದ ಅನುಭವ ವನ್ನು ತಂದು ಕೊಟ್ಟವು.

೨೪೧. "ಅಯ್ಯ ನಿಮ್ಮ ಮಹಂತರ ಕೂಡಿದ ಸುಖವನುಪಮೆಗೆ ತರಬಾರದಯ್ಯ! ಅಯ್ಯ ನಿಮ್ಮ ಮಹಂತರ ಕೂಡಿಯಗಲುವ ಧಾವತಿಯಿಂದ ಸಾವುದೇ ಕರ ಲೇಸು ಕಂಡಯ್ಯ! ಚೆನ್ನ ಮಲ್ಲಿಕಾರ್ಜುನಯ್ಯ ನಿಮ್ಮ ನರುಹಿದ ಮಹಿಮರನಗಲಿ ಆನು ನಿಲ್ಲಲಾರೆನಯ್ಯ"

---

೨೪೦. ಮ. ದೇ. ವ. ಪುಟ ೪. ೨೪೧. ಮ. ದೇ. ವ. ಪುಟ. ೪೦.

ಎಂದು ಮನಸ್ಸು ನೊಂದಿತು. ಆದರೂ ದೃಢಸಂಕಲ್ಪ ಮಾಡಿದಳು. ಅನುಭವಮಂಟಪದ ಶರಣರೆಲ್ಲ ಸೇರಿದರು. ಭೂಕೈಲಾಸವಾದ ಕಲ್ಯಾಣ ಪಟ್ಟಣವನ್ನು, ಈಶ್ವರಾಸ್ಥಾನದಂತಿದ್ದ ಬಸವಣ್ಣನವರ ಅನುಭವಮಂಟಪ ವನ್ನು, ಬಿಟ್ಟು ಹೋಗಬೇಕೆಂದಿರುವ ಮಹದೇವಿಯಕ್ಕನನ್ನು ಕಂಡು ಮರುಗಿದರು. ಇಲ್ಲಿ ದೊರೆಯುವ ನಿತ್ಯಾನಂದಕ್ಕಿಂತ ಮಿಗಿಲಾದುದು ಯಾವುದಿದೆ? ಮತ್ತೆ ಏನನ್ನು ಬಯಸಿ ಇಲ್ಲಿಂದ ಹೋಗುವಳೋ? ಎಂದು ಆಲೋಚಿಸಿದರು. ಮಹದೇವಿಯಕ್ಕ ಅದನ್ನು ತಿಳಿದು,

೨೪೨. ಒಡಲಿಲ್ಲದ, ನುಡಿಯಿಲ್ಲದ, ಕಡೆಯಿಲ್ಲದ ನಲ್ಲನ ಒಡಗೂಡಿ ಸುಖಿಯಾದೆ ಕೇಳಿರಯ್ಯ. ಓಸರಿಸೆನನ್ಯಕ್ಕೆ, ಆಶೆಮಾಡೆನು ಮತ್ತೆ ಭಿನ್ನ ಸುಖಕ್ಕೆ. ಆರಳಿದು ಮೂರಾಗಿ, ಮೂರಳಿದು ಎರಡಾಗಿ, ಎರಡಳಿದು ಒಂದಾಗಿ ನಿಂದೆ ನಯ್ಯ. ಬಸವಣ್ಣ ಮೊದಲಾದ ಶರಣರಿಗೆ ಶರಣಾರ್ಥಿ. ಪ್ರಭುವಿನಿಂದ ಕೃತ ಕೃತ್ಯಳಾನೆನು. ನಾನು ಮರೆಯಲಾಗದು. ನಾನು ನಿಮ್ಮ ಶಿಸುವೆಂದು ಚೆನ್ನ ಮಲ್ಲಿಕಾರ್ಜುನನ ಬೆರಸೆಂದು ಎನ್ನ ಹರಸುತ್ತಿಹುದು"

ಎಂದು ಉತ್ತರ ಕೊಟ್ಟಳು. ಬಸವಣ್ಣ ಮೊದಲಾದವರನ್ನು ನೋಡಿ

೨೪೩. "ಬಸವಣ್ಣ, ಎನ್ನ ಭಕ್ತಿಯೇ ನಿಮ್ಮ ಧರ್ಮ, ಎನ್ನ ಜ್ಞಾನವೇ ಪ್ರಭು ದೇವರ ಧರ್ಮ, ಎನ್ನ ಪರಿಣಾಮವೇ ಚೆನ್ನ ಬಸವಣ್ಣನ ಧರ್ಮ. ಇಂತೀ ಮೂವರು ಒಂದೊಂದು ಕೊಟ್ಟ ಕಾರಣ ಎನಗೆ ಮೂರು ಭಾವವಾಯಿತ್ತು. ಆ ಮೂರು ಭಾವವ ನಿಮ್ಮಲ್ಲಿ ಸಮರ್ಪಿಸಿದ ಕಾರಣ ಚೆನ್ನ ಮಲ್ಲಿಕಾರ್ಜು ನಯ್ಯನ ನೆನಹು ಹೋದಲ್ಲಿಯೇ ನಿಮ್ಮ ಕರುಣದ ಕಂದನು ಕಾಣಾ ಸಂಗನ ಬಸವಣ್ಣಾ"

ಎಂದು ಹೇಳಿದಳು. ಹೀಗೆ ನನ್ನ ಭಕ್ತಿ ಜ್ಞಾನ ಪರಿಣಾಮಗಳು ನಿಮ್ಮ ದಯೆದಿಂದ ಲಭಿಸಿದುವು. ಆ ಮೂರನ್ನೂ ನಿಮ್ಮಲ್ಲಿ ಸಮರ್ಪಿಸಿದ್ದೇನೆ. ಈಗ ನನಗೆ ಅಪ್ಪಣೆಯನ್ನು ಕೊಡಿ. ನಿಮ್ಮಲ್ಲಿಗೆ ಬಂದು ನಿಮ್ಮಿಂದ ಉಪದೇಶ ಪಡೆದ ಕಾರಣ ನಿಮ್ಮ ಕರುಣದ ಕಂದನಾಗಿದ್ದೇನೆ. ನನ್ನನ್ನು

---

೨೪೨. ಮ. ದೇ. ವ. ಪುಟ ೩೫.

೨೪೩. ಮ. ದೇ. ವ. ಪುಟ ೨೨.

ಬೀಳ್ಕೊಡಿ. ಪಾರಮಾರ್ಥಿಕ ಸಂಸಾರ ನಡಸುವುದಕ್ಕೆ ಚೆನ್ನಮಲ್ಲಿಕಾರ್ಜುನನೆಂಬ ಗಂಡನ ಮನೆಗೆ ಹೊರಡುವೆನು. ನಿಮಗೆ ಕೆಟ್ಟ ಹೆಸರನ್ನು ತರುವುದಿಲ್ಲ, ಎಂದು ಎಲ್ಲರ ಕೃತಜ್ಞತೆಯನ್ನೂ ನೆನೆಯುತ್ತ ಹೇಳಿದಳು.

೨೪೪. "ಹುಟ್ಟಿದೆ ಶ್ರೀಗುರುವಿನ ಹಸ್ತದಲ್ಲಿ. ಬೆಳೆದೆನು ಅಸಂಖ್ಯಾತರ ಕರುಣದೊಳಗೆ. ಭಾವವೆಂಬ ಹಾಲು, ಸುಜ್ಞಾನವೆಂಬ ತುಪ್ಪ, ಪರಮಾರ್ಥವೆಂಬ ಸಕ್ಕರೆಯನಿಕ್ಕಿದಿರಿ ನೋಡಾ! ಇಂತಪ್ಪ ತ್ರಿವಿಧಾಮೃತವ ದಣಿಯಲೆರೆದು ಸಲಹಿದಿರಿ, ಎನ್ನ ವಿವಾಹವ ಮಾಡಿದಿರಿ. ಸಯವಪ್ಪ ಗಂಡಗೆ ಕೊಟ್ಟಿರಿ. ಕೊಟ್ಟ ಮನೆಗೆ ಕಳುಹಲೆಂದು ಅಸಂಖ್ಯಾತರೆಲ್ಲರು ನೆರೆದು ಬಂದಿರಿ. ಬಸವಣ್ಣ ಮೆಚ್ಚಲು ಒಗೆತನವ ಮಾಡುವೆ. ಚೆನ್ನ ಮಲ್ಲಿಕಾರ್ಜುನನ ಕೈಪಿಡಿದು ನಿಮ್ಮ ಮುಂಡೆಗೆ ಹುವ್ವ ತಾಹೆನಲ್ಲದೆ ಹುಲ್ಲ ತಾರೆನು. ಅವಧರಿಸಿ, ನಿಮ್ಮಡಿಗಳೆಲ್ಲರು ಮರಳಿ, ಬಿಜಯಂಗೈವುದು, ಶರಣಾರ್ಥಿ"

ಎಂದು ಎಲ್ಲರಿಗೂ ಶರಣಾರ್ಥಿ ಹೇಳುತ್ತ ಎಲ್ಲರ ಆಶೀರ್ವಾದವನ್ನೂ ಕೈಕೊಂಡು ಮಹದೇವಿಯಕ್ಕ ಶ್ರೀಪರ್ವತಕ್ಕೆ ನಡೆದಳು. ಆಕೆ ಚೆನ್ನಮಲ್ಲಿಕಾರ್ಜುನನ ಮೋಹದಿಂದ ದ್ವೈತಭಾವನೆಯಲ್ಲಿದ್ದು ಪರಮಾತ್ಮನ ಸಾಕ್ಷಾತ್ಕಾರವಾಗಬೇಕೆಂದು ಹಂಬಲಿಸುತ್ತಿದ್ದಾಗ ದ್ವೈತಿಯಾಗಿದ್ದಳು. ಆದರೆ ಪ್ರಭುವಿನ ಪ್ರಭಾವದಿಂದ ದ್ವೈತವನ್ನು ಮೀರಿದಳು. ದೇವರೆಂದು ಬೇರೆ ಅರಸಬೇಕಾದುದಿಲ್ಲ, ತಾನೇ ಆ ಲಿಂಗ ಎಂಬ ಅದ್ವೈತ ಸ್ಥಿರಪಟ್ಟಿತು. ಅಂಗ, ಲಿಂಗ, ಲಿಂಗೈಕ್ಯ ಮೊದಲಾದುವೆಲ್ಲ ಮಾಯವಾದುವು.

೨೪೫. "ಆಕಾರವಲ್ಲದ ನಿರಾಕಾರದ ಲಿಂಗವ ಕೈಯಲ್ಲಿ ಹಿಡಿದು ಕೊರಳಲ್ಲಿ ಕಟ್ಟಿದೆವೆಂಬರು ನರಕ ಜೀವಿಗಳು. ಹರಿಬ್ರಹ್ಮರು ವೇದಶಾಸ್ತ್ರಂಗಳು ಅರಸಿ ಕಾಣದ ಲಿಂಗ! ಭಕ್ತಿಗೆ ಫಲ ಪದಂಗಳಲ್ಲವೆ ಲಿಂಗವಿಲ್ಲ. ಕರ್ಮಕ್ಕೆ ನರಕವಲ್ಲದೆ ಲಿಂಗವಿಲ್ಲ. ವೈರಾಗ್ಯಕ್ಕೆ ಮುಕ್ತಿಯಲ್ಲವೆ ಲಿಂಗವಿಲ್ಲ. ಜ್ಞಾನಕ್ಕೆ ಪರಿಭ್ರಮಣವಲ್ಲವೆ ಲಿಂಗವಿಲ್ಲ. ಇದು ಕಾರಣ ಅದ್ವೈತದಿಂದ ತನ್ನ ತಾನರಿದು ತಾನಾದರೆ ಚೆನ್ನ ಮಲ್ಲಿಕಾರ್ಜುನನ ಲಿಂಗ ತಾನೆ ಬೇರಿಲ್ಲ"

---

೨೪೪. ಮ. ದೇ. ವ. ಪುಟ ೧೧. ೨೪೫. ಮ. ದೇ. ವ. ಪುಟ ೩೭.

೨೪೬. "ಲಿಂಗವೆನ್ನೆ ಲಿಂಗೈಕ್ಯವೆನ್ನೆ, ಸಂಗವೆನ್ನೆ ನಿಸ್ಸಂಗವೆನ್ನೆ, ಆಯಿತ್ತೆನ್ನೆ ಆಗದೆನ್ನೆ, ನೀನೆನ್ನೆ ನಾನೆನ್ನೆ. ಚೆನ್ನಮಲ್ಲಿಕಾರ್ಜುನ ಲಿಂಗದಲ್ಲಿ ಘನ ಲಿಂಗೈಕ್ಯವಾದ ಬಳಿಕ ಏನೂ ಎನ್ನೆ"

ಎಂಬುದಾಗಿ ದೃಢ ನಿಶ್ಚಯದಿಂದ ಮೌನವನ್ನು ಧರಿಸಿದಳು, ಶ್ರೀಗಿರಿಯ ಕದಳೀ ವನದಲ್ಲಿ ಬಯಲಾದಳು.

---

೨೪೬. ಮ. ದೇ. ವ. ಪುಟ ೪೧.

೯ನೆಯ ಪ್ರಕರಣ

# ಅಷ್ಟಾವರಣಗಳು

ಹಿಂದಿನ ಪ್ರಕರಣಗಳಲ್ಲಿ ಐವರು ಮಹಾತ್ಮರ ವಿಚಾರವನ್ನೂ ಅವರ ಸಾಧನಮಾರ್ಗಗಳನ್ನೂ ವಿವರಿಸಿದ್ದೇವಷ್ಟೆ. ಸಿದ್ಧಾಂತದ ಹಲವಂಶಗಳು ಅವರ ವಚನಗಳಲ್ಲಿ ಕಂಡು ಬರುತ್ತವೆ. ಯಾವ ಸಿದ್ಧಾಂತವಾಗಲಿ ವೇದಾಂತವಾಗಲಿ, ನಿರ್ಮೋಹ, ನಿರಹಂಕಾರ, ನಿಷ್ಕಾಮಕರ್ಮ–ಇವುಗಳನ್ನು ತಳಹದಿಯಾಗಿಟ್ಟು ಸಾಧನೆಯಲ್ಲಿ ಶ್ರದ್ಧೆ, ಧ್ಯಾನದಲ್ಲಿ ಏಕಾಗ್ರತೆ, ಉಂಟಾಗ ಬೇಕೆಂದೂ ಚಿತ್ತಶುದ್ಧಿಯ ಮೂಲಕ ಭಕ್ತಿಜ್ಞಾನಗಳು ವಿಕಾಸವಾಗಬೇಕೆಂದೂ ಹೇಳುತ್ತವೆ. ಇವು ಲಭಿಸಬೇಕಾದರೆ ಪೂರ್ವಸಿದ್ಧತೆಗಳು ಬೇಕು, ಕೆಲವು ರಕ್ಷಣೆಗಳು ಬೇಕು. ವಚನಧರ್ಮದಲ್ಲಿ ಇಂಥವು ಎಂಟು ಇವೆ. ಗುರು ಲಿಂಗ ಜಂಗಮ ಪ್ರಸಾದ ಪಾದೋದಕ ವಿಭೂತಿ ರುದ್ರಾಕ್ಷಿ ಮತ್ತು ಮಂತ್ರ— ಇವೇ ಅಷ್ಟಾವರಣಗಳು. ಮತಪ್ರಕ್ರಿಯೆಗಳನ್ನೊಳಕೊಂಡು ವೀರಶೈವಕ್ಕೆ ವಿಶಿಷ್ಟಲಕ್ಷಣವಾಗಿ ಏರ್ಪಟ್ಟಿರುವುದಲ್ಲದೆ, ಮನಸ್ಸಿಗೆ ಆವಶ್ಯಕವಾದ ಶಿಕ್ಷಣವನ್ನೂ ಅವು ಕೊಡುತ್ತವೆ. ಅಷ್ಟಾವರಣಗಳಲ್ಲಿ ಬಾಹ್ಯ ಅಷ್ಟಾವರಣ ಗಳು, ಅಂತರಷ್ಟಾವರಣಗಳು, ಎಂದು ವಿಂಗಡಿಸಿ ಹೇಳುವುದುಂಟು. ಆದರೆ ಇಲ್ಲಿ ಬಾಹ್ಯ ಅಷ್ಟಾವರಣಗಳನ್ನು ಮಾತ್ರ ವಿವರಿಸುತ್ತೇವೆ.

ಗುರು: ಮುಮುಕ್ಷುವಿಗೆ ದೀಕ್ಷೆಯನ್ನು ಕೊಟ್ಟು ಜ್ಞಾನೋಪದೇಶ ಮಾಡುವವನೇ ಗುರು. ಇಂಥ ಗುರು ಮಠವನ್ನು ಕಟ್ಟಿಕೊಂಡು ಶಿಷ್ಯರನ್ನು ಪಡೆದುಕೊಂಡು ಇರುತ್ತಾನೆ. ಮತಸಂಬಂಧವಾದ ಕಾರ್ಯಗಳನ್ನು ಮಾಡಿಸುವುದಕ್ಕೆ ಅಲ್ಲಲ್ಲಿ ಕೆಲವರನ್ನು ಗುರು ಗೊತ್ತುಮಾಡಿಕೊಡುವುದೂ ಉಂಟು. ಈಗಲೂ ಹೊಸ ಹೊಸದಾಗಿ ಮಠಗಳು ಸ್ಥಾಪಿತವಾಗಬಹುದಾ ದರೂ, ಆಗಲೇ ನೂರಾರು ಮಠಗಳು ದೇಶದಲ್ಲೆಲ್ಲ ಹರಡಿ ಪ್ರತಿಮಠಕ್ಕೂ ಶಿಷ್ಯರು ಗೊತ್ತಾಗಿದ್ದಾರೆ. ಶಿಷ್ಯರು ಕೊಡುವ ಕಾಣಿಕೆಗಳಿಂದಲೂ ದತ್ತಿಗ ಳಿಂದಲೂ ಮಠಗಳು ತಮ್ಮ ಪಾರುಪತ್ಯವನ್ನು ನಡಸಿಕೊಂಡು ಬರುತ್ತವೆ. ಸಮಾಜ ಗುರುಗಳನ್ನು ಪೋಷಿಸಿಕೊಂಡು ಗುರುಗಳು ಶಿಷ್ಯರನ್ನು ಸಂರಕ್ಷಿಸಿ ಕೊಂಡು ಬರುತ್ತಿದಾರೆ.

ಹುಟ್ಟುವಾಗ ಭವಿಯಾಗಿರುವ ಮಗುವನ್ನು ಲಿಂಗಧಾರಣದಿಂದ ಭಕ್ತನನ್ನಾಗಿ ಮಾಡಬೇಕು

೨೪೭. "ಶಿವಭಕ್ತರಲ್ಲಿ ಗರ್ಭೋತ್ಪಾತವಾದ ಶಿಶುವಿಂಗೆ ಪಾದೋದಕದಿಂದ ಜಳಕವ ಮಾಡಿಸುವುದು. ವಿಭೂತಿಯ ಪಟ್ಟವಂ ಕಟ್ಟಿ ಕೊರಳಲ್ಲಿ ಲಿಂಗಸಾಹಿತ್ಯವಂ ಮಾಡಿ, ಪ್ರಸಾದದ ಎಣ್ಣೆ ಬೆಣ್ಣೆ ಹಾಲು ತುಪ್ಪವನೆರೆದು ಸಲಹುವುದೆ ಆಚಾರ"

ಶಿಷ್ಯನಿಗೆ ಕಾಲಕ್ರಮದಲ್ಲಿ ದೀಕ್ಷೆಯನ್ನು ಕೊಟ್ಟು ಜ್ಞಾನೋಪದೇಶ ಮಾಡಬೇಕು. ತಪ್ಪುದಾರಿಗೆ ಬೀಳದಂತೆ ಎಚ್ಚರಿಸಿ ಶಿಕ್ಷಿಸಿ ಕಾಪಾಡಬೇಕು. ಈ ಎಲ್ಲ ಕೆಲಸಗಳನ್ನೂ ಒಬ್ಬರೇ ಗುರುಗಳು ಮಾಡಬಹುದಾದರೂ ದೀಕ್ಷಾಗುರು ಶಿಕ್ಷಾಗುರು ಮೋಕ್ಷಗುರು ಎಂದು ಮೂರಾಗಿ ವಿಂಗಡ ಮಾಡುವುದುಂಟು. ಈ ಗುರುಗಳನ್ನು ಸಾಕ್ಷಾತ್ ಈಶ್ವರನೆಂದು ಭಾವಿಸ ತಕ್ಕದ್ದು. ಭಗವಂತನು ಗುರುರೂಪದಲ್ಲಿ ಬಂದು ಭಕ್ತರನ್ನು ಉದ್ಧಾರ ಮಾಡುವನೆಂಬುದೇ ಮುಖ್ಯವಾದ ನಂಬಿಕೆ. ತಮಗೆ ಬೇಕಾದ ಗುರುಗಳನ್ನು ಶಿಷ್ಯರು ಆರಿಸಿಕೊಳ್ಳಬಹುದಾದರೂ ಸಂಪ್ರದಾಯದಿಂದ ಬಂದಿರುವ ಗುರು ಗಳನ್ನು ಬಿಟ್ಟು ಬೇರೆ ಗುರುಗಳನ್ನು ಆಶ್ರಯಿಸಬಾರದು. ಗುರುಗಳು ಶಾಸ್ತ್ರಗಳನ್ನು ತಿಳಿದವರಾಗಿ ಷಟ್ಸ್ಥಲಬ್ರಹ್ಮಿಗಳಾಗಿ ಇರಬೇಕು. ಹಾಗಿಲ್ಲದಿದ್ದರೆ

೨೪೮. "ಉಪಚಾರದ ಗುರುವಿಂಗೆ ಉಪಚಾರದ ಶಿಷ್ಯ, ಉಪಚಾರದ ಲಿಂಗ, ಉಪಚಾರದ ಜಂಗಮ. ಉಪಚಾರದ ಪ್ರಸಾದವ ಕೊಂಡ ಗುರುವಿಂಗೆ ಭವದ ಲೆಂಕನಾಗಿ ಅಂಧಕನ ಕೈಯ ಅಂಧಕ ಹಿಡಿದಂತೆ, ಇವರಿಬ್ಬರೂ ಹೊಲಬುಗೆಟ್ಟರು ಕಾಣಾ ಗುಹೇಶ್ವರ"

ಎಂಬಂತೆ ಗುರು ಶಿಷ್ಯರಿಬ್ಬರೂ ಭ್ರಷ್ಟರಾಗುತ್ತಾರೆ. "ತನುವ ಕೊಟ್ಟು ಗುರುವನೊಲಿಸಲೇಬೇಕು" ಎಂದು ಹೇಳಿರುವುದರಿಂದ ಶರೀರಾಭಿಮಾನವನ್ನು ಬಿಡಿಸಿ ಗುರುಸೇವೆಯಿಂದ ಮನಸ್ಸನ್ನು ಉದಾತ್ತಗೊಳಿಸುವುದೇ ಮುಖ್ಯಾ ಶಯವೆಂದು ಗ್ರಹಿಸಬೇಕು.

ಲಿಂಗ: ಲಿಂಗ ಎಂದರೆ ಪರಮಾತ್ಮ, ಸಚ್ಚಿದಾನಂದ ಸ್ವರೂಪ.

---

೨೪೭. ಚೆ. ಬ. ವ. ಪುಟ ೨೪. ೨೪೮. ಪ್ರ. ದೇ. ವ. ಪುಟ ೧೬೩.

* " ಶಿವೋಽಸ್ತಿ ಸಚ್ಚಿದಾನಂದಃ ಪರಿಪೂರ್ಣೋ ನಿರಂಜನಃ ।
ಅಕಾರಣಮಕಾರ್ಯಂಚ ಮನೋವಾಚಾಮಗೋಚರಂ ॥
ಪರಂ ಗೂಢಂ ಶರೀರಸ್ಥಂ ಲಿಂಗಕ್ಷೇತ್ರಮನಾದಿವತ್ ।
ಯಥಾದಿಮೈಶ್ವರಂ ತೇಜಸ್ತಲ್ಲಿಂಗಂ ಪಂಚಸಂಜ್ಞಿತಂ ॥ "

ಆದುದರಿಂದ ಶಿಲಾದಿಗಳಲ್ಲಿ ಮಾಡಿದುದು 'ಲಿಂಗ'ವೆಂದಲ್ಲ. ಭಾವಲಿಂಗ, ಪ್ರಾಣಲಿಂಗ ಮತ್ತು ಇಷ್ಟಲಿಂಗ ಎಂದು ಲಿಂಗದಲ್ಲಿ ಮೂರು ಭೇದಗಳು. ಇವುಗಳನ್ನು ಗುರು ಕಾರಣತನು, ಸೂಕ್ಷ್ಮತನು ಮತ್ತು ಸ್ಥೂಲತನುಗಳಲ್ಲಿ ದೀಕ್ಷಾಕಾಲದಲ್ಲಿ ಸ್ಥಾಪಿಸುವನು. ಬ್ರಾಹ್ಮಣರಲ್ಲಿ ಉಪನಯನ ಸಂಸ್ಕಾರ ಹೇಗೋ ಹಾಗೆ ವೀರಶೈವರಲ್ಲಿ ‡ದೀಕ್ಷಾಸಂಸ್ಕಾರ. ವೈಷ್ಣವರಿಗೆ ಸಾಲಗ್ರಾಮ ಹೇಗೋ ಹಾಗೆ ವೀರಶೈವರಿಗೆ ಇಷ್ಟಲಿಂಗ. ಆದರೆ ಇಷ್ಟಲಿಂಗವನ್ನು ದೇಹದ ಮೇಲೆ ಸದಾ ಧರಿಸಿಕೊಂಡಿರಬೇಕು; ಪೂಜಾಕಾಲದಲ್ಲಿ ಎಡಗೈಯಲ್ಲಿಟ್ಟು ಕೊಂಡು ಪೂಜೆಮಾಡಬೇಕು. ಇಷ್ಟಲಿಂಗದ ಮೂಲಕ ಪ್ರಾಣಲಿಂಗ ಭಾವಲಿಂಗಗಳ ಜ್ಞಾನವನ್ನುಂಟುಮಾಡಿಕೊಳ್ಳಬೇಕೆಂದು ಅಭಿಜ್ಞರು ಹೇಳುತ್ತಾರೆ. "ಮನವ ಕೊಟ್ಟು ಲಿಂಗವನೊಲಿಸಲೇಬೇಕು" ಎಂದಿರುವುದರಿಂದ ಲಿಂಗಪೂಜೆ ಎಂಬುದು ಮನಸ್ಸನ್ನು ಸ್ಥಿರಗೊಳಿಸುವುದಕ್ಕೂ ಕೇಂದ್ರೀಕರಿಸುವುದಕ್ಕೂ ಸಹಾಯ ಮಾಡುತ್ತದೆ, ಎಂದು ತಿಳಿಯಬೇಕು. ಲಿಂಗ ಸಾಕ್ಷಾತ್ತಾಗಿ ಪರವಸ್ತುವಾಗಿರುವುದರಿಂದ, ಒಳಗೂ ಹೊರಗೂ ಆ ಪರವಸ್ತುವಿನೊಡನೆ ತಾನು ಕೂಡಿರುವನೆಂದು ತಿಳಿದು ಶ್ರದ್ಧೆವಹಿಸಿ ಅನನ್ಯಭಕ್ತಿಯಿಂದ ನಡೆದುಕೊಳ್ಳಬೇಕು.

ಜಂಗಮ: ಜಂಗಮನು ಜ್ಞಾನಮೂರ್ತಿ, ಎಂದರೆ ಅನುಭವ ಜ್ಞಾನವನ್ನು ಪಡೆದವನು, ಬ್ರಹ್ಮಸಾಕ್ಷಾತ್ಕಾರವನ್ನು ಪಡೆದವನು. ಗುರುಗಳಂತೆ ಜಂಗಮರು ಮಠಮಾನ್ಯಗಳನ್ನು ಹಾಕಿಕೊಂಡು ಗೊತ್ತಾದ ಶಿಷ್ಯಮಂಡಲಿಯುಳ್ಳವರಲ್ಲ. ಯದೃಚ್ಛಾಲಾಭಸಂತುಷ್ಟರಾಗಿ ನಿಂತೆಡೆಯೇ ಮಠವಾಗಿ ಹತ್ತಿರ ಬಂದವರೇ ಶಿಷ್ಯರಾಗಿ ಇರತಕ್ಕವರು. ಯಾರಾದರೂ ಭಕ್ತಿಯಿಂದ ಮಠವನ್ನು ಕಟ್ಟಿಸಿಕೊಟ್ಟು ಇರಹೇಳಿದರೆ ಒಂದು ಕಡೆ ನಿಲ್ಲುವುದುಂಟು.

---

* ಉತ್ತರವಾತೂಲದಿಂದ ತೆಗೆದು ವೀರಶೈವಾಮೃತಮಹಾಪುರಾಣ, ಮೊದಲನೆಯ ಕಾಂಡ, ಮೂರನೆಯ ಸಂಧಿಯಲ್ಲಿ ಉದ್ಧರಿಸಿದೆ. ‡ ಸ್ಥೂಲ ದೃಷ್ಟಿಯಿಂದ ಹೇಳಿದೆ.

ಇಂಥವರು ಸ್ಥಿರಜಂಗಮರೆಂದು ಹೆಸರು ಪಡೆಯುತ್ತಾರೆ. ಆದರೆ ಸಾಮಾನ್ಯ ವಾಗಿ ಜಂಗಮರು ಬೌದ್ಧಭಿಕ್ಷುಗಳಂತೆ ಪ್ರವಾಸಮಾಡುತ್ತ ಮತಪ್ರಚಾರದಲ್ಲಿ ನಿರತರಾಗಿರತಕ್ಕವರು. ಇಂಥ ಜಂಗಮರು ಚರಜಂಗಮರು. ವೀರಶೈವ ಗೃಹಸ್ಥರು ಇಂಥ ಜಂಗಮರ ನಿರೀಕ್ಷಣೆಮಾಡುತ್ತ ಅವರು ಬಂದಾಗ ದಾಸೋಹಕ್ರಮವನ್ನು ನಡಸಬೇಕು. ಜಂಗಮ ಬೇಡಬಾರದು, ಭಕ್ತ ಬೇಡಿಸಿಕೊಳ್ಳಬಾರದು. ಇನ್ನು ಮೂರನೆಯ ತೆರದ ಜಂಗಮರೂ ಇದ್ದಾರೆ. ಅವರು ಪರಜಂಗಮರು, ಅಲ್ಲಮಪ್ರಭುವಿನಂಥವರು,

* "ಸತ್ಸ್ವರೂಪಂ ಜಕಾರಂಚ ಚಿತ್ಸ್ವರೂಪಂ ಗಕಾರಕಂ ।
ಆನಂದತ್ವಂ ಮಕಾರಂಚ ನಿತ್ಯಮಾನೇನ ಜಂಗಮಂ ॥
ಜಕಾರಂ ಜನನಂ ನಾಸ್ತಿ ಗಕಾರಂ ಗಮನಂ ನಹಿ ।
ಮಕಾರಂ ಮರಣಂ ನಾಸ್ತಿ ತಸ್ಯ ಜಂಗಮಲಕ್ಷಣಂ ॥"

ಎಂಬ ಲಕ್ಷಣಕ್ಕನುಸಾರವಾಗಿ ಪರಶಿವಮೂರ್ತಿಗಳಾದವರು.

ದೀಕ್ಷಾದಿ ಕಾರ್ಯಗಳನ್ನು ಮಾಡುವ ಹಕ್ಕು ಜಂಗಮರಿಗಿಲ್ಲೆಂಬ ಶಾಸ್ತ್ರವಚನಗಳೇನೂ ಇಲ್ಲ. ಗುರುಗಳಾದವರು ದೊರೆಯದಿದ್ದಾಗ ಜಂಗಮ ರಿಂದ ಲಿಂಗಧಾರಣಾದಿಗಳನ್ನು ಮಾಡಿಸಬೇಕೆಂದು ಕೆಲವು ಗ್ರಂಥಗಳಲ್ಲಿ ಹೇಳಿದೆ. ಜಂಗಮರು ಜ್ಞಾನಮಾರ್ಗದವರು, ಆತ್ಮಸಾಕ್ಷಾತ್ಕಾರ ಪಡೆದವರು ಆದ್ದರಿಂದ ಪೌರೋಹಿತ್ಯಾದಿ ಕರ್ಮಶೃಂಖಲಗಳಿಂದ ಬಂಧಿತರಾಗದೆ ಬಯಲಂತೆ ಸ್ವೇಚ್ಛೆಯಾಗಿರತಕ್ಕವರು. ಗುರು ಲಿಂಗ ಜಂಗಮರಿಗೆ ಭೇದವಿಲ್ಲ ವೆಂಬುದೂ, ದೀಕ್ಷಾ ಶಿಕ್ಷಾದಿ ಸಮಸ್ತ ಕಾರ್ಯಗಳಿಗೂ ಜಂಗಮರು ಕರ್ತರೆಂಬುದೂ †ಶಾಸ್ತ್ರವಚನ.

---

* ವೀರಾಗಮವಾಕ್ಯವೆಂದು ವೀರಶೈವಾಮೃತಮಹಾಪುರಾಣ ಮೊದಲನೆಯ ಕಾಂಡ, ಮೂರನೆಯ ಸಂಧಿಯಲ್ಲಿ ಉದ್ಧರಿಸಿದೆ.

† ಆರಾಧ್ಯ ಸಾಂಪ್ರದಾಯಕರೆ ದೀಕ್ಷೆಗಳನೀ
ಧಾರುಣಿಯೊಳೆಯ್ದೆ ಮಾಳ್ಪುದು ಜಂಗಮಂ ಸುಸಂ
ಸ್ಕಾರದೀಕ್ಷೆಯ ಮಾಡಬಾರದೆಂಬವರ ನುಡಿಯಂತನಾಗಮ ವಚನವೈ ।
ಎಂದು ವೀರಶೈವಾಮೃತಮಹಾಪುರಾಣದಲ್ಲಿ ಹೇಳಿದೆ, ಮತ್ತು ವೀರಾಗಮದ

ಒಟ್ಟಿನಲ್ಲಿ ಸಾಧಕನಿಗೆ ಜಂಗಮರ ಆಶ್ರಯ ಮತ್ತು ಸಹಾಯಗಳು ಬಹಳ ಆವಶ್ಯಕ. ಬ್ರಹ್ಮಜ್ಞಾನಿಗಳು, ಪರಮ ವೈರಾಗ್ಯಶಾಲಿಗಳು, ಎಂಬುದಕ್ಕೆ ಪ್ರತ್ಯಕ್ಷ ಆದರ್ಶಗಳಾಗಿ ಜಂಗಮರಿರುವುದರಿಂದ, ಸಾಧಕನಿಗೆ ನಂಬಿಕೆಯೂ ಶ್ರದ್ಧೆಯೂ ಬೇರೂರುತ್ತವೆ. ಭಕ್ತನನ್ನು ಭವಸಾಗರದಿಂದ ದಾಟಿಸುವ, ಗನ್ಯಸ್ಥಾನಕ್ಕೆ ಕೊಂಡೊಯ್ಯುವ ಮಹಾತ್ಮನೇ ಜಂಗಮ. ಆತನಲ್ಲಿ ನಿಶ್ಚಲವಾದ ಭಕ್ತಿಯನ್ನಿಡಬೇಕು.

ಪರಜಂಗಮನಾದ ಅಲ್ಲಮಪ್ರಭು ಕಲ್ಯಾಣಪಟ್ಟಣದಲ್ಲಿ ಶೂನ್ಯಸಿಂಹಾಸನವನ್ನು ಏರಿದ ಕಾರಣ, ಶೂನ್ಯಸಿಂಹಾಸನದ ಪರಂಪರೆಯ ವಿರಕ್ತ ಮಠಗಳು ನೂರಾರು ದೇಶದಲ್ಲಿವೆ. ಆ ಮಠಗಳ ಶಿಷ್ಯರೂ ಲಕ್ಷಗಟ್ಟಲೆ ಇದ್ದಾರೆ.

**ಪ್ರಸಾದ:** ಗುರು ಲಿಂಗ ಜಂಗಮರು ಅನುಗ್ರಹಿಸಿ ಕೊಟ್ಟುದೇ ಪ್ರಸಾದ. ಇದರಿಂದ ಶುದ್ಧ ಸಿದ್ಧ ಪ್ರಸಿದ್ಧ ಎಂದು ಪ್ರಸಾದಗಳಲ್ಲಿ ಮೂರು ವಿಧ. ಅವರ ದೃಷ್ಟಿಯಿಂದ ಸ್ಪರ್ಶನದಿಂದ ಪಾವನವಾಗಿ ಬ್ರಹ್ಮಸ್ವರೂಪವೇ ಆಗಿರುವುದರಿಂದ ಪ್ರಸಾದವನ್ನು ಭಕ್ತಿಯಿಂದ ತೆಗೆದುಕೊಳ್ಳಬೇಕು.

೨೪೯. "ಪ್ರಸಾದವೇ ಪರಮ ಜ್ಞಾನ. ಪ್ರಸಾದವೇ ಪರಾಪರ. ಪ್ರಸಾದವೇ ಪರಬ್ರಹ್ಮ. ಪ್ರಸಾದವೇ ಪರಮಾನಂದ. ಪ್ರಸಾದವೇ ಗುರು. ಪ್ರಸಾದವೇ ಲಿಂಗ. ಪ್ರಸಾದವೇ ಜಂಗಮ. ಪ್ರಸಾದವೇ ಪರಿಪೂರ್ಣ. ಸೌರಾಷ್ಟ್ರ ಸೋಮೇಶ್ವರ ಲಿಂಗದ ಪ್ರಸನ್ನತೆಯೇ ಪ್ರಸಾದ. ಇಂತಪ್ಪ ಪ್ರಸಾದದ ಮಾಹಾತ್ಮ್ಯಕ್ಕೆ ನಮೋ ನಮೋ ಎನುತಿದ್ದೆನು."

---

ವಾಕ್ಯವೆಂದು

"ದೀಕ್ಷಾಕರ್ತಾ ಜಂಗಮಶ್ಚ ಜಗದ್ವಂದ್ಯೋ ಹಿ ಜಂಗಮಃ ।
ಘೃಣಾದೃಷ್ಟಿರ್ಘೃಣಾ ವಾಕ್ಯೋ ಘೃಣಾಮೂರ್ತಿರ್ನಿರಂತರಂ ॥
ಕ್ರಿಯಾ ಕರ್ಮ ಸ್ವಕರ್ಮಜ್ಞ ಶ್ಶಿಕ್ಷಾಚಾರ್ಯಶ್ಚ ಜಂಗಮಃ ।
ದೀಕ್ಷಾಮೂರ್ತಿರ್ಮಹತ್ಕರ್ತಾ ಶಿಕ್ಷಾ ಮೂರ್ತಿರ್ಮಹಾಪ್ರಭುಃ ॥
ದೀಕ್ಷಾ ಶಿಕ್ಷಾಮಹಾಚಾರ್ಯ ಸ್ಸುರಕ್ಷಾ ಮೂರ್ತಿ ಜಂಗಮಃ ।
ದೀಕ್ಷಾ ಮೂರ್ತಿರ್ಗುರುರ್ಲಿಂಗಂ ಪೂಜಾಮೂರ್ತಿಃ ಪರಶ್ಶಿವಃ ॥
ದೀಕ್ಷಾಪೂಜಾ ಸುಶಿಕ್ಷಾಣಾಂ ಸರ್ವಕರ್ತಾಚ ಜಂಗಮಃ"

ಎಂಬುದನ್ನು ಉದ್ಧರಿಸಿದೆ. (ಏಳನೆಯ ಕಾಂಡ ನಾಲ್ಕನೆಯ ಸಂಧಿ)

೨೪೯. ವ. ಶಾ. ಸಾ. ಭಾಗ ೧. (ಉ.) ಪುಟ ೨೨.

೨೫೦. "ಶುದ್ಧ ಸಿದ್ಧ ಪ್ರಸಿದ್ಧ ಪ್ರಸಾದವೆಂತೆಂದು ಬೆಸಗೊಂಡಡೆ ಹೇಳಿಹೆ ಕೇಳಿರಿ. ಶುದ್ಧ ಪ್ರಸಾದ ಗುರುಮುಖದಿಂದ ಬಂದುದು, ಸಿದ್ಧ ಪ್ರಸಾದ ಲಿಂಗಮುಖದಿಂದ ಬಂದುದು, ಪ್ರಸಿದ್ಧ ಪ್ರಸಾದ ಜಂಗಮ ಮುಖದಿಂದ ಬಂದುದು. ಇದರೊಳಗಾವುದು ಘನವೆಂಬೆ, ಅವುದು ಕಿರಿದೆಂಬೆ? ಘನಕ್ಕೆ ಘನವಾದ ಮಹಾ ಘನ ಪ್ರಸಾದ. ಗುರುಪ್ರಸಾದ ತನು ಶುದ್ಧ, ಲಿಂಗಪ್ರಸಾದ ಮನ ಶುದ್ಧ, ಜಂಗಮ ಪ್ರಸಾದ ಪ್ರಾಣ ಶುದ್ಧವಾಯಿತ್ತು. ಶರಣರ ಸಂಗದಿಂದ ಸಾಧ್ಯವಾಯಿತ್ತು. ಇದು ಕಾರಣ ಕೂಡಲ ಚೆನ್ನಸಂಗಮ ದೇವಯ್ಯ ಈ ತ್ರಿವಿಧ ಪ್ರಸಾದವ ಕೊಂಡು ಎನ್ನ ಭವ ನಾಸ್ತಿಯಾಯಿತ್ತು."

೨೫೧. "ಕಾಯ ಗುರು, ಪ್ರಾಣ ಲಿಂಗ, ಜ್ಞಾನ ಜಂಗಮ. ಕಾಯದಲ್ಲಿ ಶುದ್ಧ ಪ್ರಸಾದ, ಪ್ರಾಣದಲ್ಲಿ ಸಿದ್ಧ ಪ್ರಸಾದ, ಜ್ಞಾನದಲ್ಲಿ ಪ್ರಸಿದ್ಧ ಪ್ರಸಾದ. ಇಂತೀ ತ್ರಿವಿಧ ಪ್ರಸಾದ ನಿರ್ಣಯ ಕೂಡಲ ಚೆನ್ನಸಂಗಾ ನಿಮ್ಮ ಶರಣಂಗೆ"

ಪ್ರಸಾದ ಹೀಗೆ ಚಿತ್ತಶುದ್ಧಿಯನ್ನುಂಟುಮಾಡುತ್ತದೆ, ಮನಸ್ಸಿಗೆ ಶಾಂತಿಯನ್ನುಂಟುಮಾಡುತ್ತದೆ. ಸಾಧಕನು ಆಹಾರವನ್ನು ಪ್ರಸಾದವಾಗಿ ಪರಿವರ್ತಿಸಿಕೊಂಡು ಭುಂಜಿಸಬೇಕಾದುದೇ ಕರ್ತವ್ಯ; ಮತ್ತು ಮಿತಾಹಾರಿಯಾಗಿರಬೇಕಾದುದೂ ಕರ್ತವ್ಯ. ಏಕೆಂದರೆ ಅನ್ನಾಹಾರಾದಿಗಳು ಇಲ್ಲದೇ ಇರುವವನಿಗೂ ಮಿತಿಮೀರಿ ಊಟಮಾಡುವವನಿಗೂ ಚಿತ್ತೈಕಾಗ್ರತೆ ದೊರೆಯುವುದಿಲ್ಲ, ಧ್ಯಾನ ಸುಲಭದಲ್ಲಿ ಕೈಗೂಡುವುದಿಲ್ಲ. ಆಹಾರವನ್ನು ತೆಗೆದುಕೊಳ್ಳುವಾಗ,

೨೫೨. "ಮೌನದಲುಂಬುದು ಆಚಾರವಲ್ಲ. ಲಿಂಗಾರ್ಪಿತವ ಮಾಡಿದ ಬಳಿಕ ತುತ್ತಿಗೊಮ್ಮೆ ಶಿವ ಶರಣು ಎನ್ನುತ್ತಿರಬೇಕು. ಕರಣವೃತ್ತಿಗಳಡಗುವುವು ಕೂಡಲ ಸಂಗನ ನೆನೆವುತ್ತ ಉಂಡಡೆ"

ಪಾದೋದಕ: ಇದು ಗುರು ಲಿಂಗ ಜಂಗಮ ಸಂಬಂಧದಿಂದ *ಮೂರು ತೆರನಾಗಿದೆ. ಪುಣ್ಯನದಿಗಳಲ್ಲಿ ಪುಣ್ಯತೀರ್ಥಗಳಲ್ಲಿ ಸ್ನಾನಮಾಡುವುದರಿಂದಲೂ, ಅವುಗಳ ಉದಕವನ್ನು ಸೇವಿಸುವುದರಿಂದಲೂ ಪಾಪ

---

೨೫೦. ಷ. ವ. ಶಾ. ಸಾ. ಭಾಗ ೧. (ಉ.) ಪುಟ ೫೪.
೨೫೧. ವ.ಶಾ.ಸಾ. ಭಾಗ ೧.(ಉ.)ಪುಟ ೬೪. ೨೫೨. ಬ. ವ. ಪುಟ ೧೨೦

* ದಶವಿಧ ಮೊದಲಾದುವನ್ನು ಇಲ್ಲಿ ಪ್ರಸ್ತಾಪಿಸಿಲ್ಲ.

ಪರಿಹಾರವಾಗುವುದೆಂಬ ನಂಬಿಕೆ ಇರುವುದಷ್ಟೆ. ಪಾಪಪರಿಹಾರವಾಗುವ ಕಾರಣದಿಂದ ಮನಸ್ಸಿನಲ್ಲಿ ನಿರ್ಭಯವೂ ಶಾಂತಿಯೂ ಉದಯಿಸಿ ಧ್ಯಾನಕ್ಕೆ ಸಹಾಯವಾಗುತ್ತದೆ. ಪರಮಾತ್ಮನೇ ಗುರು ಲಿಂಗ ಜಂಗಮ ರೂಪಗಳಾಗಿ ರುವುದರಿಂದ "ಇಮಂ ಮೇ ಗಂಗೇ ಚ ಯಮುನೇ ಚ—" ಎಂದು ಮುಂತಾಗಿ ಹೇಳುವ ಎಲ್ಲ ತೀರ್ಥಗಳನ್ನೂ ಈ ಪಾದೋದಕದಲ್ಲಿ ಕಾಣಬಹುದೆಂದು ನಂಬಿಕೆ. ಜ್ಞಾನಿಗಳ ಅನುಗ್ರಹಸಂಪಾದನೆಗೆ ಭಕ್ತನಲ್ಲಿ ಕಿಂಕರಭಾವ ಆವಶ್ಯಕ. ತಾನು ಗುರು ಲಿಂಗ ಜಂಗಮರ ಕಿಂಕರ ಎಂದು ಪ್ರತ್ಯಕ್ಷವಾಗಿ ತಿಳಿಯುವುದಕ್ಕೆ ಈ ಪಾದೋದಕ ಸಹಾಯವಾಗಿದೆ. ತಾನು ಬಳಸುವ ನೀರು ಪುಣ್ಯೋದಕವೆಂಬ ಭಾವನೆಯೂ ಇರುವುದರಿಂದ, ದೇಹಶುದ್ಧಿ ಮನಶ್ಶುದ್ಧಿ ಮತ್ತು ಭಾವಶುದ್ಧಿಗಳು ಕೈಗೂಡುತ್ತವೆ.

* "ಸರ್ವ ತೀರ್ಥಾಭಿಷೇಕಾದಿ ಶುದ್ಧಿರ್ಮನಸಿ ಜಾಯತೆ ।  
ಗುರೋರಂಘ್ರಿ ಸ್ಪರ್ಶಜಲಂ ತಸ್ಮಾಚ್ಛಿರಸಿ ಧಾರ್ಯತೆ ॥  
ಶೋಷಣಂ ಪಾಪಪಂಕಸ್ಯ ದೀಪನಂ ಜ್ಞಾನ ತೇಜಸಃ ।  
ಗುರುಪಾದೋದಕಂ ಪೀತ್ವಾ ಸಂಸಾರದ್ರುಮನಾಶನಂ ॥  
ಆದಿಜಂಗಮ ಪಾದಾಬ್ಜ ಕ್ಷಾಲಿತಾಂಬುಕಣಸ್ತಥಾ ।  
ಜನಯಂತಿ ಸದಾ ದೇವಿ ಬ್ರಹ್ಮ ವಿಷ್ಣು ಸುರಾದಿಮಾಂ ॥  
ಕ್ಷಾಲ್ಯತೋಯಾಂಘ್ರಿ ನಿರ್ಮಾಲ್ಯಂ ಪ್ರಸಾದಂತು ಚರಸ್ಯಚ ।  
ಯೋಪಿ ಲಿಂಗಾರ್ಪಿತಂ ಭುಂಜೇತ್ ಸ ರುದ್ರೋ ನಾತ್ರ ಸಂಶಯಃ"

ವಿಭೂತಿ: ಪರಮೇಶ್ವರನು ಧರಿಸಿದ ವಿಭೂತಿಯಾದುದರಿಂದ, ಆತನ ಸಂಬಂಧದಿಂದ ಅದು ಪರಮಪಾವನ. ಕಾಮನನ್ನು ದಹಿಸಿ ಆ ಭಸ್ಮಲೇಪನ ವನ್ನು ಪರಮೇಶ್ವರನು ಮಾಡಿಕೊಂಡನು. ಆದುದರಿಂದ ವಿಭೂತಿಧಾರಣ ಕಾಮಾದಿ ಅರಿಷಡ್ವರ್ಗವನ್ನು ದಹಿಸಿದುದಕ್ಕೆ ಗುರುತು. ವಿಭೂತಿಧಾರಣ ಮಾಡಿ ಪರಮೇಶ್ವರನಂತೆ ಕಾಣುವುದರಿಂದ ಆ ಅನುಕರಣ ಆತನ ನೆನಪನ್ನು ಸದಾ ಉಂಟುಮಾಡುತ್ತದೆ. ಆದುದರಿಂದ ಪಾಪಗಳು ಆ ಭಕ್ತನನ್ನು ಸೋಕಲಾರವು,

---

*ವೀರಶೈವಾಮೃತಮಹಾಪುರಾಣ ಮೊದಲನೆಯ ಕಾಂಡ, ಮೂರನೆಯ ಸಂಧಿ ಯಲ್ಲಿ ಉದ್ಧರಿಸಿದೆ.

೨೫೩. "........ಶ್ರೀ ವಿಭೂತಿಯನೊಲಿದು ಧರಿಸಿದರೆ ಭವವ ಪರಿವುದು, ದುರಿತ ಸಂಕುಳವನೊರಸುವುದು" ?

೨೫೪. "ಮುನ್ನ ಮಾಡಿದ ಪಾಪವೆಂತು ಹೋಹುದೆಂದು ಚಿಂತಿಸಬೇಡ. ಕಹಿ ಸೋರೆಯ ಕಾಯ ತಂದು, ವಿಭೂತಿಯ ತುಂಬಿದರೆ ಸಿಹಿಯಾಗವೇ ಮೂರು ದಿವಸಕ್ಕಯ್ಯ? ಹಲವು ಕಾಲ ಕೊಂದ ಸೊನೆಗಾರನ ಕತ್ತಿಯಾದರೇನು, ಪರುಷ ಮುಟ್ಟಲಿಕ್ಕೆ ಹೊನ್ನಾಗದೇ ಅಯ್ಯ? ಲಲಾಟದಲ್ಲಿ ವಿಭೂತಿಯ ಬರೆಯಲಿಕ್ಕೆ ಪಾಪ ಪಲ್ಲಟವಾಗದೆ ಕೂಡಲ ಸಂಗಮ ದೇವಾ"

ವಿಭೂತಿ ಎಂಬುದು ಐಶ್ವರ್ಯ, ವಿಭೂತಿ ಎಂಬುದು ತ್ಯಾಗ. ಪರಮಾರ್ಥದ ಐಶ್ವರ್ಯವನ್ನು ದೊರಕಿಸಿ, ಐಹಿಕದ ತ್ಯಾಗವನ್ನು ಮಾಡಿಸುವುದರಿಂದ ಸಾಧಕನಿಗೆ ಇದು ಅತ್ಯಾವಶ್ಯಕ. ವಿಭೂತಿಸ್ನಾನ, ವಿಭೂತಿಯನ್ನು ಆಪಾದ ಮಸ್ತಕವಾಗಿ ಲೇಪಿಸಿಕೊಳ್ಳುವುದು, ಇವುಗಳಿಂದ ಮಹತ್ಫಲಗಳು ದೊರೆಯುತ್ತವೆಂದು ಗ್ರಂಥಗಳು ತಿಳಿಸುತ್ತವೆ.

* "ಅನಾದಿ ಶಾಶ್ವತಂ ನಿತ್ಯಂ ಚೈತನ್ಯಂ ಚಿತ್ಸ್ವರೂಪಕಂ ।
ಚಿದಂಗ ವೃಷಭಾಕಾರಂ ಚಿದ್ಭಸ್ಮ ಲಿಂಗಧಾರಣಂ ॥
ಆಪಾದ ಮಸ್ತಕಾಂತಂ ಚ ರೋಮ ರೋಮ ಭವೇಚ್ಛಿವಂ ।
ಸ್ವಕಾಯಮುಚ್ಯತೇ ಲಿಂಗಂ ವಿಭೂತ್ಯುದ್ಧೂಳನಾದ್ಭವೇತ್"

ರುದ್ರಾಕ್ಷಿ: ಇದು ಕೂಡ ಪರಮೇಶ್ವರನ ಸಂಬಂಧವಾದುದು. ತ್ರಿಪುರಸಂಹಾರಕಾಲದಲ್ಲಿ ಈಶ್ವರನ ನೇತ್ರಗಳಿಂದ ಬಿದ್ದ ಅಶ್ರು ಬಿಂದುಗಳೇ ರುದ್ರಾಕ್ಷಿಗಳಾದುವೆಂದು ಪುರಾಣಗಳಲ್ಲಿ ಹೇಳಿದೆ. ಇದರಲ್ಲಿ ಏಕಮುಖ ರುದ್ರಾಕ್ಷಿ ಪಂಚಮುಖ ರುದ್ರಾಕ್ಷಿ, ಎಂದು ಎರಡು ಭೇದಗಳು. ರುದ್ರಾಕ್ಷಿಯನ್ನು ಒಂದೇ ಆಗಿ ಕೊರಳಲ್ಲಿ ಧರಿಸಿಕೊಳ್ಳುವುದುಂಟು. ರುದ್ರಾಕ್ಷಿಯ ಸರಗಳನ್ನು ಕೊರಳು, ತೋಳು, ಮುಂತಾದ ಸ್ಥಳಗಳಲ್ಲಿ ಧರಿಸಿಕೊಳ್ಳುವುದೂ ಉಂಟು. ಸಣ್ಣ ರುದ್ರಾಕ್ಷಿಗಳ ಸರವನ್ನು ಜಪಸರವಾಗಿ ಉಪಯೋಗಿಸುವುದೂ ಉಂಟು. ಶಿವನ ಚಿಹ್ನೆಗಳನ್ನು ಧರಿಸಿ ಶಿವನಂತಾಗಬೇಕೆಂಬ ತತ್ತ್ವ ರುದ್ರಾಕ್ಷಿಧಾರಣದಲ್ಲಿ ಅಡಗಿದೆ. ರುದ್ರಾಕ್ಷಿ ಮುಕ್ತಿಯನ್ನು ದೊರಕಿಸುತ್ತದೆ.

---

೨೫೩. ಸಿ. ರಾ. ವ. ಪುಟ ೧೩ ೨೫೪. ಬ. ವ. ಪುಟ ೧೨.

* ವೀರಶೈವಾಮೃತಮಹಾಪುರಾಣ ಮೊದಲನೆಯ ಕಾಂಡ, ಮೂರನೆಯ ಸಂಧಿ.

* "ರುದ್ರಾಕ್ಷಂ ಮುಕ್ತಿಮೂಲಂ ಚ, ರುದ್ರಾಕ್ಷಂ ಜ್ಞಾನಮುಚ್ಯತೇ ರುದ್ರಾಕ್ಷಂ ಬ್ರಹ್ಮಮುಚ್ಯತೆ"

ಗುರು ಲಿಂಗ ಜಂಗಮರು ಆಶೀರ್ವಾದಪೂರ್ವಕವಾಗಿ ಅನುಗ್ರಹಿಸಿ ಕೊಟ್ಟ ರುದ್ರಾಕ್ಷಿಯಲ್ಲಿ ಹೆಚ್ಚು ಫಲವುಂಟು. ಸಾಧಕನಿಗೆ ತನ್ನ ಪಾಪಗಳು ನಾಶವಾಗಿವೆ, ಪರಮೇಶ್ವರನ ಸಂರಕ್ಷಣೆಯಲ್ಲಿ ತಾನಿದ್ದೇನೆ, ಎಂಬ ನಂಬಿಕೆಗಳು ಮುಖ್ಯವಾಗಿರುವುದರಿಂದಲೂ, ವಿಭೂತಿ ರುದ್ರಾಕ್ಷಿಧಾರಣಗಳು ಮತವೈಶಿಷ್ಟ್ಯಗಳಾಗಿರುವುದರಿಂದಲೂ, ಅವುಗಳಿಗೆ ಪ್ರಾಶಸ್ತ್ಯವನ್ನು ಕಲ್ಪಿಸಲಾಗಿದೆ.

ಮಂತ್ರ: ಇದನ್ನು ಬಹಳ ರಹಸ್ಯದಲ್ಲಿ ಗುರು ಶಿಷ್ಯನಿಗೆ ಬೋಧಿಸಬೇಕೆಂದು ಶಾಸ್ತ್ರವಚನವಿದೆ. 'ನಮಶ್ಶಿವಾಯ' ಎಂಬುದು ಪಂಚಾಕ್ಷರೀ ಮಂತ್ರ; ಓಂ ಎಂಬ ಪ್ರಣವದೊಡನೆ ಸೇರಿ ಇದು ಷಡಕ್ಷರ ಮಂತ್ರವೆನಿಸುತ್ತದೆ. "ಸರ್ವೇ ವರ್ಣಾಃ ಶಿವಾತ್ಮಕಾಃ" ಎಂದಿರುವುದಾದರೂ ಎಲ್ಲ ಮಂತ್ರಗಳಿಗೂ ಶ್ರೇಷ್ಠವಾದುದು ಪಂಚಾಕ್ಷರೀ ಮಂತ್ರ. ಇದನ್ನು ಜಪಿಸುವುದರಿಂದ ಎಲ್ಲ ಪಾಪಗಳೂ ನಿರ್ಮೂಲವಾಗುತ್ತವೆ; ಹುಟ್ಟು ಸಾವುಗಳು ನಾಶವಾಗುತ್ತವೆ.

* "ಭಾಳೇ ತ್ರಿಪುಂಡ್ರಕಶ್ಚೈವ ಗಳೇ ರುದ್ರಾಕ್ಷ ಮಾಲಿಕಾ ।
ಮುಖೇ ಷಡಕ್ಷರೋ ಮಂತ್ರಸ್ಸ ರುದ್ರೋ ನಾತ್ರ ಸಂಶಯಃ ॥"

ಈ ಮಂತ್ರಗಳ ಅರ್ಥಗಳು ಬಹಳ ರಹಸ್ಯವೂ ಗಹನವೂ ಆಗಿರುತ್ತವೆ. ಅವುಗಳನ್ನು ಗುರುಗಳಿಂದ ತಿಳಿಯತಕ್ಕದ್ದು. ಪ್ರಣವಕ್ಕೆ ಹನ್ನೆರಡು ಕೋಟಿ ಅರ್ಥಗಳಿವೆಯೆಂದು ಹೇಳುವುದರಿಂದ ಮನುಷ್ಯಸಾಮಾನ್ಯರಿಗೆ ಅವುಗಳನ್ನೆಲ್ಲ ತಿಳಿಯುವುದು ಅಸಾಧ್ಯ.

೨೫೫. "ಓಂ ನಮಶ್ಶಿವಾಯ ಎಂಬ ಮಂತ್ರವ ಮೀರಲಮ್ಮದೆ ನಿಂದುವು ವೇದ. ಓಂ ನಮಶ್ಶಿವಾಯ ಎಂಬ ಮಂತ್ರವ ಮೀರಲಮ್ಮದೆ ನಿಂದುವು ಶಾಸ್ತ್ರ. ಓಂ ನಮಶ್ಶಿವಾಯ ಎಂಬ ಮಂತ್ರವ ಮೀರಲಮ್ಮದೆ ನಿಂದುವು ತರ್ಕ. ಭಯಂಕರ

---

* ವೀರಶೈವಾಮೃತಮಹಾಪುರಾಣ ಮೊದಲನೆಯ ಕಾಂಡ ಮೂರನೆಯ ಸಂಧಿಯಲ್ಲಿ ಉದ್ಧರಿಸಿದೆ.

೨೫೫. ಬ. ವ. ಪುಟ ೧೩.

ಭ್ರಮೆಗೊಂಡಿತ್ತು ; ಮಂತ್ರ ತಂತ್ರ ಶಿವನಂತುವನರಿಯದೆ, ಚಿಂತಿಸುತ್ತಿದ್ದಿತು ಲೋಕ. ಕೂಡಲ ಸಂಗಮ ದೇವ, ಶ್ವಪಚ ಮೆರೆದರೆ ಜಾತಿಭೇದವ ಮಾಡಲವ್ಮವು"

೨೫೬. "ಭವಬಂಧನ ದುರಿತಂಗಳ ಗೆಲುವಡೆ, ಓಂ ನಮಶ್ಶಿವಾಯ ಶರಣು ಎಂದಡೆ ಸಾಲದೆ"

೨೫೭. "ಕರಿಯಂಜುವುದು ಅಂಕುಶಕ್ಕಯ್ಯ. ಗಿರಿಯಂಜುವುದು ಕುಲಿಶಕ್ಕಯ್ಯ, ತಮಂಧವಂಜುವುದು ಜ್ಯೋತಿಗಯ್ಯ ! ಕಾನನವಂಜುವುದು ಬೇಗೆಗಯ್ಯ ! ಪಂಚ ಮಹಾಪಾತಕವಂಜುವುದು ಕೂಡಲ ಸಂಗಮ ನಾಮಕ್ಕಯ್ಯ"

ಭಕ್ತನನ್ನು ಮಂತ್ರಶರೀರಿಯನ್ನಾಗಿ ಮಾಡಬಲ್ಲದ್ದು ಈ ಮಂತ್ರ. ದೇಹವಾದ್ಯಂತವೂ ಮಂತ್ರಾಕ್ಷರಗಳು ವ್ಯಾಪಿಸಿಕೊಂಡಿವೆ ಎಂಬುದನ್ನು ಭಕ್ತನು ಗ್ರಹಿಸಬೇಕು. ಆದುದರಿಂದ ಈ ದೇಹ ಮಲಿನವಾದುದಲ್ಲ, ಹೊಲಸಲ್ಲ; ನರಜನ್ಮವೆಂದು ಭಾವಿಸಲಾಗದು, ಹರಜನ್ಮವೆಂದೇ ತಿಳಿಯಬೇಕು.

ಹೀಗೆ ಅಷ್ಟಾವರಣಗಳ *ಮಾಹಾತ್ಮ್ಯೆಯನ್ನು ಹೇಳಿ ಈ ಕವಚಗಳಿಂದ ಪರಿರಕ್ಷಿತನಾಗಬೇಕೆಂದೂ, ಆದವನಿಗೆ ಮುಕ್ತಿ ಸುಲಭವೆಂದೂ ಧೈರ್ಯ ಹೇಳಿ, ಗುರು ಸಾಧನಮಾರ್ಗವನ್ನು ಹತ್ತಿಸುತ್ತಾನೆ. ಆ ಸಾಧನಮಾರ್ಗ ಷಟ್ಸ್ಥಲ ಸಿದ್ಧಾಂತ ಮಾರ್ಗ. ಅದನ್ನು ಮುಂದಿನ ಪ್ರಕರಣದಲ್ಲಿ ವಿವರಿಸಿದೆ.

---

೨೫೬—೭. ಬ. ವ. ಪುಟ ೧೨.

* ಈ ಪ್ರಕರಣದಲ್ಲಿ ಎಲ್ಲವನ್ನೂ ಸ್ಥೂಲವಾಗಿ ತಿಳಿಸಿದೆ; ಹೆಚ್ಚು ವಿವರಣೆಗಳಿಗೆ ಪ್ರಯತ್ನ ಪಟ್ಟಿಲ್ಲ.

## ೧೦ನೆಯ ಪ್ರಕರಣ

# ಷಟ್ಸ್ಥಲ ಸಿದ್ಧಾಂತ

ಷಟ್ಸ್ಥಲಸಿದ್ಧಾಂತವನ್ನು ಗ್ರಹಿಸುವುದಕ್ಕೆ ಮನುಷ್ಯ ಹೇಗೆ ಸೃಷ್ಟಿಯಾದನು ಎಂಬುದನ್ನು ಮೊದಲು ತಿಳಿಯುವುದು ಆವಶ್ಯಕ. ಸೃಷ್ಟಿಯ ಪೂರ್ವದಲ್ಲಿ 'ಏಕಮೇವಾದ್ವಿತೀಯಂ ಬ್ರಹ್ಮ' ಎಂಬುದಾಗಿ ಪರವಸ್ತುವೊಂದೇ ಇದ್ದಿತು. ಬೃಹತ್ ಜ್ವಾಲೆಯಿಂದ ವಿಸ್ಫುಲಿಂಗಗಳು ಕೆದರುವಂತೆ ಆದರ ಅಂತಃಸ್ಫುರಣದಿಂದ ಆತ್ಮರುಗಳು ಹೊರಬಿದ್ದರು. ಅದೇ ಚೈತನ್ಯ ಅಣುರೂಪದಲ್ಲಿ ಹೀಗೆ ಪ್ರತ್ಯೇಕವಾಯಿತು.

*"ಮಮೈವಾಂಶೋ ಜೀವಲೋಕೇ ಜೀವಭೂತಃ ಸನಾತನಃ"

ಆಣವಮಲ ಮಾಯಾಮಲ ಮತ್ತು ಕಾರ್ಮಿಕಮಲ ಎಂಬ ಮೂರು ಮಲಗಳು ಜೀವಾತ್ಮನಿಗೆ ಗಂಟುಬಿದ್ದುವು. ಸರ್ವಾತ್ಮಕತ್ವ, ಪರಿಪೂರ್ಣತ್ವಗಳಿಗೆ ಬದಲಾಗಿ ಅಣುತ್ವವನ್ನುಂಟುಮಾಡಿ, ನಾನು ಬೇರೆ, ಶಿವನು ಬೇರೆ ಎಂಬ ಬುದ್ಧಿಯನ್ನುಂಟುಮಾಡುವುದು ಆಣವ ಮಲ. ಇದರಿಂದ ಕಾರಣಶರೀರಪ್ರಾಪ್ತಿ. ಸರ್ವಜ್ಞತ್ವಕ್ಕೆ ಬದಲಾಗಿ ಕಿಂಚಿತ್ ಜ್ಞತ್ವವನ್ನುಂಟುಮಾಡುವುದೂ ಸೂಕ್ಷ್ಮಶರೀರವೆಂಬ ಆವರಣವಾಗಿರುವುದೂ ಮಾಯಾಮಲ. ಸರ್ವಕರ್ತೃತ್ವಕ್ಕೆ ಬದಲಾಗಿ ಕಿಂಚಿತ್ ಕರ್ತೃತ್ವವನ್ನುಂಟುಮಾಡುವುದೂ ಸ್ಥೂಲಶರೀರವೆಂಬ ಆವರಣವಾಗಿರುವುದೂ ಕರ್ಮಫಲಾನುಭವಕ್ಕೆ ಕಾರಣವಾಗಿರುವುದೂ ಕಾರ್ಮಿಕ ಮಲ.† ಜೀವನು ಲಕ್ಷಾಂತರ

---

* ಭಗವದ್ಗೀತೆ, ಅಧ್ಯಾಯ ೧೫. ಶ್ಲೋಕ ೭.

† ಇನ್ನಾಲಿಸೈ ಸಿದ್ಧರಾಮ ತ್ರಿಮಲದಿರವ।
ನೆನ್ನ ಪಿತೃಮಾತೃ ಸುತರೆಂಬುದಾಣವ ಮಲವ।
ದುನ್ನತದ ಕುಲಗೋತ್ರಮೆಂದೆನಲ್ ಮಾಯಾಮಲಂ ಧನಂ ಕಾರ್ಮಿಕಮಲಂ॥

ಎಂದು ಚೆನ್ನಬಸವ ಪುರಾಣ ಕಾಂಡ ೫, ಸಂಧಿ ೬, ಪದ್ಯ ೭ರಲ್ಲಿ ಹೇಳಿದೆ.

ಜನ್ಮಗಳನ್ನೆತ್ತಬೇಕು; ಸ್ವೇದಜ, ಅಂಡಜ, ಉದ್ಭಿಜ, ಜರಾಯುಜ ಎಂಬ ನಾಲ್ಕು ತೆರದ ಜೀವರಾಶಿಗಳಲ್ಲಿ ಹುಟ್ಟುತ್ತ ಸಾಯುತ್ತ, ಗೋಜನ್ಮಕ್ಕೆ ಬಂದು ಅಲ್ಲಿಂದ ಮನುಷ್ಯಜನ್ಮಕ್ಕೆ ಬರುತ್ತಾನೆಂದು ನಂಬಿಕೆ.

ಆತ್ಮನು ಪಂಚಭೂತಗಳ ಸಹಾಯದಿಂದ ತನುತ್ರಯಗಳನ್ನು ಪಡೆಯುತ್ತಾನೆ; ಆಕಾಶದೊಡನೆ ಸೇರಿ ಚಿತ್ತ ಬುದ್ಧಿ ಅಹಂಕಾರ ಮನ ಜ್ಞಾನಗಳೆಂಬ ಪಂಚಕರಣಗಳಾಗುವುವು; ವಾಯುವಿನೊಡನೆ ಸೇರಿ ಪ್ರಾಣ ಅಪಾನ ವ್ಯಾನ ಉದಾನ ಸಮಾನ ಎಂಬ ಪಂಚವಾಯುಗಳು ಆಗುವುವು; ಅಗ್ನಿಯೊಡನೆ ಸೇರಿ ಐದು ಜ್ಞಾನೇಂದ್ರಿಯಗಳಾಗುವುವು; ಜಲದೊಡನೆ ಸೇರಿ ರೂಪ ರಸ ಗಂಧ ಸ್ಪರ್ಶ ಶಬ್ದ ಎಂಬ ಪಂಚ ವಿಷಯಗಳಾಗುವುವು; ಪೃಥ್ವಿಯೊಡನೆ ಸೇರಿ ಐದು ಕರ್ಮೇಂದ್ರಿಯಗಳಾಗುವುವು. ಪಂಚಭೂತಗಳಿಂದಲೆ ಅಸ್ಥಿ ಚರ್ಮ ಮೊದಲಾದುವೂ, ಸ್ವೇದ ಜೊಲ್ಲು ಮೊದಲಾದುವೂ, ತೃಷೆ ನಿದ್ರೆ ಮೊದಲಾದುವೂ, ಚಲನಾದಿ ಕಾರ್ಯಗಳೂ, ರಾಗದ್ವೇಷಾದಿಗಳೂ ಉಂಟಾಗುವುವು. ಕಾರಣತನು ಆತ್ಮ ಚಿತ್ತ ಅಹಂಕಾರಗಳಿಂದ ಮಾತ್ರ ಕೂಡಿದುದು; ಸೂಕ್ಷ್ಮತನು ಐದು ಜ್ಞಾನೇಂದ್ರಿಯಗಳು, ಐದು ಕರ್ಮೇಂದ್ರಿಯಗಳು, ಐದು ವಾಯುಗಳು ಮನ ಮತ್ತು ಬುದ್ಧಿ—ಹೀಗೆ ಹದಿನೇಳು ತತ್ತ್ವಗಳಿಂದ ಕೂಡಿದುದು; ಸ್ಥೂಲತನು ಪಂಚಭೂತಮಯವಾಗಿ, ನಮಗೆ ಗೋಚರವಾಗುವ ಅಸ್ಥಿಚರ್ಮಾದಿಗಳಿಂದಲೂ ಅವಯವಾದಿಗಳಿಂದಲೂ ಕೂಡಿದುದು. ದೇಹವನ್ನು ಧರಿಸಿರುವುದರಿಂದ ಸಪ್ತವ್ಯಸನಗಳು, ಷಡೂರ್ಮಿಗಳು, ಅರಿಷಡ್ವರ್ಗಗಳು, ಷಡ್ಭ್ರಮೆಗಳು ಜೀವನಿಗೆ ಇರುತ್ತವೆ. ಅಷ್ಟಮದಗಳಿಗೂ, ಆಧ್ಯಾತ್ಮಿಕ ಆಧಿಭೌತಿಕ ಮತ್ತು ಆಧಿದೈವಿಕಗಳೆಂಬ ತಾಪತ್ರಯಗಳಿಗೂ ಜೀವನು ಒಳಗಾಗಿರುತ್ತಾನೆ. ಹೀಗೆ ಭೂಮಿಯಲ್ಲಿ ಕಷ್ಟ ಸಂಕಟಗಳನ್ನೂ ಸುಖ ದುಃಖಗಳನ್ನೂ ಅನುಭವಿಸುತ್ತ ಮರಣ ಕಾಲದಲ್ಲಿ—ಎಂದರೆ ದೇಹಾಂತರವನ್ನು ಸೇರುವಾಗ,

* " ಶರೀರಂ ಯದವಾಪ್ನೋತಿ ಯಚ್ಚಾಪ್ಯುತ್‌ಕ್ರಾಮತೀಶ್ವರಃ ।
ಗೃಹೀತ್ವೈತಾನಿ ಸಂಯಾತಿ ವಾಯುರ್ಗಂಧಾನಿವಾಶಯಾತ್ "

---

*ಭಗವದ್ಗೀತೆ ಅಧ್ಯಾಯ ೧೫. ಶ್ಲೋಕ ೮.

ಗಾಳಿ ಪರಿಮಳವನ್ನು ಕೊಂಡೊಯ್ಯುವಂತೆ, ಇಂದ್ರಿಯಾದಿಗಳನ್ನೆಲ್ಲ ಸೆಳೆದುಕೊಂಡು ಪ್ರಾಣವೂ, ಪ್ರಾಣದೊಡನೆ ಆತ್ಮವೂ ಹೊರಟು ಹೊಸ ತಾಯಿಯ ಗರ್ಭವನ್ನು ಸೇರುತ್ತವೆ. ಅಲ್ಲಿ ಮಾಂಸಗೂಡುತ್ತ ಸೂಕ್ಷ್ಮ ವಾಗಿದ್ದುವೆಲ್ಲ ಕ್ರಮಕ್ರಮವಾಗಿ ವಿಕಾಸಹೊಂದಿ ರೂಪುದೋರುತ್ತ ಸರ್ವೇಂ ದ್ರಿಯಪೂರ್ಣನಾಗಿ ಸರ್ವಾವಯವಪೂರ್ಣನಾಗಿ ಗರ್ಭವಾಸದಿಂದ ನಿಯತಕಾಲಕ್ಕೆ ಹೊರಗೆ ಬರುವನು. ಕರ್ಮಫಲಕ್ಕನುಸಾರವಾಗಿ ಉತ್ತಮ ಮಧ್ಯಮ ಅಥವಾ ಅಧಮ ಜನ್ಮವನ್ನು ಎತ್ತುವನು. ಹಲವು ಜನ್ಮಗಳು— ಲೆಕ್ಕಕ್ಕೆ ಸಿಕ್ಕದಷ್ಟು—ಈಗಾಗಲೆ ನಮಗೆ ಕಳೆದು ಹೋಗಿವೆ. ಇನ್ನೆಷ್ಟು ಜನ್ಮಗಳನ್ನೆತ್ತಬೇಕೋ ತಿಳಿಯದು. ಹೀಗೆ ಜನ್ಮಗಳನ್ನು ಎತ್ತುತ್ತಿರುವುದೇ ಸಂಸಾರ. ಸಂಚಿತ ಆಗಾಮಿ ಮತ್ತು ಪ್ರಾರಬ್ಧ ಎಂಬ ಮೂರು ಬಗೆಯ ಕರ್ಮಗಳು ಸವೆಯಬೇಕು, ಸಂಸಾರದಲ್ಲಿ ತೊಳಲುವುದು ನಿಲ್ಲಬೇಕು, ಮುಕ್ತಿಯುಂಟಾಗಬೇಕು.

ಷಟ್ಸ್ಥಲಸಿದ್ಧಾಂತದ ಪ್ರಕಾರ ಪರವಸ್ತುವೊಂದೇ ಲಿಂಗ ಅಂಗ ಎಂದರೆ, ಪರಮಾತ್ಮ ಜೀವಾತ್ಮರುಗಳೆಂದು ವಿಂಗಡವಾಯಿತು. ಪ್ರವೃತ್ತಿ ಮಾರ್ಗದಲ್ಲಿ ಅಂತಃಕರಣಗಳೂ, ಇಂದ್ರಿಯಗಳೂ, ದೇಹವೂ ಜೀವಾತ್ಮನಿಗೆ ತಪ್ಪದೆ ಬರುವುವಾದರೂ ಅವುಗಳಿಂದ ಬಿಡುಗಡೆ ಹೊಂದುವುದಕ್ಕೆ ತಕ್ಕ ಉಪಾಯವನ್ನು ಪರಮಾತ್ಮನು ಜೊತೆಯಲ್ಲಿಯೇ ಕಲ್ಪಿಸಿಕೊಟ್ಟಿರುವನು. ಲಿಂಗ ಅಂಗ ಇವು ಪರಸ್ಪರ ಅಗಲಿರುವುದು ಸಾಧ್ಯವೇ ಇಲ್ಲ. ಅಂಗದ ಜೊತೆ ಯಲ್ಲಿಯೇ ಲಿಂಗ ತಕ್ಕ ರೀತಿ ಪರಿಣಾಮ ಹೊಂದುತ್ತ ಅಂಗದಿಂದ ಸೇವೆ ಮಾಡಿಸಿಕೊಳ್ಳುವುದಕ್ಕೂ, ಅಂಗವನ್ನು ಉದ್ಧಾರ ಮಾಡುವುದಕ್ಕೂ ಇದ್ದೇ ಇರುತ್ತದೆ. ಪರವಸ್ತುವಿನಲ್ಲಿರುವ ಶಕ್ತಿಯ ಒಂದು ಭಾಗ ಅಂಗದಲ್ಲಿ ಸೇರಿ ಕೊಂಡು ಭಕ್ತಿ ಎಂಬ ಹೆಸರಿನಿಂದ ವ್ಯವಹರಿಸಲ್ಪಡುವುದು. ಲಿಂಗವನ್ನು ಆಶ್ರಯಿಸಿದ ಶಕ್ತಿಗೆ ಶಕ್ತಿಯೆಂದೇ ಹೆಸರು. ಸೃಷ್ಟಿಕ್ರಮದಲ್ಲಿ ಕಾರಣ ತನು ಒದಗಿದಾಗ ಅಂಗ ಯೋಗಾಂಗವಾಗಿ, ಸೂಕ್ಷ್ಮತನುವಿನಲ್ಲಿ ಭೋಗಾಂಗವಾಗಿ, ಸ್ಥೂಲತನುವಿನಲ್ಲಿ ತ್ಯಾಗಾಂಗವಾಗಿ ಪರಿಣಾಮ ಹೊಂದಿತು. ಈ ತನುಗಳಲ್ಲಿ ಕ್ರಮವಾಗಿ ಭಾವಲಿಂಗ, ಪ್ರಾಣಲಿಂಗ, ಇಷ್ಟಲಿಂಗಗಳಾಗಿ ಲಿಂಗ ಪರಿಣಾಮ ಹೊಂದಿ ಸೇವೆ ಮಾಡಿಸಿಕೊಳ್ಳಲು ಸಿದ್ಧವಾಗಿದೆ.

ಲಿಂಗಸ್ಥಲಗಳು ಪುನಃ ಎರಡೆರಡಾಗಿ ವಿಂಗಡವಾದಾಗ ಅಂಗಸ್ಥಲಗಳೂ ವಿಂಗಡವಾಗಿ ತದನುಗುಣವಾದ ಭಕ್ತಿಗಳಿಂದ ಕೂಡಿ ಸೇವೆ ಮಾಡಲು ಅನುವಾಗಿರುತ್ತವೆ. ಹೀಗೆ ಆರು ಲಿಂಗಸ್ಥಲಗಳೂ, ಆರು ಅಂಗಸ್ಥಲಗಳೂ ಸೃಷ್ಟಿಕ್ರಮದಲ್ಲಿ ತಪ್ಪದೆ ಉಂಟಾಗುತ್ತವೆ. ಅಂಗನಿಗೆ ಲಿಂಗವನ್ನು ಸೇವೆ ಮಾಡುವುದೇ ಸಹಜಪ್ರವೃತ್ತಿಯಾದರೂ, ಸೃಷ್ಟಿ ಹೊರಮುಖವಾಗಿ ಬಂದುದರಿಂದ ಇಂದ್ರಿಯಾದಿಗಳು ಹೊರಮುಖವಾಗಿ, ಬಾಹ್ಯಪ್ರಪಂಚದ ವಸ್ತು ವಿಷಯಗಳ ಕಡೆಗೆ ಹರಿಯುತ್ತ ಅವುಗಳಲ್ಲಿ ಮಗ್ನವಾಗಿರುತ್ತವೆ; ಪರಮಾತ್ಮನ ಕಡೆಗೆ ಅವು ಹರಿಯುವುದಿಲ್ಲ. ಶಿವಜ್ಞಾನೋದಯವಾಗುವ ಕಾಲಕ್ಕೆ ತಕ್ಕ ಗುರು ಬಂದು ದೀಕ್ಷಾಸಂಸ್ಕಾರದಿಂದ ಕರ್ಮ ಮಲ ಎಂಬ ಪಾಶಗಳನ್ನು ಛೇದಿಸಿ, ಒಳಗಿರುವ ನಿಷ್ಕಲ ಲಿಂಗ ಕಳೆಯನ್ನೇ ತನುತ್ರಯಗಳಲ್ಲಿ ಪ್ರಜ್ಜ್ವಲಿಸುವಂತೆಮಾಡಿ, ಅಂಗ ಲಿಂಗಗಳ ಸಂಬಂಧವನ್ನು ಮನದಟ್ಟು ಮಾಡಿಸಿ, ಹೊರಗೆ ಹರಿಯುವ ಇಂದ್ರಿಯಗಳನ್ನು ಅಂತರ್ಮುಖವಾಗಿ ಮಾಡಲು, ಒಳಗೆ ಸಿದ್ಧವಾಗಿರುವ ಭಕ್ತಿಯಂತ್ರ ಕೆಲಸಮಾಡತೊಡಗಿ ಆಯಾ ಸ್ಥಲದ ಲಿಂಗಗಳನ್ನು ಆಯಾ ಸ್ಥಲದ ಅಂಗಗಳು ಸೇವಿಸುವಂತೆ ಮಾಡಿ, ನಿವೃತ್ತಿಮಾರ್ಗದಲ್ಲಿ, ಹಿಂದಕ್ಕೆ ಸುರುಳಿಸುತ್ತಿದಂತೆ, ಲಯಚಿಂತನದ ಪರಿಣಾಮದಂತೆ, ಅಂಗನನ್ನು—ಶುದ್ಧಾತ್ಮನನ್ನು—ಸಚ್ಚಿದಾನಂದಸ್ವರೂಪವುಳ್ಳ ಅಮಲಜ್ಯೋತಿಯನ್ನಾಗಿ ಮಾಡಿ ಮಹಾಲಿಂಗದ ಎದುರು ನಿಲ್ಲಿಸುತ್ತದೆ. ಅಂಗ ತನ್ನನ್ನೂ ಮಹಾಲಿಂಗವನ್ನೂ ನೋಡಿ ಸಾಮರಸ್ಯದ ಆನಂದಾತಿಶಯವನ್ನನುಭವಿಸಿ ಲಿಂಗದಲ್ಲಿ ಸೇರಿ ಎರಡಿಲ್ಲದಂತಾಗುತ್ತದೆ. ಅಂಗ ಇಳಿದುಬಂದ, ಪುನಃ ಭಕ್ತಿಯ ಸಹಾಯದಿಂದ ಏರಿಹೋಗುವ, ಆರು ಮೆಟ್ಟಲುಗಳೇ ಷಟ್ಸ್ಥಲಗಳು. ಪ್ರವೃತ್ತಿಕ್ರಮದಲ್ಲಿ ಐಕ್ಯ, ಶರಣ, ಪ್ರಾಣಲಿಂಗಿ, ಪ್ರಸಾದಿ, ಮಹೇಶ ಮತ್ತು ಭಕ್ತ ಎಂಬುವು ಮೆಟ್ಟಲುಗಳು. ಅವುಗಳಲ್ಲಿರುವ ಭಕ್ತಿಯ ಹೆಸರುಗಳು ಕ್ರಮವಾಗಿ ಸಮರಸಭಕ್ತಿ, ಆನಂದ ಭಕ್ತಿ, ಅನುಭವಭಕ್ತಿ, ಅವಧಾನಭಕ್ತಿ, ನೈಷ್ಠಿಕೀಭಕ್ತಿ ಮತ್ತು ಸದ್ಭಕ್ತಿ. ಲಿಂಗ ಈ ಮೆಟ್ಟಲುಗಳಿಗೆ ಸರಿಯಾಗಿ ಮೇಲಿನಿಂದ ಕೆಳಕ್ಕೆ ಮಹಾಲಿಂಗ, ಪ್ರಸಾದಲಿಂಗ, ಜಂಗಮಲಿಂಗ, ಶಿವಲಿಂಗ, ಗುರುಲಿಂಗ, ಆಚಾರಲಿಂಗ ಗಳೆಂದು ಮಾರ್ಪಟ್ಟಿರುತ್ತದೆ. ದೀಕ್ಷಾಸಂಸ್ಕಾರವಾಗಿ ಸಂಸಾರ ಲೋಲನಾದ

ಜೀವಾತ್ಮನು ಸಂಸಾರ ವಿಮುಖನಾದ ಶುದ್ಧಾತ್ಮನಾಗಿ ಭಕ್ತನೆನಿಸಲು ನಿವೃತ್ತಿಕ್ರಮದಲ್ಲಿ ಭಕ್ತಸ್ಥಲದಿಂದ ಮೇಲಕ್ಕೆ ಏರುತ್ತಾ ಹೋಗುತ್ತಾನೆ.

ಸಾಧನೆಯ ಕ್ರಮವನ್ನು ಷಟ್ಸ್ಥಲಸಿದ್ಧಾಂತ ಹೇಗೆ ತಿಳಿಸುವುದೆಂಬುದನ್ನು ನೋಡೋಣ. ಜೀವನು ಕರ್ಮತ್ರಯಗಳಿಂದಲೂ ಮಲತ್ರಯಗಳಿಂದಲೂ ಬಂಧಿತನಾಗಿ ಪಂಚಭೂತಾತ್ಮಕವಾದ ದೇಹವನ್ನು ಧರಿಸಿರುತ್ತಾನೆ. ಮನಸ್ಸು ಬಹಿರ್ವ್ಯಾಪಾರದಲ್ಲಿ ಮಗ್ನವಾಗಿರುತ್ತದೆ. ಪಂಚೇಂದ್ರಿಯಗಳು ಅವನನ್ನು ವಿಷಯಾದಿಗಳ ಕಡೆಗೆ ಪ್ರೇರೇಪಿಸುತ್ತಿರುತ್ತವೆ. ಈ ಪ್ರೇರೇಪಣೆಗಳಿಗೆ ಒಳಗಾಗಿ ದೇಹವನ್ನು ಪೋಷಿಸುವ ಕರ್ತವ್ಯದಲ್ಲಿ, ದೇಹ ಸೌಖ್ಯವನ್ನು ಪಡೆಯುವ ಹವ್ಯಾಸದಲ್ಲಿ, ದೇಹ ಸಂಬಂಧಿಗಳನ್ನು ಬೆಳಸಿಕೊಳ್ಳುತ್ತ, ಪ್ರಪಂಚದ ವ್ಯವಹಾರದಲ್ಲಿ ತೊಳಲುತ್ತ, ಸುಖದುಃಖಗಳೆಂಬ ದ್ವಂದ್ವವನ್ನು ಉಪಭೋಗಿಸುತ್ತ, ಸ್ವಸ್ವರೂಪಜ್ಞಾನವಿಲ್ಲದವನಾಗಿ, ಪರಮಾತ್ಮನಕಡೆಗೆ ದೃಷ್ಟಿಯನ್ನು ತಿರುಗಿಸದೆ ಇರುತ್ತಾನೆ.

೨೫೮. ಪೃಥ್ವಿ ಅಪ್ಪು ತೇಜಸ್ಸು ವಾಯ್ವಾಕಾಶ, ಪಂಚಭೌತಿಕ, ಮನ ಬುದ್ಧಿ ಚಿತ್ತಹಂಕಾರ ಚತುಷ್ಟಯ ಕರಣಾದಿ ಗುಣಂಗಳು ಸತ್ವ ರಜ ತಮದಲ್ಲಿ ಆತ್ಮನನು ಎತ್ತಲೆಂದರಿಯವು. ಇದನರಿವರೆ ಸಮತೆ ಸದಾಚಾರ ಆಶ್ರಯಸ್ಥಾನ ಸಹಸ್ರದಳ ಕಮಲದಲ್ಲಿ ಗುಹೇಶ್ವರನೆಂಬ ಲಿಂಗವು''

ಯಾವಾಗ ಸಮತೆ ಸದಾಚಾರಗಳು ಬೇರೂರಿ ಚಿತ್ತಶುದ್ಧಿಯುಂಟಾಗಿ, ಶಾಂತಿ ನೆಲಸುವುದೊ ಆಗ ಸಹಸ್ರಾರದಲ್ಲಿಯ ಪರಮಾತ್ಮಸ್ವರೂಪವನ್ನು ತಿಳಿಯಲು ಸಹಾಯವಾಗುತ್ತದೆ. ಅಲ್ಲಿಯವರೆಗೆ ಅವನು 'ಕೇವಲ ಪ್ರಪಂಚಿ', ಬೆಲೆಗಳ ತಾರತಮ್ಯವನ್ನರಿಯದೆ ಸಂಸಾರದಲ್ಲಿ ಒದ್ದಾಡುತ್ತಿರುವ ಪಶು. ಆತ್ಮಸ್ವರೂಪಜ್ಞಾನದಿಂದ ಅನಂತಸುಖವನ್ನು ಪಡೆಯಬಹುದು. ಸಚ್ಚಿದಾನಂದಸ್ವರೂಪನೇ ಆತ್ಮ. ಈ ಅನಂತಸುಖವನ್ನು ಆನಂದವನ್ನು ಇಂದ್ರಿಯಾದಿಗಳನ್ನು ಅಲ್ಲಗಳೆಯದೆ ಪಡೆಯಬಹುದು. ಅವುಗಳನ್ನು ಆತ್ಮಕಲ್ಯಾಣಕ್ಕಾಗಿಯೇ ಭಗವಂತನು ದಯಪಾಲಿಸಿದ್ದಾನೆ. ಅವುಗಳನ್ನು

---

೨೫೮. ವ. ಶಾ. ಸಾ. ಭಾಗ ೧ (ಉ.) ಪುಟ ೧೦೮

ನಾವು ದುರುಪಯೋಗಪಡಿಸುತ್ತ ಸಾಸವೆಯಷ್ಟು ಸುಖಕ್ಕೆ ಆಯುಸ್ಸನ್ನು ಕಳೆಯುತ್ತಿದ್ದೇವೆ; ಪರಿಣಾಮದಲ್ಲಿ ಸಾಗರದಷ್ಟು ದುಃಖವನ್ನು ಅನುಭವಿಸುತ್ತಿದ್ದೇವೆ. ನಿಜವಾದ ಸುಖಿ ಯಾರು? ನಿಜವಾದ ದುಃಖಿ ಯಾರು?

೨೫೯. "ಸಕಲೇಂದ್ರಿಯಗಳಲ್ಲಿ ವಿಕಾರಿಸುವ ಮನವ ಸೆಳೆದು ನಿಂದಾತನೇ ಸುಖಿ. ಪಂಚೇಂದ್ರಿಯಗಳ ಇಚ್ಛೆಯಲ್ಲಿ ಕೀಲುಮನಂಗೊಂಡು ಸುಳಿವಾತ ದುಃಖಿ. ಮನಸ್ಸು ಬಹಿರ್ಮುಖವಾದರೆ ಮಾಯಾ ಪ್ರಪಂಚಿ, ಮನವಂತರ್ಮುಖವಾದರೆ ಅವಿರಳಜ್ಞಾನಿ. ಮನವು ಮಹದಲ್ಲಿ ನಿಂದಿರಲಾತ ಮುಕ್ತ. ಮನೋಲಯವಾದಡೆ ಸೌರಾಷ್ಟ್ರ ಸೋಮೇಶ್ವರ ಲಿಂಗದಲ್ಲಿ ಅಭೇದ್ಯ''

ಆದುದರಿಂದ ಹೊರಗಡೆ ಹರಿಯುವ ಮನಸ್ಸನ್ನು ಅಂತರ್ಮುಖವಾಗಿ ಮಾಡಿ ಅವಿರಳಜ್ಞಾನಿಯಾಗು, ಮಹದಲ್ಲಿ ನಿಲ್ಲಿಸಿ ಮುಕ್ತನಾಗು, ಮನೋಲಯಮಾಡಿ ಪರವಸ್ತುವಾಗು. ಇವು ಸಿದ್ಧಿಸುವುದು ಸಾಧನೆಯಿಂದ. ಈ ಸಾಧನೆಗೆ ಕಾಡಿಗೆ ಹೋಗಬೇಕಾದ್ದಿಲ್ಲ, ಶ್ರೀಗಿರಿ ಕಾಶಿ ವಾರಣಾಸಿಗಳನ್ನು ಸುತ್ತಿಬರಬೇಕಾದ್ದಿಲ್ಲ; ಅವುಗಳಾವುವೂ ಫಲಕಾರಿಯಲ್ಲ.

೨೬೦. "ಸುತ್ತಿಸುತ್ತಿ ಬಂದಡಿಲ್ಲ. ಲಕ್ಷಗಂಗೆಯ ಮಿಂದಡಿಲ್ಲ. ತುಟ್ಟ ತುದಿಯ ಮೇರುಗಿರಿಯ ಮೆಟ್ಟಿ ಕೂಗಿದಡಿಲ್ಲ. ನಿತ್ಯ ನೇಮದಿಂದ ತನು ಮುಟ್ಟಿ ಕೊಂಡಡಿಲ್ಲ. ನಿಚ್ಚಕ್ಕೆ ಮನವನಂದಂದಿಂಗೆ ಅತ್ತಿತ್ತ ಹರಿಯಲೀಯದೆ ಚಿತ್ತದಲ್ಲಿ ಧರಿಸಬಲ್ಲಡೆ, ಬಚ್ಚ ಬರಿಯ ಬೆಳಗು ಗುಹೇಶ್ವರ ಲಿಂಗ''

ಬಚ್ಚಬರಿಯ ಬೆಳಗು ಗುಹೇಶ್ವರಲಿಂಗ! ಪರವಸ್ತುವಿನ ಸ್ವರೂಪವದು. ನಿನ್ನ ಸ್ವರೂಪವಾದರೂ ಏನು? ಅದೂ ಬಚ್ಚಬರಿಯ ಬೆಳಗೇ!

೨೬೧. "ಎಲೆ ಮನವೇ! ನೀ ನಿನ್ನ ನಿಜವ ತಿಳಿವಡೆ, ಆ ನಿನ್ನ ನಿಜವ ಹೇಳುವೆ. ಅದು ಕೇವಲ ಜ್ಯೋತಿ, ಅದು ವರ್ಣಾತೀತ. ನೀನದನರಸುವಾಗ ನಿನಗಾವಲ್ಲಿ ನಿಶ್ಚಯ ತೋರಿತ್ತು ಅದೀಗ ನಿನ್ನ ಪರಿಪೂರ್ಣತ್ವದ ನೆಲೆ. ಆ ನಿನ್ನ ನಿಜವ ನಿಶ್ಚೈಸಿ ನಿರ್ಗಮನಿಯಾದಲ್ಲಿ ಅದೇ ಸಮ್ಯಗ್‌ಜ್ಞಾನದ ತೋರಿಕೆ. ಆ ತೋರಿಕೆಯ ಅಖಂಡ ಬೆಳಗಿನ ಹೊಳಹಿನೊಳಗೆ ನೀ ನಮ್ಮ ಗುಹೇಶ್ವರ ಲಿಂಗದ ಚರಣವ ನರಸಿಕೊಂಡು ನಿಶ್ಚಿಂತನಾಗೆಲೆ ಮನವೇ''

---

೨೫೯. ವ. ಶಾ. ಸಾ. ಭಾಗ ೧ (ಪೂ) ಪುಟ ೪೫. ೨೬೦. ಪ್ರ. ದೇ. ವ. ಪುಟ ೧೬೧.
೨೬೧. ವ. ಶಾ. ಸಾ. ಭಾಗ ೧ (ಉ) ಪುಟ ೧೭೯.

ನೀನು ಯಾರೆಂಬುದು ಚೆನ್ನಾಗಿ ತಿಳಿಯಲಿ, ನೀನು ಸೇರಬೇಕಾದ ನೆಲೆ ಯಾವುದೆಂಬುದೂ ಚೆನ್ನಾಗಿ ತಿಳಿಯಲಿ. ಕೆಲವು ಪುಣ್ಯಕಾರ್ಯಗಳನ್ನು ಮಾಡಿ ಸ್ವಲ್ಪಕಾಲ ಸ್ವರ್ಗವನ್ನನುಭವಿಸಿ ಮತ್ತೆ ಭೂಲೋಕಕ್ಕೆ ಬರುವುದು ಗುರಿಯಲ್ಲ. ಜ್ಞಾನಿ, ಯೋಗಿ, ಭಕ್ತ ಎಂದೆನಿಸಿ ಕೈಲಾಸಕ್ಕೆ ಹೋಗಿ ಸಾಮೀಪ್ಯ ಸಾರೂಪ್ಯಾದಿ ಮೋಕ್ಷವನ್ನು ಪಡೆಯುವುದೂ ಗುರಿಯಲ್ಲ. ಆ ಕೈಲಾಸದಲ್ಲಿರುವ ಗಣಗಳು ಕೂಡ ಮಾಯಾಬದ್ಧರಾಗಿ ಪರಮ ಪದವನ್ನು ಅರಿಯದವರಾಗಿದ್ದಾರೆ.

೫೬೨. "ದೇವರನ್ನೆಲ್ಲರ ಹೊಡೆತಂದು ದೇವಿಯರೊಳು ಕೂಡಿತ್ತು ಮಾಯೆ! ಹರಹರಾ ಮಾಯೆ ಇದ್ದೆಡೆಯ ನೋಡಾ! ಶಿವಶಿವಾ ಮಾಯೆ ಇದ್ದೆಡೆಯ ನೋಡಾ! ಎರಡೆಂಬತ್ತು ಕೋಟಿ ಪ್ರಮಥಗಣಂಗಳು, ಅಂಗಾಲ ಕಣ್ಣವರು, ಮೈಯೆಲ್ಲಾ ಕಣ್ಣವರು, ನಂದಿವಾಹನ ರುದ್ರರು, ಇವರೆಲ್ಲರು ಮಾಯೆಯ ಕಾಲು ಗಾಹಿನ ಸರಮಾಲೆ ಕಾಣಾ ಗುಹೇಶ್ವರಾ"

ಹೀಗೆ ಕೈಲಾಸದ ಗಣಗಳೇ ಮಾಯೆಯ ಬಲೆಯಲ್ಲಿ ತೊಡರಿಬಿದ್ದಿರುವಾಗ ಇತರರ ಪಾಡೇನು! ಕೈಲಾಸದ ಗಣಪದವಿಗಿಂತಲೂ ಮೀರಿದ್ದು ಸಾಮರಸ್ಯಮುಕ್ತಿ. ಷಟ್ಸ್ಥಲಮಾರ್ಗವನ್ನು ಹಿಡಿದು ಈ ನಿಜಮುಕ್ತಿಯನ್ನು ಪಡೆ. ಇದು ಸುಮ್ಮನೆ ದೊರೆಯುವುದಿಲ್ಲ. ಕೇವಲ ದೀಕ್ಷೆಯಿಂದಲೇ ಇದು ಲಭಿಸುವುದಿಲ್ಲ. ದೀಕ್ಷೆಯಿಂದ ನಿನ್ನ ಹಿಂದಿನ ಕರ್ಮಗಳನ್ನೆಲ್ಲ ದಹಿಸಲಾಗಿದೆ, ಪಾಶಗಳು ಬಿಗಿಯದಂತೆ ಅವುಗಳನ್ನು ಛೇದಿಸಲಾಗಿದೆ. ಈಗ ನೀನು ಯಾವುದೊಂದು ಮಲಿನತೆಯೂ ಇಲ್ಲದೆ, ಶುದ್ಧಾತ್ಮನಾಗಿ ಪಾಪಭಾರವಿಲ್ಲದೆ ಹೊಸಬನಾಗಿರುವೆ. ಏಕಾಗ್ರ ಚಿತ್ತದಿಂದ ಹತ್ತಿ ಹೋಗಬೇಕಾದ್ದೇ ಈಗಿನ ಕರ್ತವ್ಯ. ಇದಕ್ಕೆ ಸಾಧನವಾದ ಭಕ್ತಿ ನಿನ್ನಲ್ಲಿ ಅಂತರ್ಗತವಾಗಿದೆ. ಅದನ್ನು ಹಿಡಿದು ಸಾಧನೆಮಾಡು. ನಿನಗೆ ಎಚ್ಚರಿಕೆ ಕೊಡಲು, ನಿನ್ನನ್ನು ಸಾಧನೆಯಲ್ಲಿ ತೊಡಗಿಸಲು, ನಿನ್ನ ಗುರಿಯನ್ನು ಕಣ್ಣೆದುರಿಗಿಡಲು ಪರವಸ್ತು ಸಾಕಾರವಾಗಿ ಇಷ್ಟಲಿಂಗವಾಗಿ ಬಂದಿದೆ. ಆ ಪರವಸ್ತುವೇ ನಿನ್ನ ಸೂಕ್ಷ್ಮ ಶರೀರದಲ್ಲಿ ಪ್ರಾಣಲಿಂಗವಾಗಿದೆ, ಕಾರಣ

---

೫೬೨. ಪ್ರ. ದೇ. ವ. ಪುಟ ೧೯.

ಶರೀರದಲ್ಲಿ ಭಾವಲಿಂಗವಾಗಿದೆ. ಇದರ ಮರ್ಮವನ್ನು ಗ್ರಹಿಸು. ತನು ತ್ರಯದಲ್ಲೂ ಲಿಂಗದೊಡನೆ ಸಂಯೋಗ ಹೊಂದಿರುವೆ ಎಂಬುದನ್ನು ಅನು ಭವದಿಂದ ತಿಳಿ. ಒಳಗೆ ಹೊರಗೆ ಎಲ್ಲ ಲಿಂಗಭರಿತನಾಗು.

೨೬೩. "ತನುಗುಣವಳಿದಲ್ಲಿ ತ್ಯಾಗಾಂಗ, ಲಿಂಗದೊಡನೆ ಸಕಲ ಸುಖಂಗಳಂ ಭೋಗಿಸುವಲ್ಲಿ ಭೋಗಾಂಗ, ನಿಜದಲ್ಲಿ ಬೆರೆಯಲು ಯೋಗಾಂಗ. ಇಂತೀ ತ್ರಿವಿಧದಲ್ಲಿಯೂ ಯೋಗಾಂಗ. ಇದಲ್ಲದನ್ಯಯೋಗಂಗಳೆಲ್ಲ ವಿಯೋಗವಯ್ಯ ಸೌರಾಷ್ಟ್ರ ಸೋಮೇಶ್ವರಾ"

ಅರ್ಥಪ್ರಾಣಾಭಿಮಾನವನ್ನು ಬಿಡುವುದು, ದೇಹವನ್ನು ತಕ್ಕಂತೆ ಶಿಕ್ಷಣ ಕ್ಕೊಳಪಡಿಸುವುದು ಮೊದಲಾಗಬೇಕು. ಇದಕ್ಕಾಗಿ ತನು ಮನ ಧನಗಳನ್ನು ಗುರು ಲಿಂಗ ಜಂಗಮಕ್ಕೆ ಸವೆಯಿಸಬೇಕು. ಎರಡನೆಯದಾಗಿ ಮನಸ್ಸಿನ 'ಅಹಂ' ಹೋಗಿ ಒಳಗೆ ಲಿಂಗಸ್ಥಾಪಿತವಾಗಬೇಕು. ಇದು ಪ್ರಾಣಲಿಂಗ ಜ್ಞಾನದಿಂದ ಸಾಧ್ಯ. ಪ್ರಾಣಲಿಂಗಕ್ಕರ್ಪಿಸಿ ಎಲ್ಲವನ್ನೂ ಪ್ರಸಾದರೂಪದಲ್ಲಿ ಪಡೆಯಬೇಕು. ಪ್ರಾಣಲಿಂಗದ ಭೋಗವೇ ನಿನ್ನ ಭೋಗ. ಲಿಂಗವೇ ಪ್ರಾಣವೋ, ಪ್ರಾಣವೇ ಲಿಂಗವೋ ಎಂಬಂತೆ ಸಮರಸದಿಂದ ಏಕೀಭಾವ ವನ್ನು ಪಡೆಯಬೇಕು. ಮೂರನೆಯದಾಗಿ ನಿಜದಲ್ಲಿ ಬೆರೆಯಬೇಕು; ಆತ್ಮದ ನೈಜಸ್ವರೂಪವನ್ನು ನೈಜಪರಿಣಾಮವನ್ನು ಅದಕ್ಕೆ ದೊರಕಿಸಬೇಕು. ತನ್ನಂತೆ ಇಲ್ಲದವರನ್ನು ಶಿವನು ಒಲ್ಲ. ಆದುದರಿಂದ ಶಿವನೊಡನೆ ಬೆರೆಯಲು ಶಿವನಂತಾಗಿ ಬೆರೆಯಬೇಕು. ಇದೇ ಷಟ್ಸ್ಥಲದ ಮರ್ಮ.

೨೬೪. "ಒಡಲುಗೊಂಡು, ಒಡಲುವಿಡಿಯದೆ, ಒಡಲಿಲ್ಲದ ನಿಜವ ಬೆರಸಲವೋ. ಸುರರು, ನರರು, ಕಿನ್ನರರು, ಖೇಚರರು ಪರಮಪದವಿಯನರಿಯದ ಕಾರಣ ಭವ ದೊಳಗೆ ಸಿಲುಕಿದರು. ಕೂಡಲ ಚೆನ್ನಸಂಗನ ನಿಜರೂಪನೇ ಬೆರಸಿರೋ ಮುಮುಕ್ಷುಗಳಿರಾ"

ದೇಹವೆಂಬ ಉಪಾಧಿಯನ್ನೇ ಉಪಯೋಗಿಸಿಕೊಂಡು, ದೇಹ ನಾನೆಂಬ, ದೇಹ ನನ್ನದೆಂಬ ಅಜ್ಞಾನ ಅಭಿಮಾನಗಳನ್ನು ಬಿಟ್ಟು ನಿಜವ ಬೆರಸು.

---

೨೬೩. ವ. ಶಾ. ಸಾ. ಭಾಗ ೧ (ಪೂ.) ಪುಟ ೧೧೫.

೨೬೪. ವ. ಶಾ. ಸಾ. ಭಾಗ ೧ (ಪೂ) ಪುಟ ೪೪.

ಲಿಂಗ ಸ್ವರೂಪತಃ ಲಿಂಗ. ಆದುದರಿಂದ ಒಂದು ಮಾತಿನಲ್ಲಿ ಲಿಂಗದ ಗುಣಗಳನ್ನು ಅಭಿವ್ಯಕ್ತಮಾಡು, ಲಿಂಗವಾಗು. ಲಿಂಗದ ಕಳೆಯನರಿತಲ್ಲದೆ ಅಂಗಕ್ಕೆ ಲಿಂಗದ ಗುಣಗಳು ಬಾರವು

೨೬೫. "ಲಿಂಗದ ಕಲೆಯನರಿದಲ್ಲದೆ ಭಕ್ತಿ ವಿರಕ್ತಿ ಎಂಬವು ದೊರೆಕೊಳ್ಳವು ನೋಡಾ. ಲಿಂಗದ ಕಲೆಯನರಿದಲ್ಲದೆ ಜ್ಞಾನಾನಂದವು ದೊರೆಕೊಳ್ಳದು ನೋಡಾ. ಲಿಂಗದ ಕಲೆಯನರಿದಲ್ಲದೆ ಕ್ಷಮೆ, ದಮೆ, ಸಮತೆ, ಸದಾಚಾರ ದೊರೆಕೊಳ್ಳವು ನೋಡಾ. ಲಿಂಗದ ಕಲೆಯನರಿದಲ್ಲದೆ ಸದ್ಗುಣಗಣ, ವಿನಯ, ಮೃದುವಚನ, ದೊರೆಕೊಳ್ಳವು ನೋಡಾ. ಇಂತಪ್ಪನಂತ ಗುಣವಿಲ್ಲದಡೆ ನಿಜಗುರು ಸ್ವತಂತ್ರ ಸಿದ್ಧಲಿಂಗೇಶ್ವರ ಲಿಂಗವನರಿದುದಕ್ಕೆ ಚಿಹ್ನವಲ್ಲ ನೋಡಾ"

ಈ ಗುಣಗಳು ತುಂಬ ಬೇಕಾದರೆ, ಸಾಧನೆಯನ್ನು ಮಾಡಬೇಕು. ಈ ಸಾಧನೆಯ ಮೊದಲನೆಯ ಮೆಟ್ಟಲೇ ಭಕ್ತಸ್ಥಲ.

## (i) ಭಕ್ತಸ್ಥಲ

೨೬೬. "ಸದಾಚಾರದಲ್ಲಿ ನಡೆವನ, ಶಿವನಲ್ಲಿ ಭಕ್ತಿಯಾಗಿಪ್ಪನ, ಶಿವಲಾಂಛನವ ಕಂಡಲ್ಲಿ ವಂದನೆಗೆಯ್ಯುತಿಪ್ಪನ, ಲಿಂಗ ಜಂಗಮ ಒಂದೇ ಭಾವದಲ್ಲಿ ಕಂಡು ಭೃತ್ಯಾಚಾರ ಯುಕ್ತವಾಗಿರಬಲ್ಲಡೆ, ಭಕ್ತಸ್ಥಲವೆಂದೆಂಬೆನಯ್ಯ, ಮಹಾಲಿಂಗ ಗುರು ಶಿವ ಸಿದ್ಧೇಶ್ವರ ಪ್ರಭುವೇ"

(೨೨೮.) "ಭಕ್ತನು ಶಾಂತನಾಗಿರಬೇಕು. ತನ್ನ ಕುರಿತು ಬಂದ ಠಾವಿನಲ್ಲಿ ಸತ್ಯನಾಗಿರಬೇಕು. ಭೂತಹಿತವಚನವ ನುಡಿಯಬೇಕು. ಸಕಲ ಪ್ರಾಣಗಳ ತನ್ನಂತೆ ಭಾವಿಸುವುದು. ಗುರುಲಿಂಗಜಂಗಮಕ್ಕೆ ತನು ಮನ ಧನಗಳ ಸವೆಯಿಸಬೇಕು. ಅಪಾತ್ರದಾನವ ಮಾಡಲಾಗದು. ಸಕಲೇಂದ್ರಿಯಂಗಳ ತನ್ನ ವಶವ ಮಾಡುವುದು. ಇವೇ ಮೊದಲಲ್ಲಿ ಬೇಹ ಶೌಚ ನೋಡಾ. ಲಿಂಗವ ಪೂಜಿಸಿ ಪ್ರಸಾದವ ಪಡೆವಡೆ, ಇದೇ ಸಾಧನ ನಮ್ಮ ಕೂಡಲ ಚೆನ್ನಸಂಗಯ್ಯನಲ್ಲಿ"

೨೬೭. "ಭಕ್ತನಾದಡೆ ಬಾಳೆಯ ಹಣ್ಣಿನಂತಿರಬೇಕು. ಭಕ್ತನಾದಡೆ ಬೆಲ್ಲದ ಹುಳ್ಳಿಯಂತಿರಬೇಕು. ಭಕ್ತನಾದಡೆ ಮಾವಿನ ಫಲದಂತಿರಬೇಕು. ಇಂತಪ್ಪಾತನೆ ಸದ್ಭಕ್ತ, ಕಾಡಿನೊಳಗಾದ ಶಂಕರ ಪ್ರಿಯ ಚೆನ್ನಕದಂಬ ಲಿಂಗ ನಿರ್ಮಾಯ ಪ್ರಭುವೇ"

---

೨೬೫. ವ. ಶಾ. ಸಾ. ಭಾಗ ೧ (ಉ) ಪುಟ ೧೮೮.
೨೬೬. ವ. ಶಾ. ಸಾ. ಭಾಗ ೧. (ಪೂ) ಪುಟ ೧೮೯.
೨೬೭. ವ. ಶಾ. ಸಾ· ಭಾಗ ೧. (ಪೂ) ಪುಟ ೧೯೩.

ಇವು ಭಕ್ತಸ್ಥಲದ ಮುಖ್ಯ ಲಕ್ಷಣಗಳನ್ನು ಚೆನ್ನಾಗಿ ತಿಳಿಸುತ್ತವೆ. ದೀಕ್ಷಾಕಾಲದಲ್ಲಿ ಗುರು ಕೊಟ್ಟ ಇಷ್ಟಲಿಂಗವನ್ನು ಬಿಟ್ಟು ಸ್ಥಾವರ ಲಿಂಗ ಗಳಿಗೆ ಭಕ್ತನು ಎರಗಲಾಗದು. ಏಕೆಂದರೆ ಇಷ್ಟಲಿಂಗವೇ ಪರದೈವ. ಬ್ರಹ್ಮ ರಂಧ್ರದ ಚಿತ್ಕಳೆಯನ್ನು ಗುರು ಆಕರ್ಷಿಸಿ ಆತ್ಮಕ್ಕೆ ಭಾವಲಿಂಗವನ್ನಾಗಿ, ಮನಸ್ಸಿಗೆ ಪ್ರಾಣಲಿಂಗವನ್ನಾಗಿ ದೇಹಕ್ಕೆ ಇಷ್ಟಲಿಂಗವನ್ನಾಗಿ ಮಾಡಿಕೊಟ್ಟಿರು ವಾಗ ಬೇರೆ ಸ್ಥಾವರಲಿಂಗದ ಹಂಗೇಕೆ? ಇಷ್ಟಲಿಂಗವನ್ನು ಯಾವಾಗಲೂ ಅಗಲದಿರು, ಇಷ್ಟಲಿಂಗಪೂಜೆಯನ್ನು ಶಾಸ್ತ್ರೋಕ್ತವಾಗಿ ಮಾಡು. ಬೆಳಗ್ಗೆ ಏಳುತ್ತಲೂ ಇಷ್ಟಲಿಂಗದರ್ಶನಮಾಡು.

೨೬೮. "ಹೊತ್ತಾರೆ ಎದ್ದು ಲಿಂಗದೇವನ ದೃಷ್ಟಿಯಾರೆ ನೋಡದವನ, ಸಂಸಾರ ವೇನವನ, ಬಾಳುವೆ ಏನವನ, ಬೀಳುವೆ ಏನವನ, ನಡೆ ಏನವನ, ನುಡಿ ಏನವನ, ಕರ್ತು ಕೂಡಲ ಸಂಗಮ ದೇವ ನಿಮ್ಮ ತೊತ್ತುಗೆಲಸ ಮಾಡದವನ ಬದುಕೇನವನ"

೨೬೯. "ಅಷ್ಟವಿಧಾರ್ಚನೆ ಷೋಡಶೋಪಚಾರವ ಮಾಡುವುದು, ಮಾಡಿದ ಪೂಜೆಯ ನೋಡುವುದು, ಶಿವತತ್ತ್ವಗೀತವ ಪಾಡುವುದು, ಶಿವನ ಮುಂದೆ ನಲಿದಾಡುವುದು, ಭಕ್ತಿ ಸಂಭಾಷಣೆಯ ಮಾಡುವುದು, ಕೂಡಲ ಸಂಗಮ ದೇವರ ಕೂಡುವುದು"

ಪೂಜೆಯಲ್ಲಿ ತಲ್ಲೀನನಾಗಬೇಕು. ಮಾಡಿದ ಪೂಜೆಯನ್ನು ಕಣ್ಣಿನಿಂದ ನೋಡಿ ತೃಪ್ತಿಪಡೆಯತಕ್ಕದ್ದು, ಮನಸ್ಸಿನ ಪ್ರಾಣಲಿಂಗಕ್ಕೆ ಸಂಬಂಧಿಸ ತಕ್ಕದ್ದು, ಮನಸ್ಸಿಗೂ ಮೀರಿ ಭಾವಲಿಂಗದ ಪೂಜೆಯಲ್ಲಿ ಪರಿಣಾಮ ವನ್ನನುಭವಿಸತಕ್ಕದ್ದು. ಭಕ್ತನು ಬಾಳೆಯ ಹಣ್ಣಿನಂತಿರಬೇಕು. ಬಾಳೆಯ ಹಣ್ಣು ಎತ್ತನೋಡಿದರೂ ಮೆತುವೇ, ಒಳಗೆ ದಿಂಡಿಲ್ಲ, ಓಟೆಯಿಲ್ಲ. ಗುರು ಲಿಂಗ ಜಂಗಮದ ದಾಸೋಹದಲ್ಲಿ ತನು ಮನ ಧನಗಳನ್ನು ಎತ್ತ ಒತ್ತಿ ಪರೀಕ್ಷಿಸಿದರೂ ಸುಲಭವಾಗಿ ಸರ್ವಾರ್ಪಣವಾಗಿ ಪರಿಣಮಿಸಬೇಕು. ಅವರ ಸ್ವೀಕಾರಕ್ಕೆ ಅನುಪಯೋಗವಾದ, ಸ್ವಾರ್ಥತೆಯಿಂದ ಕಠಿನವಾಗಿ ಕುಳಿತ, ಯಾವುದೊಂದು ಭಾಗವೂ ಭಾವವೂ ಇರಬಾರದು. ಬೆಲ್ಲದಚ್ಚನ್ನು ಎತ್ತ ರುಚಿನೋಡಿದರೂ ಸಿಹಿಯೇ ಕಾಣುವಂತೆ ಎಲ್ಲ ಕರಣಗಳೂ ಗುರು ಲಿಂಗ

---

೨೬೮—೯. ಬ. ವ. ಪುಟ ೨೪, ೨೬.

ಜಂಗಮ ಸೇವೆಯಲ್ಲಿ ಅಮೃತವಾಗಿ ಪರಿಣಮಿಸಬೇಕು. ಹಣ್ಣುಗಳೊಳಗೆ ಶ್ರೇಷ್ಠವಾದ ಮಾವಿನ ಹಣ್ಣಿನಂತೆ, ಭಕ್ತನಾಗಿರುವುದರಿಂದ ಶ್ರೇಷ್ಠನಾಗಿ, ಎಲ್ಲರಿಗೆ ಬೇಕಾದವನಾಗಿ, ಶಿವತತ್ತ್ವಬೀಜವನ್ನು ಶಿವತತ್ತ್ವವೃಕ್ಷವನ್ನಾಗಿ ಮಾಡಬಲ್ಲ ಚೈತನ್ಯವುಳ್ಳವನಾಗಿ ಪರಿಣಾಮ ಹೊಂದತಕ್ಕದ್ದು. ಗುರು ಲಿಂಗ ಜಂಗಮಗಳಿಗೆ ವಂಚನೆಯ ಮಾಡದೆ, ಸ್ವಾರ್ಥಾದಿ ತನುಗುಣಗಳನ್ನು ಬಲಿಸಿಕೊಳ್ಳದೆ, ಸತ್ಕ್ರಿಯಾಚರಣೆಯೇ ರೂಪಾದಂತೆ ಭಕ್ತನು ನಡೆದು ಕೊಳ್ಳಬೇಕು.

'ಲಿಂಗ ಜಂಗಮ ಒಂದೇ ಭಾವದಲ್ಲಿ ಕಂಡು' ಎಂದು ಹೇಳಿದೆಯಷ್ಟೆ. ಜಂಗಮ ಎಂದರೆ ಜ್ಞಾನಸರೂಪು. ಭಕ್ತರ ಅನುಗ್ರಹಾರ್ಥವಾಗಿ ಶಿವನು ಜಂಗಮವಾಗಿ ಬರುತ್ತಾನೆ. ಆದುದರಿಂದ ಲಿಂಗ ಜಂಗಮರಿಗೆ ಅಭೇದ. ಜ್ಞಾನೋದಯವಾಗಬೇಕಾದರೆ ಜಂಗಮ ದಾಸೋಹ ಅವಶ್ಯಕ. ಒಂದು ರೀತಿಯಲ್ಲಿ ಲಿಂಗಕ್ಕಿಂತ ಜಂಗಮವೇ ಹೆಚ್ಚು. ಜಂಗಮ ಸಂತುಷ್ಟಿಯಾದರೆ ಲಿಂಗ ಸಂತುಷ್ಟಿಯಾಗುತ್ತದೆ. ಮತ್ತೊಂದು ರೀತಿಯಲ್ಲಿ ಲಿಂಗ ವೃಕ್ಷಕ್ಕೆ ಜಂಗಮವೇ ಬೇರು, "ತಳಕ್ಕೆ ನೀರೆರೆದರೆ ಮೇಲೆ ಪಲ್ಲವಿಸಿತ್ತು ನೋಡಾ". ಜ್ಞಾನದಿಂದಲ್ಲದೆ ಲಿಂಗದ ಕಳೆ ಪ್ರಜ್ವಲಿಸದು. ಆದುದರಿಂದ ಜಂಗಮಪೂಜೆ ಯನ್ನು ಮಾಡಬೇಕು; ಜಂಗಮಪ್ರಸಾದ ಪಾದೋದಕಗಳನ್ನು ಸ್ವೀಕರಿಸ ಬೇಕು.

೨೭೦. "ಶಿವಭಕ್ತರ ನಡೆ ಶುದ್ಧ, ನುಡಿ ಶುದ್ಧ, ಶಿವಭಕ್ತರ ನೋಟ ಶುದ್ಧ, ಮಾಟ ಶುದ್ಧ, ಶಿವಭಕ್ತರ ನೆನಹು ಶುದ್ಧ, ಅನುಭಾವ ಶುದ್ಧ, ಶಿವಭಕ್ತರ ಕಾಯ ಶುದ್ಧ, ಪ್ರಾಣ ಶುದ್ಧ. ಇದು ಕಾರಣ ಶಿವಭಕ್ತರನೇ ಶಿವನೆಂದು ನಂಬುವುದು. ನಂಬಿದವರು ಶಿವನಪ್ಪುದು ತಪ್ಪದು ನಿಜಗುರು ಸ್ವತಂತ್ರ ಸಿದ್ಧಲಿಂಗೇಶ್ವರಾ"

ಇದು ಸಾಧು ಸಜ್ಜನರ ಸಹವಾಸ, ಅನುಭವಿಗಳ ಮಾರ್ಗಾನುಸರಣೆ. ಸಾಧನೆಯಲ್ಲಿ ತೊಡಗಿರುವಾಗ ಜ್ಞಾನಾಭಾವದಿಂದ ಸಂಶಯಗಳು ಬರಬಹುದು, ತೊಡಕುಗಳು ಬರಬಹುದು, ಹೇಗೆ ವರ್ತಿಸಬೇಕೆಂಬುದು ತಿಳಿಯದೆ ಮನಸ್ಸು ಸಂದೇಹದಲ್ಲಿ ಸಿಕ್ಕಿಕೊಳ್ಳಬಹುದು. ಒಮ್ಮೊಮ್ಮೆ

೨೭೦. ವ. ಶಾ. ಸಾ. ಭಾಗ ೧. (ಪೂ) ಪುಟ ೧೪೦.

ಸಾಧನೆಯಲ್ಲೇ ನಿರುತ್ಸಾಹ ಹುಟ್ಟಬಹುದು. ಇವುಗಳೆಲ್ಲಕ್ಕೂ ಸಂಜೀವನ ಶಿವ ಭಕ್ತರ ಸಹವಾಸ. ಶಿವಭಕ್ತರನ್ನು ನೋಡಿ, ಅವರೊಡನಿದ್ದು, ತನ್ನ ಭಕ್ತಿಯ ಭಂಡಾರವನ್ನು ತುಂಬಿಕೊಂಡು, ತನ್ನ ಜ್ಞಾನವನ್ನು ವರ್ಧಿಸಿಕೊಂಡು, ಅವರ ಆಚರಣೆಯನ್ನು ಅನುಕರಿಸುತ್ತ, ಶಿವನಾಗುವುದೇ ಭಕ್ತನ ಕರ್ತವ್ಯ.

ಹೀಗೆ ಭಕ್ತಸ್ಥಲದಲ್ಲಿ ಸದ್ಭಕ್ತಿಯನ್ನು ಬಲಿಸುತ್ತ, ಕ್ರಿಯಾಶಕ್ತಿ ಯುಕ್ತವಾದ ಆಚಾರಲಿಂಗದ ಉಪಾಸನೆಯನ್ನು ಭಕ್ತನು ಮಾಡುತ್ತಾನೆ. ಸತ್ಕ್ರಿಯಾಚರಣೆಗಳನ್ನು 'ಸುಚಿತ್ತ'ವೆಂಬ ಹಸ್ತದಿಂದ ಆಚಾರಲಿಂಗಕ್ಕೆ ಸಮರ್ಪಿಸುತ್ತಿರುವುದೇ ಈ ಉಪಾಸನೆ. ಈ ಸತ್ಕ್ರಿಯಾಚರಣೆಗಳಿಂದ ಕರ್ಮೇಂದ್ರಿಯಗಳು ನಿವೃತ್ತಿ ಹೊಂದಿ, ದೇಹಾಭಿಮಾನ ಹೋಗಿ, ಅಂತರಂಗ ಶುದ್ಧಿಯುಂಟಾಗುತ್ತದೆ; 'ಸುಚಿತ್ತ' 'ಸುಬುದ್ಧಿ'ಯೆಂಬ ಹಸ್ತವಾಗಿಯೂ, ಲಿಂಗದ ಮೇಲಿನ ಸದ್ಭಕ್ತಿಯೇ ದೃಢಪಟ್ಟು ನಿಷ್ಠಾಭಕ್ತಿಯಾಗಿಯೂ ಪರಿಣಮಿಸುತ್ತದೆ. ಈ ನಿಷ್ಠಾಭಕ್ತಿಯ ದೆಸೆಯಿಂದ ವೀರವ್ರತಿಯಾಗಿ ಪ್ರಾಣ ಹೋದರೂ ವ್ರತವನ್ನು ಬಿಡಲಾರದವನಾಗುತ್ತಾನೆ. ಹೀಗೆ ಏರಿದ ಮೆಟ್ಟಲೇ ಮಹೇಶ್ವರಸ್ಥಲ.

## (ii) ಮಹೇಶ್ವರಸ್ಥಲ

೨೭೧. "ಅನೃತ, ಅನಾಚಾರ, ಅನ್ಯಹಿಂಸೆ, ಪರಧನ, ಪರಸ್ತ್ರೀ, ಪರನಿಂದೆ, ಇವ ಬಿಟ್ಟು ಲಿಂಗ ನಿಷ್ಠೆಯಿಂದ ಶುದ್ಧಾತ್ಮನಾಗಿರಬಲ್ಲರೆ ಮಹೇಶ್ವರಸ್ಥಲವಿದೆಂಬೆನಯ್ಯ ಮಹಾಲಿಂಗ ಗುರು ಶಿವ ಸಿದ್ಧೇಶ್ವರ ಪ್ರಭುವೇ"

೨೭೨. "ನೈಷ್ಠೆ ನೆಲೆಗೊಳ್ಳಬೇಕು ಗುರುಭಕ್ತಿಮಾಡುವಲ್ಲಿ. ನೈಷ್ಠೆ ನೆಲೆಗೊಳ್ಳಬೇಕು ಲಿಂಗ ಪೂಜೆ ಮಾಡುವಲ್ಲಿ. ನೈಷ್ಠೆ ನೆಲೆಗೊಳ್ಳಬೇಕು ಜಂಗಮವನರ್ಚಿಸುವಲ್ಲಿ. ನೈಷ್ಠೆ ನೆಲೆಗೊಳ್ಳಬೇಕು ಪಾದೋದಕ ಪ್ರಸಾದವ ಕೊಂಬಲ್ಲಿ. ನೈಷ್ಠೆ ನೆಲೆಗೊಳ್ಳಬೇಕು, ನಮ್ಮ ಅಖಂಡೇಶ್ವರನ ಒಲಿಸುವಲ್ಲಿ."

೨೭೩. "ಕಡೆಗೆ ಮಾಡದ ಭಕ್ತಿ, ದೃಢವಿಲ್ಲದಾಳುತನ, ಮೃಡನೊಲಿಯ ಹೇಳಿದರೆ ಎಂತೊಲಿವನಯ್ಯಾ? ಮಾಡಲಾಗದು ಅಳಿಮನನ, ಮಾಡಿದಡೆ ಮನದೊಡೆಯ ಬಲ್ಲನೈಸೆ. ವಿರಳವಿಲ್ಲದೆ ಮಣಿಯ ಪೋಣಿಸಿಹೆನೆಂದಡೆ ದುರುಳ ಚೆನ್ನ ಮಲ್ಲಿಕಾರ್ಜುನಯ್ಯನೆಂತೊಲಿವನಯ್ಯಾ"

---

೨೭೧. ಸಿದ್ಧೇಶ್ವರ ವಚನ ಪುಟ ೯೧.

೨೭೨—೩. ವ. ಶಾ. ಸಾ. ಭಾಗ ೧. (ಪೂ) ಪುಟ ೨೯೭,—೨೯೮.

೨೭೪. "ಭಲ ಬೇಕು ಶರಣಂಗೆ ಪರಧನವನೊಲ್ಲೆನೆಂಬ. ಭಲ ಬೇಕು ಶರಣಂಗೆ ಪರಸತಿಯನೊಲ್ಲೆನೆಂಬ. ಭಲ ಬೇಕು ಶರಣಂಗೆ ಪರದೈವವನೊಲ್ಲೆನೆಂಬ. ಭಲ ಬೇಕು ಶರಣಂಗೆ ಲಿಂಗ ಜಂಗಮವು ಒಂದೆಂಬ. ಭಲ ಬೇಕು ಶರಣಂಗೆ ಪರವಾದಿ ನಿಗ್ರಹದಲ್ಲಿ. ಭಲ ಬೇಕು ಶರಣಂಗೆ ಪ್ರಸಾದ ದಿಟವೆಂಬ. ಭಲವಿಲ್ಲದವರ ಮೆಚ್ಚ ನಮ್ಮ ಕೂಡಲ ಸಂಗಮ ದೇವಯ್ಯ"

ಎಂದು ಮಹೇಶ್ವರಸ್ಥಲದ ಸಾಧನೆಗೆ ಆವಶ್ಯಕವಾದ ನಿಷ್ಠಾಭಕ್ತಿಯ ಸ್ವರೂಪವನ್ನು ವಚನಕಾರರು ಹೇಳಿದ್ದಾರೆ. ಈ ನಿಷ್ಠೆಯನ್ನೇಕೆ ಒತ್ತಿ ಹೇಳಿರುವರು ಎಂದರೆ, ಮನುಷ್ಯಸ್ವಭಾವವನ್ನು ಅವರು ಬಲ್ಲರಾಗಿ; ಮೊದಲಿದ್ದ ಉತ್ಸಾಹ ಶ್ರದ್ಧೆಗಳು ಕಾಲಕ್ರಮದಲ್ಲಿ ಕಡಮೆಯಾಗಿ ಕೊನೆಗೆ ಅದೃಶ್ಯವೇ ಆಗಬಹುದೆಂಬ ಹೆದರಿಕೆಯಿಂದ. ಬಸವಣ್ಣನವರು ಹೇಳಿರುವಂತೆ

೨೭೫. "ಬರ ಬರ ಭಕ್ತಿ ಮರೆಯಾಯಿತ್ತು ಕಾಣಿರಣ್ಣಾ! ಮೊದಲ ದಿನ ಹಣೆ ಮುಟ್ಟಿ, ಮರುದಿನ ಕೈಮುಟ್ಟಿ, ಮೂರೆಂಬ ದಿನಕ್ಕೆ ತೂಕಡಿಕೆ ಕಾಣಿರಣ್ಣಾ. ಹಿಡಿದುದ ಬಿಡದಿದ್ದರೆ ಕಡೆಗೆ ಚಾಚುವ. ಅಲ್ಲದಿದ್ದರೆ ನಡು ನೀರಲದ್ದುವ ನಮ್ಮ ಕೂಡಲ ಸಂಗಮ ದೇವ''

ಆದುದರಿಂದ ನಿಷ್ಠೆ ಬಲಿಯುತ್ತ ಹೋಗಿ, ದೃಷ್ಟಿ ಅತ್ತಿತ್ತ ತಿರುಗದೆ ಇರಬೇಕು. ಪರೀಕ್ಷೆ ಕಠಿನವಾದುದು. 'ಶ್ರೇಯಾಂಸಿ ಬಹು ವಿಘ್ನಾನಿ' ಎಂಬಂತೆ ಹಲವು ವಿಘ್ನಗಳು ಬರುತ್ತವೆ. ಮನಸ್ಸಾದರೋ, 'ಮರನನೇರಿದ ಮರ್ಕಟ'. ಭಕ್ತನು ಇವುಗಳನ್ನು ತಿಳಿಯಬೇಕು.

(೧೨೧.) "ನಿಧಾನವ ನೆಗೆವೆನೆಂದು ಹೋದರೆ ವಿಘ್ನ ಬಪ್ಪುದು ಮಾಬುದೇ ಅಯ್ಯ? ಸದಾಶಿವನ ಪೂಜಿಸುವೆನೆಂದು ಹೋದಡೆ ತರುಬಿ ಹಿಡಿವವಯ್ಯ ಸಕಲ ವಿಪತ್ತುಗಳು. ಎದೆ ಭಂಗವಿಲ್ಲದೆ ನಿಲಬಲ್ಲಡೆ ಸದಮಲ ಸುಖವನೀವ ನಮ್ಮ ಚೆನ್ನ ಕೂಡಲ ಸಂಗಮ ದೇವ''

ವಿಘ್ನಗಳು ಪರರಿಂದ ಬರಬಹುದು. ಮಹಾದೇವಿಯಕ್ಕನಿಗೆ ಕೌಶಿಕ ಅಡ್ಡಬಂದ ಹಾಗೆ. ವಿಘ್ನಗಳು ಬರಬಹುದು ಸ್ವಜನರಿಂದ, ಬಂಧು ಮಿತ್ರರಿಂದ, ಕೈಹಿಡಿದ ಹೆಂಡತಿಯಿಂದ, ಹೊಟ್ಟೆಯಲ್ಲಿ ಹುಟ್ಟಿದ ಮಕ್ಕಳಿಂದ.

---

೨೭೪, ಬ. ವ. ಪುಟ ೧೦೩. ೨೭೫, ಬ. ವ. ಪುಟ ೩೩.

ಅವರನ್ನು ತ್ಯಜಿಸುವುದಕ್ಕೂ ಸಿದ್ಧನಾಗಿರಬೇಕು. ತನು ಮನ ಧನಗಳ ಮೇಲಿನ ವ್ಯಾಮೋಹ ಹೇಗಿರುವುದೆಂಬುದನ್ನು ಪರೀಕ್ಷಿಸುವ ಘಟನೆಗಳು ಪ್ರಾಪ್ತವಾಗಬಹುದು.

(೫೫) "ಹರ ತನ್ನ ಭಕ್ತರ ತಿರಿಪಂತೆ ಮಾಡುವ. ಒರೆದು ನೋಡುವ ಸುವರ್ಣದ ಚಿನ್ನದಂತೆ, ಅರೆದು ನೋಡುವ ಚಂದನದಂತೆ, ಅರಿದು ನೋಡುವ ಕಬ್ಬಿನ ಕೋಲಿನಂತೆ. ಬೆದರದೆ ಬೆಚ್ಚದೆ ಇದ್ದಡೆ ಕರವಿಡಿದೆತ್ತಿಕೊಂಬ ನಮ್ಮ ರಾಮನಾಥ"

(೫೪) "ಭಕ್ತನಾಗಿ ತನ್ನ ಹಿಡಿವೆನೆಂದು ಹೋದರೆ ನುಗ್ಗು ಮಾಡುವ, ನುಸಿಯ ಮಾಡುವ, ಮಣ್ಣು ಮಾಡುವ, ಮಸಿಯ ಮಾಡುವ. ಕೂಡಲ ಸಂಗಮ ದೇವರ ನೆರೆ ನಂಬಿದನಾದರೆ ಕಡೆಗೆ ತನ್ನಂತೆ ಮಾಡುವ"

ಭಕ್ತನು ಹೀಗೆ ಸಿದ್ಧನಾಗಿದ್ದು ವೀರವ್ರತಾಚಾರಿಯಾಗಿದ್ದರೆ 'ಕಡೆಗೆ ತನ್ನಂತೆ ಮಾಡುವ'. ಹೊನ್ನು ಹೆಣ್ಣು ಮಣ್ಣುಗಳು ಹಲವರನ್ನು ಕೆಡಿಸಿವೆ.

(೬೩) "ನೆನೆವ ಮನಕ್ಕೆ ಹೊನ್ನ ತೋರಿದೆ. ನೋಡುವ ಕಂಗಳಿಗೆ ಹೆಣ್ಣ ತೋರಿದೆ. ಪೂಜಿಸುವ ಕೈಗಳಿಗೆ ಮಣ್ಣ ತೋರಿದೆ. ಇಂತೀ ತ್ರಿವಿಧಕ್ಕೆ ತ್ರಿವಿಧವ ತೋರಿ ನೀ ಬೇರಾದ ಬಿನ್ನಾಣಕ್ಕೆ ಬೆರಗಾದೆನೈ ಅಮರಗುಂಡದ ಮಲ್ಲಿಕಾರ್ಜುನಾ''

ಲಿಂಗಕ್ಕೆ ಮೀಸಲಾದ ಮನಸ್ಸು ಕಣ್ಣು ಕೈಗಳನ್ನು ಹೀಗೆ ಅನ್ಯತ್ರ ಉಪಯೋಗಿಸಿದರೆ ವ್ರತಭಂಗ. ಹೊನ್ನು ಹೆಣ್ಣು ಮಣ್ಣುಗಳು ಮಾಯೆಯೆಂದು ಅವನ್ನು ದೂಷಿಸಬೇಡ. ನಿನ್ನ ಮನದೊಳಗಿನ ಆಸೆಯೇ ಮಾಯೆ. ಆದುದರಿಂದ ಈ ಆಸೆಯೆಂಬ ಮಾಯೆಯನ್ನು ಹಿಡಿತದಲ್ಲಿಟ್ಟುಕೊಳ್ಳಬೇಕು. ಆಸೆಯಿರಲಿ ಲಿಂಗ ಪ್ರೇಮದಲ್ಲಿ, ಆಸೆಯಿರಲಿ ಜಂಗಮದಾಸೋಹದಲ್ಲಿ, ಆಸೆಯಿರಲಿ ಗುರು ಪೂಜೆಯಲ್ಲಿ. ಇವುಗಳನ್ನು ಛಲದಿಂದ ಸಾಧಿಸಬೇಕು. ಒಳಗಾಗುವ ಪ್ರೇರೇಪಣೆಗಳು ಬಹಳ ಕುಟಿಲ ತಂತ್ರವುಳ್ಳವು. ವ್ರತಶೀಲಗಳನ್ನು ಹಿಡಿದಿರುವೆನೆಂದು ಬಿಂಕದಿಂದ ನಡೆಯುವವರನ್ನು ಅವು ಹಳ್ಳಕ್ಕೆ ತಳ್ಳುತ್ತವೆ.

೩೭೬. "ಸರ್ವಸಂಗಪರಿತ್ಯಾಗಿ ಎಂದಡೆ ಭೋಗಕ್ಕೆರಗಿಸುವೆ. ಪಾಕನೇಮಿ ಎಂದಡೆ ಷಡ್ರಸಾನಕ್ಕೆರಗಿಸುವೆ. ಮೌನವೃತ್ತಿ ಎಂದಡೆ ಸನ್ನೆಯಲ್ಲಿ ಬೇಡಿಸುವೆ. ಬ್ರಹ್ಮಚಾರಿ ಎಂದಡೆ ಅಂಗನೆಯರಿಗೆರಗಿಸುವೆ. ಸಕಳೇಶ್ವರ ದೇವಾ ಎನ್ನ ಅಳಿವಾಡಿ ಕಾಡುವೆ"

ಹೀಗಿರುವಾಗ ನಿಷ್ಕಾಮಭಕ್ತಿಯನ್ನು ಸಾಧಿಸುವುದು ಎಷ್ಟು ಕಷ್ಟತರವಾದುದು ಎಂಬುದನ್ನು ಮನಗಾಣಬೇಕು. ಆದರೆ ಅದನ್ನು ಸಾಧಿಸದೆ ಗತ್ಯಂತರವಿಲ್ಲ. ಬ್ರಹ್ಮರ್ಷಿಯಾಗಬೇಕೆಂದು ತಪಸ್ಸು ಮಾಡುತ್ತಿದ್ದ ವಿಶ್ವಾಮಿತ್ರ ಮಹರ್ಷಿಗಳು ಮೇನಕೆಯಲ್ಲಿ ಸಂಸಾರ ಹೂಡಿದಂತೆ ಸಾಧಕನಿಗೆ ಒದಗುವ ಭಂಗಗಳು ವಿಚಿತ್ರವಾದುವು. ಸತಿಸುತಾದಿಗಳಲ್ಲಿ ಮೋಹವನ್ನು ವರ್ಜಿಸಿ ಸ್ಥಿರವ್ರತನಾಗಬೇಕು. ಪರಧನ ಪರಸ್ತ್ರೀ ಎಂಬಿವುಗಳನ್ನು ಕಣ್ಣಿಂದ ನೋಡಬಾರದು, ಮನಸ್ಸಿನಲ್ಲೂ ಬಯಸಬಾರದು

೩೭೭. "ಹರಿವ ಹಾವಿಂಗಂಜೆ, ಉರಿಯ ನಾಲಗೆಗಂಜೆ, ಸುರಗಿಯ ಮೊನೆಗಂಜೆ. ಒಂದಕ್ಕಂಜುವೆ, ಒಂದಕ್ಕಳುಕುವೆ. ಪರಸ್ತ್ರೀ ಪರಧನ ಎಂಬ ಜೂಜಿಂಗಂಜುವೆ. ಮುನ್ನ ಅಂಜದ ರಾವಣ ಏವಿಧಿಯಾದ. ಅಂಜುವೆನಯ್ಯಾ ಕೂಡಲ ಸಂಗಮ ದೇವಾ"

ಇನ್ನು ಅನ್ಯದೈವಗಳ, ಅನ್ಯೋಪದೇಶಗಳ ಆಕರ್ಷಣೆಗೆ ಸಿಕ್ಕಬಾರದು. ಶಿವನೇ ಸರ್ವೋತ್ತಮನು, ಷಟ್ಸ್ಥಲವೇ ಸರ್ವೋತ್ತಮಮಾರ್ಗ ಎಂಬ ದೃಢನಂಬಿಕೆ ಬರಬೇಕು. ಶಿವಾಗಮಗಳನ್ನೂ ಶಿವಪುರಾಣಗಳನ್ನೂ ಕೇಳುವುದರಲ್ಲಿ ಉತ್ಸುಕತೆಯಿರಬೇಕು. ಶಿವಾಧಿಕ್ಯವನ್ನು ಸ್ಥಾಪಿಸಬೇಕು. ಶಿವನಿಂದೆಗಳನ್ನು ಕೇಳಕೂಡದು. ಶಿವನಿಂದಕರನ್ನು ನಿಗ್ರಹಿಸಲಾಗದಿದ್ದರೆ ತಾನು ಪ್ರಾಣವನ್ನಾದರೂ ಬಿಡಬೇಕು. ಅಹಂಕಾರ ಮಮಕಾರಗಳನ್ನು ಬಿಟ್ಟು ಕೋಪತಾಪಗಳನ್ನು ಬಿಟ್ಟು ದಯಾಪೂರ್ಣನಾಗಿ ಸಕಲ ಪ್ರಾಣಿಗಳಿಗೂ ಹಿತವನ್ನುಂಟುಮಾಡುತ್ತ, ಗುರು ಲಿಂಗ ಜಂಗಮ ಸೇವೆಯಲ್ಲಿ ನಿಷ್ಠೆಯುಳ್ಳವನಾಗಿ, ಶಿವಭಾವವುಳ್ಳವನಾಗಿ, ಪರಿಣಮಿಸುವವನೇ ಮಹೇಶ್ವರನು. ಪಂಚಾಚಾರಗಳನ್ನೂ ಅರುವತ್ತು ನಾಲ್ಕು ಶೀಲಗಳನ್ನೂ ಈ ದೃಢವ್ರತಕ್ಕಾಗಿಯೇ ಹೇಳಿರುವುದರಿಂದ ಅವುಗಳನ್ನು ಪಾಲಿಸಿಕೊಂಡು ಬರಬೇಕು.

---

೩೭೬. ವ. ಶಾ. ಸಾ. ಭಾಗ ೧. (ಪೂ) ಪುಟ ೩೦೩. ೩೭೭. ಬ. ವ. ಪುಟ ೬೬.

ಹೀಗೆ 'ನಿಷ್ಠಾಭಕ್ತಿ'ಯಿಂದ ಕೂಡಿದ ಮಾಹೇಶ್ವರನು 'ಸುಬುದ್ಧಿ' ಎಂಬ ಹಸ್ತದ ಮೂಲಕ ವೀರವ್ರತಾಚರಣೆಗಳನ್ನು ಜ್ಞಾನಶಕ್ತಿಯುತವಾದ ಗುರುಲಿಂಗಕ್ಕೆ ಸಮರ್ಪಿಸುವುದೇ ಗುರುಲಿಂಗದ ಉಪಾಸನೆ. ಇದರಿಂದ ಪಂಚ ವಿಷಯಗಳು ನಿವೃತ್ತಿಹೊಂದಿ, ಸ್ಥಿರ ಅಸ್ಥಿರ ಎಂಬುದರ ಭೇದ ತಿಳಿಯುವಂತಾಗಿ, ಶಿವನನ್ನು ಬಿಟ್ಟು ಬೇರೆ ಮಾರ್ಗವಿಲ್ಲೆಂಬ ಜ್ಞಾನೋದಯವಾಗಿ, ತಳಮಳಗುಟ್ಟುತ್ತಿದ್ದ ಅಂತರಂಗ ಶಾಂತಿಗೂಡಿ ಮುಂದಿನ ಸಾಧನೆಗೆ ಸಿದ್ಧವಾಗುತ್ತದೆ. 'ಸುಬುದ್ಧಿ' ಎಂಬ ಹಸ್ತ ಈಗ 'ನಿರಹಂಕಾರಹಸ್ತ'ವಾಗಿಯೂ, 'ನಿಷ್ಠಾಭಕ್ತಿ' 'ಅವಧಾನಭಕ್ತಿ' ಯಾಗಿಯೂ ಮಾರ್ಪಡುತ್ತವೆ. ಇದೇ ಪ್ರಸಾದಿಸ್ಥಲ.

## (iii) ಪ್ರಸಾದಿಸ್ಥಲ

ಅಂತರಂಗ ಶಾಂತಿಯುಕ್ತವಾಗಿ ಜ್ಞಾನೋದಯವಾಗುವುದರಿಂದ ಎಲ್ಲ ಕಡೆಯೂ ಶಿವನನ್ನು ಕಾಣುವ ಸ್ವಭಾವ, ಎಲ್ಲವನ್ನೂ ಶಿವನ ಕಾರ್ಯಗಳನ್ನಾಗಿ ತಿಳಿಯುವ ಬುದ್ಧಿ, ತಾನು ಶಿವನ ಪೋಷಣೆಗೆ ಒಳಗಾಗಿ ಶಿವನ ಮೂಲಕ ಎಲ್ಲವನ್ನೂ ಪ್ರಸಾದ ರೂಪವಾಗಿ ಪಡೆಯುತ್ತಿರುವೆನೆಂಬ ಅರಿವು, ಈ ಪ್ರಸಾದಿಸ್ಥಲದಲ್ಲಿ ದೊರೆಯುತ್ತವೆ.

೨೭೮. "ಸರ್ವಾಂಗವನು ಲಿಂಗನಿಷ್ಠೆಯಿಂದ ಗಟ್ಟಿಗೊಳಿಸಿ, ಮನವ ಉನ್ಮನಿಯ ಅವಸ್ಥೆಯನೈದಿಸಿ, ಶತಪತ್ರದಲ್ಲಿ ಸ್ಥೈತಿಟ್ಟು, ಲಿಂಗಕ್ಕೆ ಅರ್ಪಿಸಿದ ನೈವೇದ್ಯವ ಲಿಂಗ ನೆನಪಿನಲ್ಲಿಯೇ ಸ್ವೀಕರಿಸುವುದು. ಅಂಗಾರ್ಪಿತವ ವಿಸರ್ಜಿಸುವುದಯ್ಯ. ತಟ್ಟುವ ಮುಟ್ಟುವ ಸೋಂಕುವ ಮರ್ಮವನರಿದು ಲಿಂಗಮುಖಕ್ಕೆ ನಿವೇದಿಸಿ ಲಿಂಗಪ್ರಸಾದವ ಸ್ವೀಕರಿಸಬಲ್ಲರೆ ಪ್ರಸಾದಿಸ್ಥಲವಿದೆಂಬೆನಯ್ಯ ಮಹಾಲಿಂಗ ಗುರು ಶಿವ ಸಿದ್ಧೇಶ್ವರ ಪ್ರಭುವೇ"

೨೭೯. "ತನುವ ಮುಟ್ಟಿಹ ಮನ, ಮನವ ಮುಟ್ಟಿಹ ತನು, ತನು ಮನ ಮುಟ್ಟಿಹ ಸರ್ವಕರಣಗಳು ನೋಡಾ. ಕಾಯದ ಕರಣಗಳ ಮುಟ್ಟಿಹ ಜೀವ ನೋಡಾ. ಕಾಯ, ಜೀವ, ಕರಣಾದಿಗಳು ಶುದ್ಧ ಪರಮಾತ್ಮ ಲಿಂಗದಲ್ಲಿ ಮುಟ್ಟಿಸಬಲ್ಲಡೆ ಅದೇ ಅರ್ಪಿತ, ಅದೇ ಪ್ರಸಾದ ನೋಡಾ. ಆ ಪ್ರಸಾದಿ ಎಂದೂ ಪ್ರಳಯ ವಿರಹಿತನು ನೋಡಾ ಮಹಾಲಿಂಗ ಗುರು ಶಿವ ಸಿದ್ಧೇಶ್ವರ ಪ್ರಭುವೇ"

---

೨೭೮. ಸಿದ್ಧೇಶ್ವರ ವಚನ ಪುಟ ೧೧೧.

೨೭೯. ವ. ಶಾ. ಸಾ. ಭಾಗ ೧. (ಉ.) ಪುಟ ೧೯.

೩೪೦. "ಕಾಯ ಲಿಂಗಾರ್ಪಿತವಾದ ಬಳಿಕ ಕರ್ಮತ್ರಯಂಗಳು ಇರಲಾಗದು ನೋಡಾ. ಜೀವ ಲಿಂಗಾರ್ಪಿತವಾದ ಬಳಿಕ ಸಂಸಾರವ್ಯಾಪ್ತಿಯಾದ ಜೀವನ ಗುಣ ಇರಲಾಗದು. ಅದು ಅರ್ಪಿತವಲ್ಲ ನೋಡಾ. ಕರಣಂಗಳು ಲಿಂಗಾರ್ಪಿತವಾದ ಬಳಿಕ ಕರಣಂಗಳೆಲ್ಲವು ಲಿಂಗಕಿರಣಂಗಳಾಗಿ ಆ ಲಿಂಗಕಿರಣವೇ ಹರಣವಾಗಿರ ಬೇಕು ನೋಡಾ. ಕಾಯದ ಜೀವದ ಕರಣದ ಗುಣವ ಕಳೆಯದೆ ಲಿಂಗಾರ್ಪಿತ ಪ್ರಸಾದಿಗಳೆಂಬ ಪ್ರಪಂಚಿಗಳ ಮೆಚ್ಚನು ಕಾಣಾ ಮಹಾಲಿಂಗ ಗುರು ಶಿವ ಸಿದ್ಧೇಶ್ವರ ಪ್ರಭುವೇ"

೩೪೧. "ಲಿಂಗಕ್ಕೆಂದೇ ನೆನೆವೆ, ಲಿಂಗಕ್ಕೆಂದೇ ಮಾಡುವೆ, ಲಿಂಗಕ್ಕೆಂದೇ ಕೊಡುವೆನು ನಾನಯ್ಯಾ. ಸಕಲ ಪದಾರ್ಥಂಗಳ ಲಿಂಗಕ್ಕೆಂದೇ ಭಾವಿಸುವೆ. ಅಂಗಗುಣಂಗಳ ನರಿಯೆನಯ್ಯಾ. ಲಿಂಗಕ್ಕೆಂದೇ ಕಾಮಿಸುವೆನು ನಿಃಕಾಮಿಯಾಗಿ. ಎನ್ನ ದೇಹೇಂದ್ರಿಯ ಮನ ಪ್ರಾಣಾದಿಗಳು ಲಿಂಗದ ಸತಿಯರಾಗಿ ಲಿಂಗಕ್ಕೆಂದೇ ಬಯಸಿ ಲಿಂಗಪ್ರಾಣಿಗಳಾದ ಕಾರಣ ಲಿಂಗಕ್ಕೆಂದೇ ಕೈಕೊಂಬೆನು. ಅನರ್ಪಿತವ ನರಿಯೆ ಕೂಡಲ ಸಂಗಮ ದೇವಾ"

ಈ ವಚನಗಳಲ್ಲಿ ಪ್ರಸಾದಿಸ್ಥಲದ ಮುಖ್ಯ ತತ್ತ್ವಗಳು ಅಡಕ ವಾಗಿವೆ. ಶಿವಸ್ವರೂಪವನ್ನರಿಯದ ಅಜ್ಞಾನಿಗಳು ಇಂದ್ರಿಯಾದಿಗಳ ಮೂಲಕ ಭೋಗಿಸುವುದನ್ನು 'ನಾನು' ಭೋಗಿಸುತ್ತೇನೆ, 'ನನಗೆ ತೃಪ್ತಿಯಾಯಿತು, ಎಂದು ಅಹಂಕಾರಕ್ಕೆ ಅನ್ವಯಿಸಿಕೊಂಡು, ಎಲ್ಲದರಲ್ಲೂ ತಮ್ಮ ಕರ್ತೃತ್ವವನ್ನು ಆರೋಪಿಸಿಕೊಂಡು ಸುಖದುಃಖಗಳಿಗೆ ಈಡಾಗು ತ್ತಿರುವರು. ಈ ಇಂದ್ರಿಯಾದಿಗಳು ಸ್ವಂತವಾಗಿ ಕೆಲಸಮಾಡಲಾರ ವಾದ್ದರಿಂದ ಇವುಗಳಿಗೆ ಚೇತನಕೊಡುವ ಚೈತನ್ಯಾತ್ಮಕನು ಬೇರೆ ಇರುವನಷ್ಟೆ. ಇಂದ್ರಿಯಸ್ಥಾನಗಳಲ್ಲಿ ಲಿಂಗಗಳಿದ್ದುಕೊಂಡು ಆಯಾ ಇಂದ್ರಿಯಗಳ ಕಾರ್ಯವನ್ನು ತಕ್ಕ ಶಕ್ತಿಯ ಮೂಲಕ ನಡಸುತ್ತಿರುವವು: ಇದನ್ನು ಸಾಧಕನು ಮನಗಾಣಬೇಕು.

ಹೃದಯಸ್ಥಾನದಲ್ಲಿ ಎಲ್ಲವನ್ನೂ ಅರಿವುಮಾಡಿಕೊಳ್ಳುವ, ಸಂಯೋಜಿ ಸುವ, ಅದರಿಂದ ತೃಪ್ತಿ ಆನಂದಗಳನ್ನು ಪಡುವ ಮಹಾಲಿಂಗವಿದೆ; ಪಂಚೇಂದ್ರಿಯಗಳಲ್ಲಿ ಉಳಿದ ಐದು ಲಿಂಗಗಳು ಮಹಾಲಿಂಗದ ಐದು ಮುಖಗಳಾಗಿವೆ.

---

೩೪೦-೧ ವ. ಶಾ. ಸಾ. ಭಾಗ ೧. (ಉ.) ಪುಟ ೩೭, ೧೩.

೨೮೩. "ನಾಸಿಕವಾಚಾರ, ಜಿಹ್ವೆ ಗುರು, ಕಂಗಳು (ಶಿವ)ಲಿಂಗ, ತ್ವಕ್ಕು ಜಂಗಮ ಲಿಂಗ, ಕರ್ಣ ಪ್ರಸಾದ, ಭಾವ ಮಹಾಲಿಂಗ ಕೂಡಲ ಚೆನ್ನಸಂಗಯ್ಯ ನಿಮ್ಮ ಶರಣ ಇಂತು ಸರ್ವಾಂಗಪ್ರಸಾದಿ"

ಸಹಜ ಸ್ಥಿತಿಯಲ್ಲಿ ಜ್ಞಾನೇಂದ್ರಿಯಗಳು ತಮ್ಮ ಕೆಲಸವನ್ನು ತಾವು ಮಾಡುತ್ತಲೇ ಇರುತ್ತವೆ. ಈ ಇಂದ್ರಿಯಕಾರ್ಯಗಳನ್ನು ತಕ್ಕ ರೀತಿ ಪರಿವರ್ತಿಸಿಕೊಳ್ಳುವುದೂ ತಕ್ಕ ರೀತಿ ಅರಿವುಮಾಡಿಕೊಳ್ಳುವುದೂ ಮುಖ್ಯ. ಪದಾರ್ಥಗಳಲ್ಲಿರುವ ರೂಪ ರಸ ಗಂಧಾದಿ ಗುಣಗಳು ನಮ್ಮನ್ನು ಸಾಮಾನ್ಯ ವಾಗಿ ಮೋಹಗೊಳಿಸುತ್ತವೆ. ಈ ರೂಪ ರಸ ಗಂಧಾದಿಗಳು ಪಂಚಭೂತಗಳ ಗುಣಗಳಾಗಿರುತ್ತವೆ. ಮಾಯಾಪ್ರಪಂಚಿಯಾದವನಿಗೆ 'ಇವು ಸುಖ ದುಃಖ ಕಾರಣಗಳು; ಅಂತರ್ಮುಖಿಯಾದವನಿಗೆ ಪ್ರಸಾದ ಸೇವನೆ. ನಾಸಿಕದ ಆಚಾರಲಿಂಗಕ್ಕೆ ಪೃಥ್ವಿಯ ಗುಣವಾದ ಗಂಧ, ಜಿಹ್ವೆಯ ಗುರು ಲಿಂಗಕ್ಕೆ ಜಲದ ಗುಣವಾದ ರಸ, ನೇತ್ರದ ಶಿವಲಿಂಗಕ್ಕೆ ಅಗ್ನಿಯ ಗುಣವಾದ ರೂಪ, ತ್ವಕ್ಕಿನ ಜಂಗಮಲಿಂಗಕ್ಕೆ ವಾಯುಗುಣವಾದ ಸ್ಪರ್ಶ, ಶ್ರೋತ್ರದ ಪ್ರಸಾದಲಿಂಗಕ್ಕೆ ಆಕಾಶಗುಣವಾದ ಶಬ್ದ, ಹೃದಯದ ಮಹಾ ಲಿಂಗಕ್ಕೆ ಆತ್ಮಗುಣವಾದ ಆನಂದ ತೃಪ್ತಿ ಅರ್ಪಣವಾಗಬೇಕು. ನಿಜವಾ ಗಿಯೂ ಗಮನಿಸುವುದಾದರೆ ಹೀಗೆ ಅರ್ಪಣವಾಗುತ್ತಲೇ ಇವೆ. ಆದರೆ 'ನಾನು' ಎಂಬ ಅಹಂಕಾರದಲ್ಲಿ ಈ ಅರ್ಪಣವನ್ನು ತಿಳಿಯದೆ ಕರ್ಮಾ ಧೀನರಾಗುತ್ತಿದೇವೆ; ಇಂದ್ರಿಯಗಳು ಲಿಂಗದ ಸ್ವತ್ತೆಂದು ತಿಳಿದರೆ ಕರ್ಮ ಮುಕ್ತರಾಗುತ್ತೇವೆ. ಕೆಲವರು ಅಜ್ಞಾನಿಗಳು

೨೮೪. "ಪಂಚೇಂದ್ರಿಯ ಮುಖದಲ್ಲಿ ಅಲ್ಲಲ್ಲಿ ತಾಗಿದ ಸುಖವ ಸುಖಿಸಿ ಲಿಂಗಾರ್ಪಿತ ವೆಂಬರು. ಅದು ಲಿಂಗಾರ್ಪಿತವೇ? ಅಲ್ಲ. ಅರ್ಪಿತವ ಮಾಡದೆ ಅನರ್ಪಿ ತವ ಹೊದ್ದದೆ ಅರ್ಪಿಸಬೇಕು. ಅರ್ಪಿಸುವ ಈ ಭೇದವಿಲ್ಲದನ್ನಕ್ಕರ ಶರಣ ನೆನಿಸಬಾರದು ಕೂಡಲ ಚೆನ್ನಸಂಗಯ್ಯ"

'ತಾನು' ಮೊದಲು ಅನುಭವಿಸಿ ಅನಂತರ ಲಿಂಗಕ್ಕೆ ಅರ್ಪಿತವೆಂದರೆ ಅದು ಅರ್ಪಿತವೇ? ಯಾರಿಗೆ ಅರ್ಪಿತ? ಯಾರಿಗೆ ಪ್ರಸಾದ? ಮೊದಲು ಅನುಭವಿಸುವವನು ನೀನೋ ಲಿಂಗವೋ? ಸಕಲೇಂದ್ರಿಯಗಳಲ್ಲಿ

---

೨೮೩. ವ.ಶಾ.ಸಾ.ಭಾಗ ೧.(ಉ.)ಪುಟ೪೧. ೨೮೪. ವ.ಶಾ.ಸಾ.ಭಾಗ ೧.(ಉ.)ಪುಟ೨೭.

ಕುಳಿತಿರುವ ಲಿಂಗದೇವನು ತಾನು ಸವಿದು ನಿನಗೆ ಪ್ರಸಾದವನ್ನು ಕರುಣಿಸುತ್ತಿರುವಲ್ಲಿ ನೀನು ಲಿಂಗದೊಳಗು ಎಂದು ತಿಳಿ. ಎಲ್ಲವೂ ಅವನ ಪ್ರಸಾದವೇ ಹೊರತು ಅನರ್ಪಿತವೆಂಬುದು ಇಲ್ಲವೇ ಇಲ್ಲ.

೨೮೪. "ಪ್ರಕಾಶದ್ವಾರ ಗಂಧದ್ವಾರ ಶಬ್ದದ್ವಾರವೆಂಬ ಆರು ದ್ವಾರಗಳು ಕೂಡಿದ ಠಾವಿನಲ್ಲಿ ನಾದ ಬಿಂದು ಕಲೆ ಎಂಬ ಸಿಂಹಾಸನದ ಮೇಲೆ ಮೂರ್ತಿಗೊಂಡು ಶಬ್ದ ರೂಪು ಗಂಧಗಳಂ ಗ್ರಹಿಸುವಾತ ನೀನಲ್ಲದೆ ಮತ್ತೆಯಾರು ಹೇಳಾ. ಗಳದಲ್ಲಿ ನಿಂತು ಷಡ್ರಸಾನ್ನದ ರುಚಿಯ ಸ್ವಾದಿಸುವಾತ ನೀನಲ್ಲದೆ ಮತ್ತೆಯಾರು ಹೇಳಾ. ಸರ್ವಾಂಗದಲ್ಲಿ ನಿಂದು ತ್ವಗಿಂದ್ರಿಯ ಮುಖದಲ್ಲಿ ಸ್ಪರ್ಶನವ ಕಳೆದು ಕೊಂಬಾತ ನೀನಲ್ಲದೆ ಮತ್ತೆಯಾರು ಹೇಳಾ. ಮನವೆಂಬ ಮುಖದಲ್ಲಿ ನಿಂದು ಪರಿಣಾಮವನ್ನನುಭವಿಸುವಾತ ನೀನಲ್ಲದೆ ಮತ್ತೆಯಾರು ಹೇಳಾ. ಸರ್ವಾವಯವಂಗಳ ಸರ್ವ ಮುಖವಾಗಿ ಭೋಗಿಸಿ ಪ್ರಸಾದವ ಕರುಣಿಸುವ ಕೃಪಾ ಮೂರ್ತಿ ನಿಜಗುರು ಸ್ವತಂತ್ರ ಸಿದ್ಧಲಿಂಗೇಶ್ವರಾ ನೀನಲ್ಲದೆ ಮತ್ತೆಯಾರು ಹೇಳಾ?

ಆದುದರಿಂದ ನಿಜವಾದ ಪ್ರಸಾದಿ ಲಿಂಗಪ್ರಸಾದವನ್ನೇ ತಾನು ಸೇವಿಸುತ್ತಿರುವುದಾಗಿ ತಿಳಿಯುವನು. ನಿಜವಾದ ಪ್ರಸಾದಿ ಯಾವುದನ್ನೂ ಬಯಸಬೇಕಾದ್ದಿಲ್ಲ. ಪದಾರ್ಥಗಳೆಲ್ಲ ತಾವಾಗಿ ಲಿಂಗಾರ್ಪಿತವಾಗುತ್ತವೆ. ಹಣ್ಣು, ಹೂವು ಯಾವುದನ್ನಾದರೂ ಕಿತ್ತು ತಂದು ಅರ್ಪಿತ ಮಾಡಬೇಕಾದುದೂ ಇಲ್ಲ. ಅವು ಇರುವ ಸ್ಥಳದಿಂದಲೇ ಲಿಂಗಕ್ಕೆ ಅರ್ಪಿತಗಳಾಗುತ್ತಿವೆ.

೨೮೫. "ಶಬ್ದ ಸ್ಪರ್ಶ ರೂಪು ರಸ ಗಂಧ ಪಂಚೇಂದ್ರಿಯಗಳು ಮೊದಲಾಗಿ ನಡೆದುವು ಲಿಂಗದತ್ತತ್ತಲೆ. ತಮತಮಗೆ ಬಂದ ಭೋಗ ಸುಖ ಲಿಂಗಾರ್ಪಿತವೆಂದು ನಡೆದುವು ಲಿಂಗದತ್ತತ್ತಲೆ, ಕೂಡಲ ಚೆನ್ನಸಂಗಯ್ಯ ಲಿಂಗನಿವಾಸಿ ಶರಣಂಗೆ"

೨೮೬. "ನೆಲ ತಳವಾರನಾದಡೆ ಕಳ್ಳಂಗೆ ಹೋಗಲೆಡೆಯುಂಟೆ? ಸರ್ವಾಂಗಲಿಂಗಿಗೆ ಅನರ್ಪಿತ ಉಂಟೇ ನಿಷ್ಕಳಂಕ ಮಲ್ಲಿಕಾರ್ಜುನಾ"

---

೨೮೪. ವ. ಶಾ. ಸ್ಥಾ. ಭಾಗ ೧. (ಉ.) ಪುಟ ೪೭.

೨೮೫–೬. ವ. ಶಾ. ಸಾ. ಭಾಗ ೧. (ಉ.) ಪುಟ ೪೪.

ಹೀಗೆ ಎಲ್ಲ ಅರ್ಪಿತಗಳೂ "ತನುವ ತಾಗದ ಮುನ್ನ, ಮನವ ತಾಗದ ಮುನ್ನ, ಆಪ್ಯಾಯನ ಎಡೆಗೊಳ್ಳದ ಮುನ್ನ" ಲಿಂಗದೇವನಿಗೆ ಆಗಿರಬೇಕು.

೨೮೭. "ತನು ಮುಟ್ಟದ ಮುನ್ನವೇ ಲಿಂಗಾರ್ಪಿತವ ಮಾಡಬೇಕು. ಶ್ರೋತ್ರ, ನೇತ್ರ, ಘ್ರಾಣ, ಜಿಹ್ವೆ ತ್ವಕ್ಕು, ಪಂಚೇಂದ್ರಿಯಂಗಳು ಮುಟ್ಟದ ಮುನ್ನವೇ ಲಿಂಗಾರ್ಪಿತವ ಮಾಡಬೇಕು. ನಮ್ಮ ಕೂಡಲ ಚೆನ್ನಸಂಗಯ್ಯನಲ್ಲಿ ಪ್ರಸಾದಿಯಾದೊಡೆ ಇಂತಾಗಬೇಕಯ್ಯ, ಇಂತಲ್ಲದವರು ಬರುಕಾಯರೆನಿಸುವರಯ್ಯ"

ಶ್ರೋತ್ರದಲ್ಲಿ ಶ್ರೋತ್ರವಾಗಿರುವನು ಲಿಂಗದೇವನು. ನೇತ್ರದಲ್ಲಿ ನೇತ್ರವಾಗಿರುವನು ಲಿಂಗದೇವನು. ಹೀಗೆಯೇ ಆಯಾ ಇಂದ್ರಿಯಗಳಲ್ಲಿ ಆಯಾ ಇಂದ್ರಿಯವಾಗಿರುವನು ಲಿಂಗದೇವನು. ಇದರ ಸೂಕ್ಷ್ಮವನ್ನು ತಿಳಿದ ಪ್ರಸಾದಿಗೆ ತನ್ನದೆಂಬ ಕಾಯವುಂಟೇ? ಪ್ರಾಣವುಂಟೇ? ಮನವುಂಟೇ? ಭಾವವುಂಟೇ? ಕರ್ಮೇಂದ್ರಿಯಗಳೂ ಜ್ಞಾನೇಂದ್ರಿಯಗಳೂ ಸಕಲಾವಯವಗಳೂ ಲಿಂಗಾಧೀನ, ಲಿಂಗದವು, ಎಂದಮೇಲೆ

೨೮೮. "ಶಿರ ಮುಖ ಹೃದಯ ಬಾಹುಗಳೆಲ್ಲ ಶಿವನ ಅವಯವಂಗಳಾದುವು. ಶ್ರೋತ್ರ ನೇತ್ರ ಘ್ರಾಣ, ಜಿಹ್ವೆ ತ್ವಕ್ಕೆಂಬವೆಲ್ಲ ಶಿವನ ಇಂದ್ರಿಯಂಗಳಾದುವು. ಮನ ಬುದ್ಧಿ ಚಿತ್ತಹಂಕಾರಂಗಳೆಲ್ಲ ಶಿವನ ಕರಣಂಗಳಾದುವು. ಪ್ರಾಣಾಪಾನ ವ್ಯಾನೋದಾನ ಸಮಾನವೆಂಬಲ್ಲಿ ಶಿವಚೈತನ್ಯವಿದ್ದುದಾಗಿ ಒಳಗಿದ್ದ ಚೇತನವು ನೀವೇ. ಒಳಗೆ ನೀವು, ಹೊರಗೆ ನೀವು, ನಾನೆಂಬುದಿಲ್ಲ. ನಾನೇನು ಮಾಡಿತ್ತು ಎಲ್ಲವೂ ನಿಮ್ಮ ವಿನೋದ. ಎನ್ನ ಸರ್ವಭೋಗವೆಲ್ಲ ನಿಮ್ಮ ಭೋಗವಯ್ಯ. ಕರ್ತೃತ್ವ ನಿಮ್ಮದಾಗಿ ಎನಗೆ ಕರ್ತೃತ್ವವಿಲ್ಲ. ನಾ ನಿಮ್ಮೊಳಗು ನಿಜಗುರು ಸ್ವತಂತ್ರ ಸಿದ್ಧ ಲಿಂಗೇಶ್ವರಾ"

ಹೀಗೆ ಸರ್ವಾಂಗಗಳಲ್ಲಿಯೂ, ಸರ್ವೇಂದ್ರಿಯಗಳಲ್ಲಿಯೂ, ಸರ್ವ ಕರಣಗಳಲ್ಲಿಯೂ ಲಿಂಗಭರಿತನಾಗಿ, ತಾನು ಸರ್ವಾಂಗಲಿಂಗಿಯೆಂದೂ ಲಿಂಗಪೋಷಣೆಯಲ್ಲಿರುವ ಸುಪುತ್ರನೆಂದೂ, ಲಿಂಗಪ್ರಸಾದಸೇವನೆಯ ಸದ್ಭಕ್ತನೆಂದೂ, ಲಿಂಗದಾಸೋಹದ ವೀರಮಾಹೇಶ್ವರನೆಂದೂ ಯಾವನು ತಿಳಿಯುವನೋ, ತಿಳಿದು ಆಚರಿಸುವನೋ, ಅವನೇ ನಿಜವಾದ ಪ್ರಸಾದಿ. ಇಂಥವನ ಪರಿಣಾಮವಾದರೂ ಎಂತಹುದು?

---

೨೮೭. ವ.ಶಾ.ಸಾ. ಭಾಗ ೧.(ಉ.) ಪುಟ ೬೩. ೨೮೮. ವ.ಶಾ.ಸಾ. ಭಾಗ ೧.(ಉ.) ಪುಟ ೪೭.

೨೮. "ಅಂಗಕ್ಕೆ ಆಚಾರವಳವಟ್ಟಲ್ಲಿ ಲಿಂಗಕ್ಕೆ ಆ ಅಂಗವೇ ಅರ್ಪಿತ. ಪ್ರಾಣಕ್ಕೆ ಪ್ರಸಾದ ಸಾಧ್ಯವಾದಲ್ಲಿ ಲಿಂಗಕ್ಕೆ ಪ್ರಾಣವೇ ಅರ್ಪಿತ. ಮನ ಮಹವನಿಂಬು ಗೊಂಡಲ್ಲಿ ಆ ಮಹಾಲಿಂಗಕ್ಕೆ ಮನವೇ ಅರ್ಪಿತ. ಭಾವಕ್ಕೆ ಭ್ರಮೆಯಳಿದು ನಿರ್ಭ್ರಾಂತನಾದಲ್ಲಿ ಲಿಂಗಕ್ಕೆ ಆ ಭಾವವೇ ಅರ್ಪಿತ. ಜ್ಞಾತೃ ಜ್ಞಾನ ಜ್ಞೇಯ ಸಂಪುಟವಾದಲ್ಲಿ ಅರಿವು ನಿರ್ಣಯ ನಿಃಪತಿಯಾಗಿ ಕುರುಹುಗೆಟ್ಟಲ್ಲಿ ಆ ಲಿಂಗಕ್ಕೆ ಅರಿವೇ ಅರ್ಪಿತ. ಇಂತು ಸರ್ವಾಂಗ ಅರ್ಪಿತವಾಗಿ ಲಿಂಗಕ್ಕೆ ಒಡೆತನ ನಿತ್ತಕಾರಣ ಕೂಡಲ ಚೆನ್ನ ಸಂಗಯ್ಯನಲ್ಲಿ ನಾನು, ನೀನು ಎಂಬುದಿಲ್ಲದೆ ನಿಂದ ನಿಜದ ಮಹಾಪ್ರಸಾದಿ"

ಅಂಗ, ಪ್ರಾಣ, ಮನ, ಭಾವ, ಅರಿವು ಎಂಬಿವೆಲ್ಲ ಲಿಂಗಕ್ಕೆ ಪ್ರಸಾದವಾಗಿ ಪರಿಣಮಿಸಿರುವಾಗ 'ನಾನು' 'ನೀನು' ಎಂಬುದು ನಿಂತಂತೆ. "ಎಡದ ಕೈಯಲ್ಲಿ ಹುಲ್ಲು, ಬಲದ ಕೈಯಲ್ಲಿ ಕಿಚ್ಚು, ಸಂದಿತ್ತು ಗುಹೇಶ್ವರ ನಿನ್ನ ಪ್ರಸಾದಿಯಾ"—ಇದು ಅರ್ಪಣ. ಮೃಷ್ಟಾನ್ನ ಗಳ ಅರ್ಪಣಮಾಡಿ ಒಂದರಲ್ಲೂ ಒಂದಿಷ್ಟೂ ಸವೆಯದೆ ಲಿಂಗಕ್ಕೆ ಆರೋಗಣೆ ಮಾಡಿದೆನೆಂದು ಎಲ್ಲವನ್ನೂ ತಾನುಂಬುದು ಅರ್ಪಿತವಲ್ಲ. "ತಾವುಂಡು ನಿಮ್ಮ ದೂರುವರು ಗುಹೇಶ್ವರಾ". ನಿಜವಾದ ಪ್ರಸಾದಿ ಸ್ವಯಂ ಲಿಂಗ. ಇಂಥ ಪ್ರಸಾದಿಗೆ ಕರ್ಮಲೇಪವಿಲ್ಲ, ಸುಖ ದುಃಖಗಳಿಲ್ಲ, ಪುಣ್ಯ ಪಾಪಗಳಿಲ್ಲ.

ಪ್ರಸಾದಿ ಹೀಗೆ 'ಅವಧಾನಭಕ್ತಿ'ಯನ್ನು ಬಲಿಸುತ್ತ ಪಂಚ ಜ್ಞಾನೇಂದ್ರಿಯಗಳನ್ನು ನಿವೃತ್ತಿಹೊಂದಿಸಿ ಸರ್ವಾಂಗ ಲಿಂಗತತ್ತ್ವದಲ್ಲಿ ಎಚ್ಚರಿಕೆಯುಳ್ಳವನಾಗಿ, 'ನಿರಹಂಕಾರಹಸ್ತ'ದಿಂದ ಇಚ್ಛಾಶಕ್ತಿಯುಕ್ತವಾದ ಶಿವಲಿಂಗವನ್ನು ಉಪಾಸನೆ ಮಾಡುತ್ತಿರುವನು. ಇದರ ಫಲವಾಗಿ ಅಂತರಂಗ ಚಿರಶಾಂತಿಯನ್ನು ಪಡೆದು ನಿರ್ಮಲವಾಗಿ ಪರಂಜ್ಯೋತಿಯ ಹೊಳಪು ಹೊಳೆಯುವುದಕ್ಕೆ ತಕ್ಕ ರಂಗವಾಗಿ ಮಾರ್ಪಡುತ್ತದೆ. ಆ ಜ್ಯೋತಿಯನ್ನು ಅಂತರಂಗದಲ್ಲಿ ಕಾಣಬೇಕಾಗಿರುವುದರಿಂದ ಅಂತರ್ಮುಖಿಯಾಗಿ 'ಅನುಭವ ಭಕ್ತಿ'ಯಿಂದ ಸಾಧನೆ ಮಾಡುವನು. ಬಾಹ್ಯ ಚಿಹ್ನೆಗಳಲ್ಲಿಯೂ ಬಾಹ್ಯ ಪೂಜೆಗಳಲ್ಲಿಯೂ ಹೆಚ್ಚು ಮಗ್ನನಾಗದೆ ಅಂತರಂಗಧ್ಯಾನದಲ್ಲಿ ಆಸಕ್ತಿ ವಹಿಸುವವನಾಗುತ್ತಾನೆ. ಬಾಹ್ಯಪ್ರಪಂಚ ಮೊದಲಿನಂತಲ್ಲ. ತನ್ನ ದೇಹೇಂದ್ರಿ

---

೨೮. ವ. ಶಾ. ಸಾ. ಭಾಗ ೧. (ಉ.) ಪುಟ ೨೮.

ಯಾದಿಗಳಲ್ಲಿ ಹೇಗೆ ಲಿಂಗ ನಾನಾ ರೂಪಗಳನ್ನು ತಾಳಿರುವುದೆಂದು ತಿಳಿದಿರುವನೋ ಹಾಗೆಯೇ ಎಲ್ಲ ಮನುಷ್ಯರಲ್ಲೂ ಎಲ್ಲ ಪ್ರಾಣಿಗಳಲ್ಲೂ ಭಗವಂತನು ನೆಲಸಿರುವನೆಂದು ತಿಳಿಯುವುದರಿಂದ "ಯತ್ರಜೀವಸ್ತತ್ರ ಶಿವಃ" ಎಂಬ ಭಾವನೆ ಸ್ಥಿರಪಡುತ್ತ ಹೋಗುತ್ತದೆ. "ದಯವೇಬೇಕು ಸಕಲ ಪ್ರಾಣಿಗಳಲ್ಲಿ; ದಯವಿಲ್ಲದ ಧರ್ಮವಾವುದಯ್ಯ" ಎಂದು ಸಕಲ ಭೂತ ಪ್ರಾಣಿಗಳಲ್ಲಿಯೂ ದಯೆಯನ್ನು ತೋರುವವನಾಗುತ್ತಾನೆ. ಆದುದರಿಂದ ಅಸಹ್ಯತೆ, ಕೋಪ, ತಾಪ, ಮೋಹ, ಮದ, ಮತ್ಸರಾದಿಗಳಿಗೆ ಎಡೆಯಿಲ್ಲವಾಗಿ ಸಮತಾ ಭಾವಯುತನಾಗುತ್ತಾನೆ. ದೈವಗುಣವಾದ ಪ್ರೇಮವನ್ನು ಸರ್ವರ ಮೇಲೂ ಬೀರುತ್ತಾನೆ. ಇಂದ್ರಿಯ ಗೋಚರವಾಗುವ ಎಲ್ಲ ಭೋಜ್ಯಗಳೂ, ಫಲ ಪುಷ್ಪಾದಿಗಳೂ ತಾವಾಗಿಯೇ ಲಿಂಗಾರ್ಪಿತಗಳಾಗುವುದರಿಂದ 'ಬಂದುದನ್ನು ಉಣ್ಣುತ್ತ' 'ಉಂಡು ಉಪವಾಸಿ' ಯಾಗಿರುತ್ತಾನೆ. ಲಿಂಗದ ಕರ್ತೃತ್ವವಾಗಿ ಲಿಂಗದೇಹಿಯಾಗಿರುವುದರಿಂದ 'ಬಳಸಿ ಬ್ರಹ್ಮಚಾರಿ' ಯಾಗಿರುತ್ತಾನೆ. ಪಂಚವಾಯುಗಳನ್ನು ನಿವೃತ್ತಿಗೊಳಿಸಿ ಸ್ವಸ್ವರೂಪಾನುಭವ ಮಾಡುವ 'ಅನುಭವಭಕ್ತಿ' ಯನ್ನು ಯಾರೂ ಹೊರಗಿಂದ ತುಂಬುವ ಹಾಗಿಲ್ಲ. ಅದು ಸ್ವಂತ ಧ್ಯಾನದಿಂದ, ಯೋಗಸಮಾಧಿಯಿಂದ ತುಂಬಬೇಕು. ಈ ಪ್ರಕರಣವೇ ಪ್ರಾಣಲಿಂಗಿಸ್ಥಲ.

## (iv) ಪ್ರಾಣಲಿಂಗಿ ಸ್ಥಲ

ಇದುವರೆಗೂ ಹೇಳಿದ ಮೂರು ಸ್ಥಲಗಳಲ್ಲಿ ಕರ್ಮಪ್ರಾಧಾನ್ಯವಿರುವುದನ್ನೂ ಜ್ಞಾನವಿನ್ನೂ ಸಂಪೂರ್ಣ ವಿಕಾಸಹೊಂದದೆ ಅದು ಗೌಣವಾಗಿರುವುದನ್ನೂ ಕಾಣಬಹುದಾಗಿದೆ. ಪ್ರಾಣಲಿಂಗಿಸ್ಥಲದಿಂದ ಮುಂದೆ ಜ್ಞಾನ ಪ್ರಧಾನವಾಗಿ ಕರ್ಮ ಗೌಣವಾಗುತ್ತದೆ. ಇದುವರೆಗೂ ಆದುದು ದೇಹ ಮನಸ್ಸುಗಳ ಶಿಕ್ಷಣ; ಸುತ್ತುಸುಳಿಯುವ ಮನವನ್ನು ಒಂದು ಕಡೆಗೆ ತಂದು ನಿಲ್ಲಿಸಿದುದೂ ಹೊರಗಿನ ದೇವರು ಒಳಗಿರುವನೆಂದು ತೋರಿಸಿ ಕೊಟ್ಟಿರುವುದೂ ಅದರ ಪರಿಣಾಮ. ಮುಂದೆ ಆಗುವುದು ಆತ್ಮಸ್ವರೂಪ ಜ್ಞಾನ. ಈಗ ಒಳಗಿನ ಚೈತನ್ಯಮೂರ್ತಿಯ ನಿಕಟಸಂಬಂಧದಿಂದ ಏನಾಗುವುದೆಂಬುದನ್ನು ನೋಡಬಹುದಾಗಿದೆ.

೨೫೦. "ಲಿಂಗದಲ್ಲಿ ಪ್ರಾಣವ ನಿಲಿಸಿ, ಪ್ರಾಣದಲ್ಲಿ ಲಿಂಗವನಿರಿಸಿ ನೆನೆವುತ್ತಿದ್ದ ಕಾರಣ ಪ್ರಾಣಲಿಂಗವಾಯಿತು. ಆ ಲಿಂಗ ಸರ್ವಕರಣಂಗಳ ವೇಧಿಸಿ, ಕರಣಂಗಳು ಲಿಂಗಕರಣಂಗಳಾದ ಕಾರಣ ಒಳಗೆ ಕರತಳಾಮಲಕದಂತೆ ಲಿಂಗ ನೆಲೆಗೊಂಡಿತ್ತಾಗಿ ಹೊರೆದೆನೆಂದು ಅರಿಯೆನು ನಿಜಗುರು ಸ್ವತಂತ್ರ ಸಿದ್ಧ ಲಿಂಗೇಶ್ವರಾ ನೀವು ಪ್ರಾಣಲಿಂಗವಾಗಿ"

೨೫೧. "ಸುಗುಣವೇ ಲಿಂಗಪ್ರಾಣಿಯಯ್ಯ, ದುರ್ಗುಣವೇ ವಾಯುಪ್ರಾಣಿಯಯ್ಯ. ಸುಗುಣ ನಿರ್ಗುಣ ಎಂಬುಭಯವನತಿಗಳೆದು ಸುಖದುಃಖಾದಿಗಳ ಸಮಾನಗಂಡು, ಹಾಸ್ಯ, ವಿಸ್ಮಯ, ವಿರಹ, ಕರಣ, ಹೇಸಿಕೆ, ಇಂತೀ ಪ್ರಾಣದ ವಿಷಯ ಭ್ರಾಂತಿಗಳನತಿಗಳೆದು, ಪ್ರಾಣದ ಪೂರ್ವಾಶ್ರಯವನಳಿದು ಲಿಂಗದ ನೆನಹು ಸಂಬಂಧಿಸಿ, ಲಿಂಗವೇ ಪ್ರಾಣವಾಗಿರಬಲ್ಲಡೆ ಪ್ರಾಣಲಿಂಗಿಸ್ಥಲವೆಂಬೆನಯ್ಯ ಮಹಾಲಿಂಗ ಗುರು ಶಿವ ಸಿದ್ಧೇಶ್ವರ ಪ್ರಭುವೇ"

೨೫೨. "ಲಿಂಗವೇ ಪ್ರಾಣ, ಪ್ರಾಣವೇ ಲಿಂಗವಾಯಿತ್ತು. ಅಂಗ ಲಿಂಗವಾಯಿತ್ತು. ಗುಹೇಶ್ವರಲಿಂಗದಲ್ಲಿ ಸರ್ವಾಂಗ ಪ್ರಾಣಲಿಂಗಸ್ವಾಯತವಾಯಿತ್ತು ಕಾಣಾ (ಚೆನ್ನಬಸವಣ್ಣಾ)"

ಎಂಬ ವಚನಗಳಲ್ಲಿ ಪ್ರಾಣಲಿಂಗಿಯ ಸ್ವರೂಪವನ್ನು ಕಾಣಬಹುದಾಗಿದೆ. ಈಗ ಸಾಧಕನು ಒಳಗೆ ಲಿಂಗದ ಬೆಳಕನ್ನು ನೋಡುವವನಾಗುತ್ತಾನೆ. ತನುತ್ರಯಗಳ ವ್ಯಾಪಾರವನ್ನು ನಡಸುವ ಷಡ್ಲಿಂಗಗಳನ್ನೂ ಅವುಗಳ ಮಂತ್ರಾಕ್ಷರಗಳನ್ನೂ ಕಲೆಗಳನ್ನೂ ಶಕ್ತಿಗಳನ್ನೂ ಗ್ರಹಿಸಿ ಪ್ರಾಣಲಿಂಗದ ಉಪಾಸನೆ ಮಾಡುತ್ತಾನೆ. ಪರವಸ್ತು ನಿರಂಜನ ಲಿಂಗವಾಗಿ ಪಶ್ಚಿಮ ಚಕ್ರದಲ್ಲಿಯೂ, ನಿಶ್ಶೂನ್ಯಲಿಂಗವಾಗಿ ಶಿಖಾಚಕ್ರದಲ್ಲಿಯೂ, ನಿಃಕಲ ಲಿಂಗವಾಗಿ ಬ್ರಹ್ಮರಂಧ್ರಸ್ಥಾನದಲ್ಲಿಯೂ ಇದೆ. ಹುಬ್ಬುಗಳ ಮಧ್ಯ ಭಾಗದ ಆಜ್ಞಾಚಕ್ರದಲ್ಲಿ ಮಹಾಲಿಂಗವಿದೆ. ಕಂಠಸ್ಥಾನದ ವಿಶುದ್ಧಿಚಕ್ರದಲ್ಲಿ ಪ್ರಸಾದಲಿಂಗವಿದೆ. ಹೃದಯಸ್ಥಾನದ ಅನಾಹತ ಚಕ್ರದಲ್ಲಿ ಜಂಗಮಲಿಂಗವಿದೆ. ನಾಭಿಯ ಮಣಿಪೂರಕ ಚಕ್ರದಲ್ಲಿ ಶಿವಲಿಂಗ

---

೨೫೦-೨. ವ. ಶಾ. ಸಾ. ಭಾಗ ೧. (ಉ. ಪುಟ ೮೬, ೧೦೭, ೧೦೪.

ವಿದೆ. ಲಿಂಗಸ್ಥಾನದ ಸ್ವಾಧಿಷ್ಠಾನಚಕ್ರದಲ್ಲಿ ಗುರುಲಿಂಗವಿದೆ. ಮೂಲಾಧಾರದ ಆಧಾರಚಕ್ರದಲ್ಲಿ ಆಚಾರಲಿಂಗವಿದೆ. ಹೃದಯಸ್ಥಾನದಲ್ಲಿ ಅಷ್ಟದಳಕಮಲವೊಂದು ಬಾಳೆಯ ಹೂವಿನಂತೆ ಅಧೋಮುಖಿಯಾಗಿದೆ. ಆ ಕಮಲದ ಮಧ್ಯದಲ್ಲಿ ಜೀವನು ಪ್ರಾಣವಾಯುಗೂಡಿ ಜಾಗ್ರತ್ ಸ್ವಪ್ನ ಸುಷುಪ್ತಿ ಎಂಬ ಅವಸ್ಥಾತ್ರಯವನ್ನು ಅನುಭವಿಸುತ್ತ ಇದ್ದಾನೆ. ಪ್ರಾಣವಾಯು ಉಚ್ಛ್ವಾಸ ನಿಶ್ವಾಸಗಳನ್ನು ನಡಸುತ್ತಿರುತ್ತದೆ. ಉಚ್ಛ್ವಾಸ ನಿಶ್ವಾಸಗಳನ್ನು ಬಂಧಿಸಿದರೆ ಕಣ್ಣಾಲಿಗಳ ಹರಿದಾಟವೂ ಮನಸ್ಸಿನ ಹರಿದಾಟವೂ ನಿಂತು, ಮನಸ್ಸು ನಿರ್ಗಮನಿಯಾಗಿ, ಆತ್ಮ ತನ್ನ ನಿಜವನ್ನು ನಿಶ್ಚೈಸುವುದಕ್ಕೆ ಸಾಮರ್ಥ್ಯವುಳ್ಳದ್ದಾಗುತ್ತದೆ. ಒಳಗಿನ ಲಿಂಗಗಳೊಡನೆ ಮುಖ್ಯವಾಗಿ ಆಜ್ಞಾಚಕ್ರದಲ್ಲಿರುವ ಮಹಾಲಿಂಗ, ಅಲ್ಲಿಂದ ಮೇಲೆ ಬ್ರಹ್ಮರಂಧ್ರಸ್ಥಾನದ ನಿಃಕಲಲಿಂಗ, ಇವುಗಳೊಡನೆ ಸಮರಸದಿಂದ ಐಕ್ಯವಾಗುವುದೇ ಮುಕ್ತಿ. ಮಹಾಲಿಂಗ ಪ್ರವೃತ್ತಿ ಮಾರ್ಗದಲ್ಲಿ ವಿಕಾಸಹೊಂದಿ ತನ್ನ ಚೈತನ್ಯವನ್ನೇ ಇಂದ್ರಿಯಾದಿಗಳಲ್ಲಿರುವ ಆಚಾರಾದಿ ಇತರ ಲಿಂಗಗಳಲ್ಲಿ ಬೀರಿ, ಅವುಗಳ ಕಾರ್ಯಗಳನ್ನು ನಿಯೋಜಿಸುವ ಸೂತ್ರಧಾರನಾಗಿ, ಸಾರ್ವಭೌಮ ಪದವಿಯಲ್ಲಿರುವುದರಿಂದ, ಕಲೆಗಳ ಸಹಾಯದಿಂದ ಪಂಚವಿಂಶತಿ ಅಂಗ ತತ್ತ್ವಗಳನ್ನು ಪಂಚಶಕ್ತಿಗಳಲ್ಲಿ ನಿವೃತ್ತಿಗೊಳಿಸಿ ಆ ಮಹಾಲಿಂಗದೊಡನೆ ಸಮರಸದಿಂದ ಐಕ್ಯವಾಗುವುದೇ ಪ್ರಥಮತಃ ಷಟ್ಸ್ಥಲಗಳ ನಿವೃತ್ತಿರೂಪವಾದ ಮುಕ್ತಿ ಎಂದೆನಿಸುತ್ತದೆ. ಅನಂತರ ನಿಃಕಲಲಿಂಗದಲ್ಲಿ ಐಕ್ಯವಾಗುವುದೂ, ಶೂನ್ಯಲಿಂಗ ಸರ್ವ ಶೂನ್ಯ ನಿರಾಲಂಬವಾಗುವುದೂ ನಿರವಯ ಬಯಲು ಎನಿಸುತ್ತದೆ.

೨೯೩. "ಆಜ್ಞಾಚಕ್ರದ ಮಧ್ಯ ಹೃದಯದಲ್ಲಿ ಭರಿತನಾಗಿ, ನಾದ ಬಿಂದು ಕಲೆ ಎಂಬ ದಿವ್ಯಪೀಠದ ಮೇಲೆ ತೋರುತ್ತ, ತನ್ನ ಕಲೆಯನ್ನೆಲ್ಲ ದ್ವಾರಂಗಳಲ್ಲಿ ಬೀರುತ್ತ, ಮತ್ತೆಲ್ಲವ ಮೀರಿದ ನಿರ್ಮಲ ಶಿವಲಿಂಗರೂಪು ತಾನೇ ಪರಮಪದವು. ಆ ಪರಮಪದವನರಿದ ನಿರ್ಮಲಜ್ಞಾನಿಯೇ ನಿಜಮುಕ್ತನಯ್ಯಾ ನಿಜಗುರು ಸ್ವತಂತ್ರ ಸಿದ್ಧಲಿಂಗೇಶ್ವರಾ"

---

೨೯೩. ವ. ಶಾ. ಸಾ. ಭಾಗ ೧. (ಉ.) ಪುಟ ೧೧೭.

೨೯೪. "ಚಿತ್ತದ ಕಳೆಯಲ್ಲಿ ಸದ್ವಿವೇಕವೆಂಬ ಲಿಂಗಕಳೆ ಉದಯಿಸಿ ಮಹಾಜ್ಞಾನ ಪ್ರಕಾಶವಾಗಿ ಮೆರೆವುತಿಪ್ಪ ಚಿಲ್ಲಿಂಗವು ಶರಣನ ದೇಹವೆಂಬ ಭೂಮಿಯ ಮರೆಯಲ್ಲಿ ಅಡಗಿಪ್ಪುದು ನೋಡಾ. ನೆಲದ ಮರೆಯ ನಿಧಾನದಂತೆ ಷಡಾಧಾರದಲ್ಲಿ ಷಡಾದಿಯಾಗಿ ಷಡಾತ್ಮಕನಾಗಿಪ್ಪುದು ನೋಡಾ. ಪಂಚೇಂದ್ರಿಯ ದ್ವಾರಂಗಳಲ್ಲಿ ಪಂಚವದನನಾಗಿ ಪ್ರಭಾವಿಸುತ್ತಿಪ್ಪುದು ನೋಡಾ. ದಶವಾಯುಗಳ ಕೂಡಿ ದೆಸೆದೆಸೆಗೆ ನಡೆವುತಿಪ್ಪ ವಿಶ್ವಚೈತನ್ಯವಾಗಿಪ್ಪುದು ನೋಡಾ. ಸರ್ವಾಂಗದಲ್ಲಿಯೂ ತನ್ಮಯವಾಗಿಪ್ಪುದು ನೋಡಾ. ಮನದಲ್ಲಿ ಮತಿಯ ಕಣಜ ಮಾತಿನಲ್ಲಿ ಜ್ಯೋತಿರ್ಲಿಂಗವಾಗಿ ಎನ್ನ ಬ್ರಹ್ಮರಂಧ್ರದಲ್ಲಿ ತೊಳಗಿ ಬೆಳಗುವ ಪರಂಜ್ಯೋತಿ ನೀನೆ ಕಾಣಾ ಮಹಾಲಿಂಗ ಗುರು ಶಿವ ಸಿದ್ಧೇಶ್ವರ ಪ್ರಭುವೇ"

೨೯೫. ಹರಿವ ಮನವ ವಾಯುವನೊಂದು ಹುರಿಯಮಾಡಿ, ಮನವ ಸ್ಥಿರಗೊಳಿಸಿ, ಸಗುಣಧ್ಯಾನದಲ್ಲಿ ಮನವ ಸವಿದು, ನಿರ್ಗುಣದಲ್ಲಿ ನಿಂದು, ಆ ನಿರ್ಗುಣ ಧ್ಯಾನ ಬಲಿದು ಸಗುಣ ನಿರ್ಗುಣದಲ್ಲಿ ಅಡಗಿ, ಆ ನಿರ್ಗುಣವಾದ ನಿಜದಲ್ಲಿ ಮನೋಲ್ಲಯವಾದುದೇ ನಿಜಗುರು ಸ್ವತಂತ್ರ ಸಿದ್ಧಲಿಂಗೇಶ್ವರನ ಪರಮ ರಾಜಯೋಗ"

ನೆಲದ ಮರೆಯ ನಿಧಾನದಂತೆ ಇರುವ ಆ ಪರಂಜ್ಯೋತಿಯನ್ನು ಕಾಣಲು ಪ್ರಾಣಲಿಂಗಿ ಅಂತರ್ಮುಖಿಯಾಗಿ ಶಿವಯೋಗದಲ್ಲಿ ನಿರತನಾಗುತ್ತಾನೆ. ಚಿತ್ತ ಶುದ್ಧವಾಗಿರುವುದರಿಂದಲೂ, ಬುದ್ಧಿ ನಿರ್ಮಲವಾಗಿರುವುದರಿಂದಲೂ, ಅಹಂಕಾರ ಮರೆಯಾಗಿರುವುದರಿಂದಲೂ, ಮನಸ್ಸು ಒಂದೆಡೆ ನಿಂತು ಶಾಂತವಾಗಿರುವುದರಿಂದಲೂ ಇಂದ್ರಿಯಗಳೆಲ್ಲ ಸ್ತಬ್ಧವಾಗಿ ನಿವೃತ್ತಿ ಹೊಂದಿರುವುದರಿಂದಲೂ ಲಿಂಗಜ್ಯೋತಿ ಆತ್ಮನಿಗೆ ಕಾಣುತ್ತದೆ; ಸ್ವಸ್ವರೂಪಜ್ಞಾನವೂ ಅಂಕುರಿಸುತ್ತದೆ; ಆತ್ಮ ಪರಮಾತ್ಮರುಗಳ ಸಂಬಂಧ ಬೆಳೆಯುತ್ತದೆ. ಆದರೆ ಈ ಯೋಗವು ಲಿಂಗ ವಿರಹಿತವಾದುದಲ್ಲ. 'ಹರಿವ ಮನವ ವಾಯುವನೊಂದು ಹುರಿಯ ಮಾಡು'ವುದಕ್ಕೂ ಇಷ್ಟಲಿಂಗವೇ ಸಾಧನ. ಇಷ್ಟಲಿಂಗದಲ್ಲಿ ನೋಟವನ್ನು ನೆಟ್ಟು, ಮನಸ್ಸನ್ನು ಸ್ಥಿರಪಡಿಸಿ ತನ್ಮೂಲಕ ಪ್ರಾಣಲಿಂಗದ ಭೇದಗಳನ್ನು ಒಳಗೆ ಅರಿಯುವುದೇ ಶಿವಯೋಗ. ಒಂದು ರೀತಿಯಲ್ಲಿ ತ್ಯಾಗಾಂಗ, ಭೋಗಾಂಗ, ಯೋಗಾಂಗಗಳು ಶಿವಯೋಗದ

---

೨೯೪. ಸಿದ್ಧೇಶ್ವರ ವಚನ ಪುಟ ೧೨೩.
೨೯೫. ವ. ಶಾ. ಸಾ. ಭಾಗ ೧. (ಉ.) ಪುಟ ೧೧೮.

ರೂಪಾಂತರಗಳೇ. ಸ್ಥೂಲ ತನುವಿನ ಯೋಗ ಇಷ್ಟಲಿಂಗದಲ್ಲಿ, ಸೂಕ್ಷ್ಮತನುವಿನ ಯೋಗ ಪ್ರಾಣಲಿಂಗದಲ್ಲಿ, ಕಾರಣತನುವಿನ ಯೋಗ ಭಾವಲಿಂಗದಲ್ಲಿ. ಸತ್ಕ್ರಿಯಾಚರಣೆಗಳಿಂದ, ಸದ್ಭಕ್ತಿ ಸದಾಚಾರಗಳಿಂದ, ಸ್ಥೂಲತನು ಇಷ್ಟಲಿಂಗದಲ್ಲಿ ಯೋಗಹೊಂದಿ ತನು ನಷ್ಟವಾಗಿ ಇಷ್ಟಲಿಂಗವಾಗುತ್ತದೆ. ಸಕಲ ಭೋಗಗಳಿಗೂ ಲಿಂಗದ ಕರ್ತೃತ್ವವನ್ನು ವಹಿಸಿ ಸೂಕ್ಷ್ಮತನು ಪ್ರಾಣಲಿಂಗದಲ್ಲಿ ಸಂವೇದಿಸಿ ಮನ ನಷ್ಟವಾಗಿ ಪ್ರಾಣಲಿಂಗವಾಗುತ್ತದೆ. 'ನೀನು, ನಾನು' ಎಂಬುದಿಲ್ಲದೆ ಕಾರಣತನು ಭಾವಲಿಂಗದಲ್ಲಿ ಸಂಯೋಗ ಹೊಂದಿ, ಭಾವ ನಷ್ಟವಾಗಿ ಭಾವ ಲಿಂಗವಾಗುತ್ತದೆ.

ಆದುದರಿಂದ ಲಿಂಗತ್ರಯವನ್ನು ಬಿಟ್ಟು ಶಿವಯೋಗವಿಲ್ಲ. ಬ್ರಹ್ಮರಂಧ್ರ ಸ್ಥಾನದ ನಿಷ್ಕಲ ಲಿಂಗಕಳೆಯನ್ನೇ ಗುರು ಆಕರ್ಷಿಸಿ ಭಾವಲಿಂಗ ಪ್ರಾಣ ಲಿಂಗ ಇಷ್ಟಲಿಂಗಗಳನ್ನಾಗಿ ಮಾಡಿಕೊಟ್ಟಿರುವುದರಿಂದ, ಈ ಮೂರು ಲಿಂಗಗಳೂ ಬೇರೆ ಬೇರೆಯಲ್ಲವೆಂದೂ ಒಂದೇ ಲಿಂಗದ ಮೂರು ರೂಪಗಳೆಂದೂ ಅನುಭವಜ್ಞಾನದಿಂದ ತಿಳಿದು ಲಿಂಗತ್ರಯಗಳ ಏಕತ್ವಾನುಸಂಧಾನ ಮಾಡುವುದೇ ಪ್ರಾಣಲಿಂಗಿಯ ಶಿವಯೋಗ ಸಾಧನೆ. ಆದುದರಿಂದ ಪರವಸ್ತು ಭ್ರೂಮಧ್ಯಸ್ಥಾನದಲ್ಲಿಯೊ, ಬ್ರಹ್ಮರಂಧ್ರಸ್ಥಾನದಲ್ಲಿಯೊ ಇರುವುದೆಂದು ಭ್ರಮಿಸಿ ಕಣ್ಣುಮುಚ್ಚಿ ಧ್ಯಾನಿಸುವುದು ಶಿವಯೋಗವಲ್ಲ.

೨೯೬. "ಬ್ರಹ್ಮರಂಧ್ರದಲ್ಲಿ ಇಪ್ಪನಾದ ಚೈತನ್ಯವಪ್ಪ ಪರಮ ಚಿತ್ಕಳೆಯನೇ ಭಾವ ಮನ ಕರದಲ್ಲಿ ಶ್ರೀಗುರು ತಂದು ಸಾಹಿತ್ಯವ ಮಾಡಿದನಾಗಿ ಭಾವದಲ್ಲಿ ಸತ್ಸ್ವರೂಪವಪ್ಪ ಭಾವಲಿಂಗವೆನಿಸಿ ಪ್ರಾಣದಲ್ಲಿ ಚಿತ್ಸ್ವರೂಪವಪ್ಪ ಪ್ರಾಣಲಿಂಗವೆನಿಸಿ ಕರಸ್ಥಲದಲ್ಲಿ ಆನಂದ ಸ್ವರೂಪವಪ್ಪ ಇಷ್ಟಲಿಂಗವೆನಿಸಿ ಒಂದೇ ವಸ್ತು ತನು ಮನ ಭಾವಂಗಳಲ್ಲಿ ಇಷ್ಟ ಪ್ರಾಣ ಭಾವವಾದ ಭೇದವನರಿದು ಇಷ್ಟಲಿಂಗವ ದೃಷ್ಟಿಯಿಂದ ಗ್ರಹಿಸಿ ಪ್ರಾಣಲಿಂಗವ ಮನಜ್ಞಾನದಿಂದ ಗ್ರಹಿಸಿ ತೃಪ್ತಿಲಿಂಗವ ಭಾವಜ್ಞಾನದಿಂದ ಗ್ರಹಿಸಿ ಈ ಲಿಂಗತ್ರಯವಿಡಿದು ಆಚರಿಸಿ ಲಿಂಗದೊಡನೆ ಕೂಡಿ ಆ ಲಿಂಗವೇ ತಾನು ತಾನಾಗಿ ವಿರಾಜಿಸುತಿಪ್ಪುದೀಗ ಶಿವಯೋಗ ನೋಡಾ ಮಹಾಲಿಂಗ ಗುರು ಶಿವ ಸಿದ್ಧೇಶ್ವರ ಪ್ರಭುವೇ"

---

೨೯೬. ಸಿದ್ಧೇಶ್ವರ ವಚನ ಪುಟ ೧೨೨.

೨೯೭. "ಅಯ್ಯಾ, ಸ್ಥೂಲ ಸೂಕ್ಷ್ಮ ಕಾರಣ ತನುಗಳಲ್ಲಿ ಇಷ್ಟ ಪ್ರಾಣ ಭಾವಂಗಳ ಉಚಿತವನರಿದು ಮಾಡುವುದೇ ಶಿವಯೋಗ. ಆ ಯೋಗವ ಪ್ರಯೋಗಿಸಿ ನಿಂದಲ್ಲಿ ಕಾಲಾಂತಕ ಭೀಮೇಶ್ವರಲಿಂಗದಲ್ಲಿ ಉಭಯವನಳಿದ ಭಾವವು"

೨೯೮. "(ನಿಜ ಶಿವಯೋಗಿಯ) ನೋಟವೇ ಕೂಟ, ಕೂಟವೇ ಪ್ರಾಣ, ಪ್ರಾಣವೇ ಏಕ, ಏಕವೇ ಸಮರಸ, ಸಮರಸವೇ ಲಿಂಗ, ಲಿಂಗವೇ ಪರಿಪೂರ್ಣ, ಪರಿಪೂರ್ಣವೇ ಪರಬ್ರಹ್ಮ ತಾನೇ ನೋಡಾ, ತನ್ನ ತಾನೇ ಬೆಳಗುತಿರ್ಪುದು ಗುಹೇಶ್ವರ ಲಿಂಗವು."

ಹೀಗೆ ಇಷ್ಟಲಿಂಗದ ನೋಟ ಪ್ರಾಣಲಿಂಗದ ಕೂಟವಾಗುವ ಸನ್ನಿವೇಶದಲ್ಲಿ ವಾಯುಸಂಚಾರ ಈಡಾ ಪಿಂಗಳ ಎಂಬ ನಾಡಿಗಳಲ್ಲಿ ನಿಂತು ಸುಷುಮ್ನೆಯ ನಾಳದಲ್ಲಿ ಪ್ರವೇಶಿಸ ತೊಡಗಿದಾಗ, ಮೂಲಾಧಾರದಲ್ಲಿ ಸುಷುಮ್ನೆಯ ರಂಧ್ರವನ್ನು ತನ್ನ ಹೆಡೆಯಿಂದ ಮುಚ್ಚಿ ಮಲಗಿರುವ ಸೃಷ್ಟಿಶಕ್ತಿಯಾದ ಕುಂಡಲಿನೀ ಶಕ್ತಿ ನಿದ್ದೆಯಿಂದ ಎಚ್ಚರಹೊಂದಬೇಕಾಗುತ್ತದೆ. ಎಲ್ಲಿಯವರೆಗೆ ಸುಷುಮ್ನೆಯ ರಂಧ್ರ ಮುಚ್ಚಿರುವುದೋ ಅಲ್ಲಿಯವರೆಗೆ ಜೀವನು ಲೌಕಿಕ ವ್ಯವಹಾರದಲ್ಲಿ ಮಗ್ನನಾಗಿ ಉಚ್ಛ್ವಾಸ ನಿಶ್ವಾಸಗಳೆಂಬ ಉಸಿರುಗರಗಸದಲ್ಲಿ ದೇಹವನ್ನು ಆಯುಸ್ಸನ್ನೂ ಕೊಯ್ಯುತ್ತ, ಆತ್ಮಸ್ವರೂಪವನ್ನೂ ಪರವಸ್ತುವನ್ನೂ ಕಾಣದೆ, ಕಷ್ಟಸಂಕಟದಲ್ಲಿ ಸಿಕ್ಕಿ ಒದ್ದಾಡುತ್ತ, ಕಡೆಗೆ ಯಾವುದೋ ಒಂದು ದಿನ ಈ ದೇಹವನ್ನು ಬಿಟ್ಟು, ಕರ್ಮೋಪಭೋಗಕ್ಕಾಗಿ ಮತ್ತೆ ಬೇರೊಂದು ದೇಹವನ್ನು ಆಶ್ರಯಿಸಿ, ಪುನಃ ಎಂದಿನಂತೆ ಸಂಸಾರ ಚಕ್ರದಲ್ಲಿ ಸುತ್ತುವನು. ಸುಷುಮ್ನೆಯ ರಂಧ್ರದ ಬಾಯಿ ತೆರೆದು ಸೃಷ್ಟಿ ಯಾವಾಗ ನಿವೃತ್ತಿ ಮಾರ್ಗವನ್ನು ಹಿಡಿಯುವುದೋ ಆಗ ತತ್ತ್ವಗಳು ನಿವೃತ್ತಿ ಕ್ರಮದಲ್ಲಿ ಒಂದರಲ್ಲೊಂದು ಅಡಗುತ್ತವೆ, ಶಿವತತ್ತ್ವವೊಂದೇ ನಿಲ್ಲುತ್ತದೆ.

---

೨೯೭. ವ. ಶಾ. ಸಾ. ಭಾಗ ೧. (ಉ.) ಪುಟ ೧೧೬.

೨೯೮. ವ. ಶಾ. ಸಾ. ಭಾಗ ೧. (ಉ.) ಪುಟ ೧೧೯. (ಪಾಠ ಕೊನೆಯಲ್ಲಿ ಸ್ವಲ್ಪ ವ್ಯತ್ಯಾಸವಿದೆ; ಪುಟ ೧೧೭ ಸಹ ನೋಡಿ)

ಪ್ರಾಣಲಿಂಗ ಭಾವಲಿಂಗಗಳ ಜ್ಞಾನ ಅಂತರಂಗದಲ್ಲಿ ಆಗಬೇಕು. ಬಾಹ್ಯ ಪೂಜೋಪಚಾರಗಳು ಫಲಕಾರಿಯಲ್ಲ. ಒಳಗಿನ ದಿವ್ಯ ಶ್ರೀಮೂರ್ತಿಗೆ ಆಗುವ ಪೂಜೆಯ ರೀತಿಯೇ ಬೇರೆ. ಇಷ್ಟಲಿಂಗದಿಂದ ಪ್ರಾಣಲಿಂಗದ ಅರಿವನ್ನುಂಟುಮಾಡಿಕೊಳ್ಳದೆ ಕೇವಲ ಬಾಹ್ಯ ಕರ್ಮಗಳಲ್ಲಿಯೇ ಮಗ್ನರಾಗಿ ಒದ್ದಾಡುವ ಜನ,

೨೯೯. "ಅಗ್ಗವಣಿ ಪತ್ರೆ ಪುಷ್ಪ ಧೂಪ ದೀಪ ನಿವಾಳಿಯಲ್ಲಿ ಪೂಜಿಸಿ ಪೂಜಿಸಿ ಬಳಲುತ್ತಿದ್ದಾರೆ. ಏನೆಂದರಿಯರು, ಎಂತೆಂದರಿಯರು. ಜನ ಮರುಳೋ ಜಾತ್ರೆ ಮರುಳೋ ಎಂಬಂತೆ ಎಲ್ಲರೂ ಪೂಜಿಸಿ, ಏನನೂ ಕಾಣದೆ ಲಯಕ್ಕೊಳಗಾಗಿ ಹೋದರು ಗುಹೇಶ್ವರಾ"

ಪ್ರಾಣಲಿಂಗಜ್ಞಾನಿಗೆ ಈ ಬಾಹ್ಯೋಪಕರಣಗಳಾವುವೂ ಬೇಕಾಗಿಲ್ಲ.

(೧೪೬.) "ಪ್ರಾಣಲಿಂಗಕ್ಕೆ ಕಾಯವೇ ಸೆಜ್ಜೆ. ಆಕಾಶ ಗಂಗೆಯಲ್ಲಿ ಮಜ್ಜನ, ಹೂವಿಲ್ಲದ ಪರಿಮಳದ ಪೂಜೆ. ಹೃದಯ ಕಮಲದಲ್ಲಿ 'ಶಿವಶಿವ' ಎಂಬ ಶಬ್ದ, ಇದು ಅದ್ವೈತ ಕಾಣಾ ಗುಹೇಶ್ವರಾ"

೩೦೦. "ಹೊರಗನೇ ಕೊಯ್ದು ಹೊರಗನೇ ಪೂಜಿಸಿಡಡೆ ಪರಿಣಾಮವಿಲ್ಲ ಪ್ರಯೋಜನವಿಲ್ಲ. ಸುಖ ದೊರೆಕೊಳ್ಳದು ನೋಡಾ. ಅದೆಂತೆಂದಡೆ ಸರ್ವಜೀವಂಗಳಲ್ಲಿ ಹಿಂಸೆಯ ಮಾಡದಿಪ್ಪುದೇ ಪ್ರಥಮ ಪುಷ್ಪ. ಸರ್ವೇಂದ್ರಿಯಂಗಳಂ ನಿಗ್ರಹಿಸಿ ಕೊಂಡಿರಬಲ್ಲಡೆ ದ್ವಿತೀಯ ಪುಷ್ಪ. ಸರ್ವಾಹಂಕಾರವರತು ಶಾಂತನಾಗಿರಬಲ್ಲಡೆ ತೃತೀಯ ಪುಷ್ಪ. ಸರ್ವವ್ಯಾಪಾರವಳಿದು ನಿರ್ವ್ಯಾಪಾರಿಯಾಗಿರಬಲ್ಲಡೆ ಚತುಃ ಪುಷ್ಪ. ದುರ್ಭಾವ ಪ್ರಕೃತಿಯಳಿದು ಸದ್ಭಾವ ಎಡೆಗೊಂಡಿರಬಲ್ಲಡೆ ಪಂಚಮ ಪುಷ್ಪ. ಉಂಡು ಉಪವಾಸಿ ಬಳಸಿ ಬ್ರಹ್ಮಚಾರಿಯಾಗಿರಬಲ್ಲಡೆ ಷಷ್ಠಮ ಪುಷ್ಪ. ಅನೃತವ ಮರೆದು ಸತ್ಯವ ನುಡಿಯ ಬಲ್ಲಡೆ ಸಪ್ತಮ ಪುಷ್ಪ. ಸಕಲ ಪ್ರಪಂಚ ವಳಿದು ಶಿವಜ್ಞಾನ ಸಂಪನ್ನನಾಗಿರಬಲ್ಲಡೆ ಅಷ್ಟಮ ಪುಷ್ಪ. ಇಂತೀ ಅಷ್ಟದಳ ಕಮಲದಲ್ಲಿ ಸಹಸ್ರಪೂಜೆಯ ಮಾಡಬಲ್ಲ ಶರಣರು ನಿಮ್ಮ ಪ್ರತಿಬಿಂಬದಂ ತಿಪ್ಪರು ಕಾಣಾ ಕೂಡಲ ಚೆನ್ನಸಂಗಮದೇವಾ"

ಹೀಗೆ ಸುಗುಣಗಳನ್ನು ಬಲಿಸಿ ದುರ್ಗುಣಗಳನ್ನು ಅತಿಗಳೆದು "ಪ್ರಾಣದ ಪೂರ್ವಾಶ್ರಯವನಳಿದು ಲಿಂಗದ ನೆನಹು ಸಂಬಂಧಿಸಿ ಲಿಂಗವೇ ಪ್ರಾಣವಾಗಿ ಪ್ರಾಣವೇ ಲಿಂಗವಾಗಿ" ಪ್ರಾಣಲಿಂಗಿ ಪರಿಣಮಿಸುವನು.

---

೨೯೯. ಪ್ರ. ದೇ. ವ. ಪುಟ ೭೩. ೩೦೦. ವ. ಶಾ. ಸಾ. ಭಾಗ ೧. (ಉ.) ಪುಟ ೧೧೯.

ಇದು ಅನುಭವಸಾಧ್ಯವಾದುದರಿಂದ ಈ ಸ್ಥಲದಲ್ಲಿ 'ಅನುಭವಭಕ್ತಿ' ಯೆಂದೂ, ದುರ್ಭಾವ ಪ್ರಕೃತಿಯಳಿದು ಪ್ರಶಾಂತವಾದ ಮನಸ್ಸು ದೊರೆತಿರುವುದರಿಂದ, 'ಸುಮನೋಹಸ್ತ'ವೆಂದೂ ಹೇಳಲಾಗಿದೆ. ಇವುಗಳ ಮೂಲಕ ಆದಿಶಕ್ತಿಯುತವಾದ ಜಂಗಮಲಿಂಗದೊಡನಾಟದಲ್ಲಿ ಬೆಳೆಯುತ್ತ, ಲಿಂಗವನ್ನು ಕ್ಷಣಕಾಲವೂ ಬಿಟ್ಟಿರಲು ಮನಸ್ಸಿಲ್ಲದೆ ಬಹಿರ್ಮುಖನಾದಾಗ ಲಿಂಗವಿಕಳಾವಸ್ಥೆಯಲ್ಲಿ ವಿರಹವನ್ನನುಭವಿಸುತ್ತ ಪ್ರಿಯತಮನನ್ನಗಲಿದ ಪತಿವ್ರತೆಯಂತೆ ಹಂಬಲಿಸುತ್ತ ಲಿಂಗವಾರ್ತೆಯನ್ನು ಕೇಳಿದರೆ ಅಂತರ್ಮುಖಿಯಾಗುತ್ತ, ಹೀಗೆ ಎರಡೂ ಲೋಕಗಳುಳ್ಳವನಾಗಿ, ಅವಿರಳ ಜ್ಞಾನಿಯಾಗಿ, ಅತಿಮರುಳಂತೆ, ಮೂರ್ಛಾವಸ್ಥೆಯಲ್ಲಿದ್ದಂತೆ 'ಲಿಂಗಬಾಹ್ಯ ಪರಂ ನಾಸ್ತಿ' ಎಂಬ ಭಾವವುಳ್ಳವನಾಗುತ್ತಾನೆ. ಇದೇ ಶರಣಸ್ಥಲ.

## (v) ಶರಣಸ್ಥಲ

ಶರಣನು ಜ್ಞಾನಿ, ನಿತ್ಯಾನಿತ್ಯಗಳನ್ನು ತಿಳಿದವನು, ದೇಹ ಸಂಸಾರಾದಿ ಮೋಹಗಳನ್ನು ಬಿಟ್ಟವನು. ಲಿಂಗದ ಕಳೆಯರಿತು ಲಿಂಗದ ಗುಣಗಳುಳ್ಳವನಾಗಿ ಬಾಹ್ಯಾಭ್ಯಂತರಗಳಲ್ಲಿ ಲಿಂಗದ ನೆನಹಿನಿಂದ ವ್ಯವಹರಿಸತಕ್ಕವನು. ಅಂತರ್ಮುಖಿಯಾದಾಗ ಕಾರಣತನುವಿನ ಭಾವಲಿಂಗದ ಸಂಬಂಧ. ಬಹಿರ್ಮುಖನಾದಾಗ ಸ್ಥೂಲ ಸೂಕ್ಷ್ಮತನುಗಳ ವ್ಯವಹಾರವುಳ್ಳವನಾದರೂ ತನು ಮನಗಳ ಗುಣಗಳಿಂದ ಬಾಧಿತನಲ್ಲ.

೩೦೧. "ಲಿಂಗವೇ ಪತಿಯಾಗಿ ಅನ್ಯವನರಿಯದೆ, ಪಂಚೇಂದ್ರಿಯ ವಿರಹಿತನಾಗಿ, ತೆರಹಿಲ್ಲದ ಅರುಹು ತಾನಾಗಿ, ನೆರೆ ಅರುಹಿನೊಳು ನಿಬ್ಬೆರಗಾಗಿ, ಹೃದಯಕಮಲ ಮಧ್ಯದಲ್ಲಿ ಪರಮೇಶ್ವರನೊಳಗಣ ಪರಮಸ್ನೇಹವೆರಸಿ ಅಗಲದಿಪ್ಪುದೀಗ ಶರಣಸ್ಥಲವೆಂದೆಂಬೆನಯ್ಯ ಮಹಾಲಿಂಗ ಗುರು ಶಿವ ಸಿದ್ಧೇಶ್ವರ ಪ್ರಭುವೇ"

೩೦೨. "ನೆಲ ನೀರು ಕಿಚ್ಚು ಗಾಳಿ ಬಯಲು ಕೂಡಿ ಅದೇ ಪಿಂಡ ತಾನೆಂಬ ಮಿಥ್ಯಾ ಚರ್ಮದೇಹಿಗಳನೇನೆಂಬೆನಯ್ಯ? ನೆಲನಲ್ಲದ, ನೀರಲ್ಲದ, ಕಿಚ್ಚಲ್ಲದ, ಗಾಳಿಯಲ್ಲದ, ಬಯಲಲ್ಲದ, ಪ್ರಕೃತಿಯಲ್ಲದ ಪುರುಷನಲ್ಲದ ಮೇಲಣ ಶುದ್ಧ ಸ್ವಯವೇ ತಾನೆಂದು ತಿಳಿದಾತನಲ್ಲದೆ ಶರಣನಲ್ಲ ಕಾಣಾ ಮಹಾಲಿಂಗ ಗುರು ಶಿವ ಸಿದ್ಧೇಶ್ವರ ಪ್ರಭುವೇ"

---

೩೦೧–೨. ವ. ಶಾ. ಸಾ. ಭಾಗ ೧. (ಉ.) ಪುಟಗಳು ೧೬೦, ೧೫೫.

ಮೇಲಿನ ವಚನಗಳಲ್ಲಿ ಶರಣನ ಮತ್ತು ಶರಣಸ್ಥಲದ ಲಕ್ಷಣಗಳನ್ನು ತಿಳಿಸಿದೆ. ಪಂಚಭೂತಾತ್ಮಕವಾದ ದೇಹ ತಾನಲ್ಲ, ಅಂತಃಕರಣ ಚತುಷ್ಟಯ ತಾನಲ್ಲ, ಪ್ರಕೃತಿ ಪುರುಷ ತಾನಲ್ಲ. ಅಂಗತತ್ತ್ವಗಳಾದ ಇಪ್ಪತ್ತೈದು ಅಶುದ್ಧ ತತ್ತ್ವಗಳನ್ನು ಮೀರಿ, ವ್ಯವಹರಿಸುತ್ತಿರುವವನು ಶರಣನು. ಸ್ವಸ್ವರೂಪಜ್ಞಾನ ಪಡೆದವನಾದ್ದರಿಂದ ಶರಣನಿಗೆ

೩೦೩. "ಇಹಲೋಕ ಪರಲೋಕ ತಾನಿದ್ದಲ್ಲಿ, ಗಗನ ಮೇರು ಮಂದರ ತಾನಿದ್ದಲ್ಲಿ, ಸಕಲಭುವನ ತಾನಿದ್ದಲ್ಲಿ, ಸತ್ಯನಿತ್ಯ ನಿರಂಜನ ಶಿವತತ್ತ್ವ ತಾನಿದ್ದಲ್ಲಿ, ಉತ್ತರೋತ್ತರ ಛತ್ರವಳಯ ತಾನಿದ್ದಲ್ಲಿ, ಚಂದ್ರ ಸೂರ್ಯ ತಾರಾಮಂಡಲ ತಾನಿದ್ದಲ್ಲಿ, ಅಂತರ ಮಹದಂತರ ತಾನಿದ್ದಲ್ಲಿ, ಸ್ವತಂತ್ರ ಗುಹೇಶ್ವರಲಿಂಗ ತಾನಿದ್ದಲ್ಲಿ."

೩೦೪. "ಮಠವೇಕೋ ಪರ್ವತವೇಕೋ ಜನವೇಕೋ ನಿರ್ಜನವೇಕೋ ಚಿತ್ತ ಸಮಾಧಾನವುಳ್ಳ ಶರಣಂಗೆ? ಮತ್ತೆ ಹೊರಗಣ ಚಿಂತೆ, ಧ್ಯಾನ, ಮೌನ ಜಪ ತಪ ಏಕೊ ತನ್ನ ತಾನರಿದ ಶರಣಂಗೆ ಗುಹೇಶ್ವರಾ"

೩೦೫. ಅಂತರಂಗದ ಅರಿವು, ಬಹಿರಂಗದ ಕ್ರಿಯೆ, ಈ ಉಭಯ ಸಂಪುಟ ಒಂದಾದ ಶರಣಂಗೆ ಹಿಂಗಿತ್ತು ತನುಸೂತಕ, ಹಿಂಗಿತ್ತು ಮನಸೂತಕ. ಕೂಡಲ ಚೆನ್ನ ಸಂಗಯ್ಯನಲ್ಲಿ ಸಂಗವಾದದ್ದು ಸರ್ವೇಂದ್ರಿಯ"

ಹೀಗೆ ಹೇಳಿದರೂ ಶರಣನಿಗೆ ಕ್ರಿಯೆ ಉಂಟು. ಈ ಕ್ರಿಯೆ ವೀರವ್ರತಾಚಾರಿಯಾದ ಮಾಹೇಶ್ವರನ ಕ್ರಿಯೆಯಂತಲ್ಲ. ಕ್ರಿಯೆ ಲಿಂಗದ ಕ್ರಿಯೆ, ಮನ ಲಿಂಗದ ಮನ, ಭಾವ ಲಿಂಗದ ಭಾವ. ಮಾಯೆಯ ಉಪಾಧಿಯಿಂದ ಆದ ದೇಹ, ದೇಹವ್ಯಾಪಾರ, ಇವುಗಳನ್ನು ಮೀರಿ ಭಗವಂತನ ಪ್ರೇಮದಲ್ಲಿ ಮುಳುಗಿ ಆನಂದ ಪರವಶನಾಗಿರತಕ್ಕವನು ಶರಣ; ಕಾರ್ಮಿಕಮಲ ಮಾಯಾಮಲಗಳಿಂದ ಮುಕ್ತನಾಗಿ ಆಣವಮಲವನ್ನು ನೀಗಿಕೊಳ್ಳುವ ಸ್ಥಿತಿಯಲ್ಲಿರತಕ್ಕವನು ಶರಣ.

ಹೀಗೆ ಲಿಂಗದ ಗುಣಗಳನ್ನು ಪಡೆದು ಶಿವರೂಪಿಯಾಗಿ, ಶಿವರೂಪಿಯೆಂಬ ಅರಿವು ಭಿನ್ನವಾಗಿರುವವರೆಗೂ ಶರಣನೆಂದು ವ್ಯವಹರಿಸುತ್ತ,

೩೦೩. ಪ್ರ. ದೇ. ವ. ಪುಟ ೧೭೪. ೩೦೪. ವ. ಶಾ. ಸಾ. ಭಾಗ ೧.(ಉ.) ಪುಟ ೨೧೯.
೩೦೫. ವ. ಶಾ. ಸಾ. ಭಾಗ ೧. (ಉ.) ಪುಟ ೧೯೫.

೩೦೬. "ಕುಲವಳಿದು, ಛಲವಳಿದು, ಮತ್ಸರವಳಿದು, ಮದವಳಿದು, ಆತ್ಮಕ್ಕೆ ಜೀವವಳಿದು, ಸರ್ವಾಹಂಕಾರವಳಿದು, ನಿಜವುಳಿದು, ಲಿಂಗ ಜಂಗಮವೆಂಬ ಶಬ್ದವಿಡಿದು ಸಾಧ್ಯವಾಯಿತ್ತು ನೋಡಾ. ತಾನಳಿದು ತಾನುಳಿದು, ಸಹಜ ನಿಜಪದವಿಯಲ್ಲಿ ಕೂಡಲ ಚೆನ್ನ ಸಂಗನಲ್ಲಿ ತಾನು ತಾನಾದಾ"

೩೦೭. ನಚ್ಚು ಬಿಚ್ಚದೆ, ಮನ ಅಚ್ಚೊತ್ತಿದಂತಿದ್ದಿತ್ತು. ಲಿಂಗವೆನ್ನದು, ಜಂಗಮವೆನ್ನದು ಅದು ತಾನಾಗಿ, ತಾನೇ ಭರಿತನು ಕೂಡಲ ಚೆನ್ನ ಸಂಗಮ ದೇವಾ"

ಅಂಗ ಲಿಂಗ ಎಂಬ ಭೇದಭಾವವರಿಯದೆ, ಅಂಗ ಲಿಂಗದಲ್ಲಿ ಸೇರಿ ಅರಿವ ಮನ ಎಂಬುದಿಲ್ಲದೆ ಮನವೇ ಲಿಂಗವಾಗಿ, ಭಿನ್ನವಿಲ್ಲದ ಶರಣ ಲಿಂಗವಾಗಿ ಪರಿಣಮಿಸುವನು.

೩೦೮. "ನೆನೆ ನೆನೆ ಎಂಬಡೆ ಏನ ನೆನೆವೆನಯ್ಯ? ಎನ್ನ ಕಾಯವೇ ಕೈಲಾಸವಾಯಿತ್ತು, ಮನವೇ ಲಿಂಗವಾಯಿತ್ತು, ತನುವೇ ಸೆಜ್ಜೆಯಾಯಿತ್ತು. ನೆನೆವಡೆ ದೇವನುಂಟೆ? ನೋಡುವಡೆ ಭಕ್ತನುಂಟೆ? ಗುಹೇಶ್ವರ ಲಿಂಗ ಲೀಯವಾಯಿತ್ತು."

೩೦೯. "ಆನು ನೀನು ಎಂಬುದು ತಾನು ಇಲ್ಲ, ತಾನರಿದ ಬಳಿಕ ಏನೂ ಇಲ್ಲ. ಇಲ್ಲದ ಇಲ್ಲವೆ ಎಲ್ಲಿಂದ ಬರ್ಪುದೋ? ಅನುವನರಿತು, ತನುವ ಮರೆದು ಭಾವರಹಿತ ಗುಹೇಶ್ವರಾ"

೩೧೦. "ಅಂಗ ಲಿಂಗದಲ್ಲಿ ತರಹರವಾಗಿ, ಮನ ಜ್ಞಾನದಲ್ಲಿ ತರಪರವಾಗಿ, ಭಾವ ನಿರ್ಭಾವದಲ್ಲಿ ತರಹರವಾಗಿ, ಸಮತೆ ಶಾಂತಿಯಲ್ಲಿ ತರಹರವಾಗಿ, ಇರಬಲ್ಲಾತನೇ ಅಚ್ಚ ಶರಣ ಗುಹೇಶ್ವರಾ"

೩೧೧. "ಶಿವ ಶಕ್ತಿ ಸಂಪುಟವೆಂಬುದೆಂತು ಹೇಳಿರಣ್ಣಾ. ಶಿವನೇ ಚೈತನ್ಯಾತ್ಮಕನು ಶಕ್ತಿಯೇ ಚಿತ್ತು. ಇಂತೀ ಚೈತನ್ಯಾತ್ಮಕನೇ ಚಿತ್‌ಸ್ವರೂಪೆಂದು ಅರಿಯಬಲ್ಲಡೆ ಆತನೇ ಶರಣ ಗುಹೇಶ್ವರಾ"

ಇಂಥ ಶರಣನಿರವು ಶಿವಶಕ್ತಿಸಂಪುಟದಂತೆ. ಶಿವಶಕ್ತಿಯರಿಗೆ ಹೇಗೆ ಅವಿನಾಭಾವವೋ ಹಾಗೆ ಪ್ರಕೃತಿ ಪುರುಷಾದಿಗಳನ್ನು ಮೀರಿದ ಶರಣ ಮತ್ತು ಲಿಂಗ ಇವರಿಗೆ ಅವಿನಾಭಾವವಿರುತ್ತದೆ. ಶಕ್ತಿಯೇ ಶಿವ, ಶಿವನೇ ಶಕ್ತಿ ಹೇಗೋ ಹಾಗೆ ಶರಣನೇ ಲಿಂಗ, ಲಿಂಗವೇ ಶರಣ.

---

೩೦೬—೭. ವ. ಶಾ. ಸಾ. ಭಾಗ ೧. (ಉ.) ಪುಟ ೨೧೯, ೧೬೩.

೩೦೮—೧೧. ಪ್ರ. ದೇ. ವ. ಪುಟಗಳು ೧೫೪, ೨೫೭, ೨೪೧.

## (vi) ಐಕ್ಯಸ್ಥಲ

ಮೇಲಿನ ಸ್ಥಿತಿಯಲ್ಲಿ ಪೂಜೆಮಾಡುವವರಾರು? ಪೂಜೆಗೊಳ್ಳುವವರಾರು? ಜ್ಞಾತೃ, ಜ್ಞಾನ, ಜ್ಞೇಯಗಳೆಲ್ಲಿಯವು? ಇದೇ ಐಕ್ಯಸ್ಥಲ.

೩೧೨. "ಘೃತ ಘೃತವ ಬೆರಸಿದಂತೆ, ಕ್ಷೀರ ಕ್ಷೀರವ ಬೆರಸಿದಂತೆ, ತೈಲ ತೈಲವ ಬೆರಸಿದಂತೆ, ನೀರು ನೀರ ಬೆರಸಿದಂತೆ, ಜ್ಯೋತಿ ಜ್ಯೋತಿಯ ಬೆರಸಿದಂತೆ, ಬಯಲು ಬಯಲ ಬೆರಸಿದಂತೆ, ಪ್ರಾಣ ಪ್ರಾಣ ಸಂಯೋಗವಾದ ಲಿಂಗಸಮರಸವನೇನೆಂಬೆನಯ್ಯ ಮಹಾಲಿಂಗ ಗುರು ಶಿವ ಸಿದ್ಧೇಶ್ವರ ಪ್ರಭುವೇ"

ಒಂದೇ ವಸ್ತು ಎರಡಾಗಿತ್ತು; ಪುನಃ ಅಂತರಂಗದಲ್ಲಿ ಕೂಡಿ ಒಂದಾಯಿತು. ಇದು ಸಂಪೂರ್ಣ ಸಾಮರಸ್ಯದ ಐಕ್ಯ.

(೨೪೬) ಲಿಂಗವೆನ್ನೆ ಲಿಂಗೈಕ್ಯವೆನ್ನೆ, ಸಂಗವೆನ್ನೆ ನಿಸ್ಸಂಗವೆನ್ನೆ, ಆಯಿತ್ತೆನ್ನೆ ಆಗದೆಂದೆನ್ನೆ, ನೀನೆನ್ನೆ ನಾನೆನ್ನೆ. ಚೆನ್ನಮಲ್ಲಿಕಾರ್ಜುನ ಲಿಂಗದಲ್ಲಿ ಘನ ಲಿಂಗೈಕ್ಯವಾದ ಬಳಿಕ ಮತ್ತೇನೂ ಎನಲೊಲ್ಲದೆ ಇದ್ದೆನು."

೩೧೩. "ತನು ಬಯಲು ನಿರವಯದೊಳಡಗಿತ್ತು. ಮನ ಬಯಲು ನಿರವಯದೊಳಡಗಿತ್ತು. ಭಾವ ಬಯಲು ನಿರವಯದೊಳಡಗಿತ್ತು, ಬಯಲು ಬಯಲು ಬೆರಸಿ ಬಯಲೇ ಆಯಿತ್ತು. ಕೂಡಲ ಚೆನ್ನಸಂಗಯ್ಯನೆಂಬ ನುಡಿಯಡಗಿತ್ತು"

ಈ ನಿಜೈಕ್ಯ ಸ್ಥಿತಿಯಲ್ಲಿದ್ದು ಕಳೇಬರವನ್ನು ಈ ಜನ್ಮದಲ್ಲಿಯೇ ಬಿಟ್ಟುಬಿಡಬಹುದು; ಅಥವಾ ದೇಹೋಪಾಧಿ ಇರುವವರೆಗೂ ಆಗಾಗ ಬಹಿರ್ಮುಖನಾಗುತ್ತ ಜೀವನ್ಮುಕ್ತನಾಗಿ ಚರಿಸುತ್ತಿರಬಹುದು.

೩೧೪. ಕ್ಷುತ್, ಪಿಪಾಸೆ, ಶೋಕ, ಮೋಹ, ಮದ, ಮತ್ಸರವೆಂಬ ಷಡ್ವರ್ಗಂಗಳು ಇಲ್ಲದೆ ಇರುತಿಪ್ಪನು. ನಾಹಂ ಕೋಹಂ ಸೋಹಂ ಎಂಬ ಭಾವ ವಿರಹಿತನಾಗಿಪ್ಪನು. ಅಷ್ಟವಿಧಾರ್ಚನೆ ಷೋಡಶೋಪಚಾರ ರಹಿತನಾಗಿರ್ಪನು. ಕರ್ಪುರ ಅಗ್ನಿ ಸಂಯೋಗವಾಗಿ, ಕರ್ಪುರದ ಗುಣವಳಿದು ಅಗ್ನಿಯಾದಂತೆ ಲಿಂಗವ ನೆನೆನೆನೆದು ಲಿಂಗವೇ ತಾನಾಗಿಪ್ಪುದೀಗ ನಿಜೈಕ್ಯಸ್ಥಲವೆಂದೆಂಬೆನಯ್ಯ ಮಹಾ ಲಿಂಗ ಗುರು ಶಿವ ಸಿದ್ಧೇಶ್ವರ ಪ್ರಭುವೇ"

---

೩೧೨. ವ. ಶಾ. ಸಾ. ಭಾಗ ೧. (ಉ.) ಪುಟ ೨೫೧.

೩೧೩. ವ. ಶಾ. ಸಾ. ಭಾಗ ೧. (ಉ.) ಪುಟ ೨೭೯.

೩೧೪. ವ. ಶಾ. ಸಾ. ಭಾಗ ೧. (ಉ.) ಪುಟ ೧೫೧.

ಈತನೇ * ಗುರು, ಸತ್ಯವನ್ನು ತಿಳಿದವನಾದ್ದರಿಂದ ಸತ್ಯಮಾರ್ಗವನ್ನು ತೋರಿಸಬಲ್ಲವನು. ಲಿಂಗವೇ ತಾನಾಗಿ ಗುರುರೂಪದಲ್ಲಿರುವವನು.

ಈಗ ವಿವರಿಸಿದ ಷಟ್ಸ್ಥಲದ ಸಾಧನೆ ಸುಲಭವೇನೂ ಅಲ್ಲ.

(೧೩೪.) "ಬಟ್ಟ ಬಯಲೆಲ್ಲ ಗಟ್ಟಿಗೊಂಡಡೆ ಸ್ವರ್ಗ ಮರ್ತ್ಯ ಪಾತಾಳಕ್ಕೆ ತಾವಿನ್ನೆಲ್ಲಿಯದೋ? ಮೇಘದ ಜಲವೆಲ್ಲ ನಿರ್ಮಳ ಮುತ್ತಾದರೆ, ಸಪ್ತಸಾಗರಕೆ ಉದಕ ವಿನ್ನೆಲ್ಲಿಯದೋ? ಕಷ್ಟಜೀವಿ ಮಾನವರೆಲ್ಲ ನೆಟ್ಟನೇ ಶಿವಜ್ಞಾನಿಗಳಾದರೆ ಭವದ ಬೆಳೆ ಇನ್ನೆಲ್ಲಿಯದೋ? ಇದು ಕಾರಣ ಕೂಡಲ ಚೆನ್ನಸಂಗಯ್ಯನಲ್ಲಿ ಲಕ್ಷಕ್ಕೊಬ್ಬ ಭಕ್ತ, ಕೋಟಿಗೊಬ್ಬ ಶರಣ"

ಎಂಬ ಚೆನ್ನಬಸವಣ್ಣನ ಮಾತು ಅಕ್ಷರಶಃ ಸತ್ಯವಾದುದು. ಹಿಡಿದ ಸ್ಥಲದಲ್ಲಿಯೇ ಷಟ್ಸ್ಥಲಗಳೆಲ್ಲವನ್ನೂ ಸಾಧಿಸಬಹುದೆಂಬ ಅಭಿಪ್ರಾಯವೂ ವಚನಕಾರರಲ್ಲಿ ಇದೆ.

ಈ ಷಟ್ಸ್ಥಲದ ಒಂದೊಂದು ಮೆಟ್ಟಲಿನಲ್ಲಿಯೂ ಆರಾರು ಒಳಪಂಗಡಗಳನ್ನು ಮನಸ್ಸಿನ ಹದವರಿತು ಮಾಡಬಹುದಾಗಿದೆ. ಭಕ್ತಸ್ಥಲದಲ್ಲಿಯೇ ಭಕ್ತನ ಭಕ್ತ, ಭಕ್ತನ ಮಹೇಶ, ಭಕ್ತನ ಪ್ರಸಾದಿ, ಭಕ್ತನ ಪ್ರಾಣಲಿಂಗಿ, ಭಕ್ತನ ಶರಣ, ಭಕ್ತನ ಐಕ್ಯ, ಎಂದು ಆರು ಒಳಸ್ಥಲಗಳಾಗುತ್ತವೆ. ಉಳಿದವುಗಳಲ್ಲಿಯೂ ಹೀಗೆಯೇ ಮಾಡಿ ಮುವ್ವತ್ತಾರು ಅವಾಂತರ ಸ್ಥಲಗಳನ್ನು ಏರ್ಪಡಿಸಿದ್ದಾರೆ. ಇಷ್ಟೇ ಅಲ್ಲದೆ ಈ ಮುವ್ವತ್ತಾರು ಒಳಸ್ಥಲಗಳಲ್ಲಿಯೂ ಪುನಃ ಒಳಭೇದಗಳನ್ನು ಬಹಳ ಸೂಕ್ಷ್ಮರೀತಿಯಲ್ಲಿ ಮಾಡಿರುತ್ತಾರೆ. ಭಕ್ತನ ಭಕ್ತನ ಭಕ್ತ, ಭಕ್ತನ ಭಕ್ತನ ಮಹೇಶ, ಭಕ್ತನ ಭಕ್ತನ ಪ್ರಸಾದಿ, ಭಕ್ತನ ಭಕ್ತನ ಪ್ರಾಣಲಿಂಗಿ, ಭಕ್ತನ ಭಕ್ತನ ಶರಣ, ಭಕ್ತನ ಭಕ್ತನ ಐಕ್ಯ ಹೀಗೆ ಮಾಡುವುದರಿಂದ ೨೧೬ ಸ್ಥಲಗಳಾಗುತ್ತವೆ. ಹೀಗೆ ವಿಂಗಡಿಸುವುದಲ್ಲದೆ ೧೦೧ ಸ್ಥಲಗಳೆಂದು ಇನ್ನೊಂದು ಬಗೆಯಲ್ಲೂ ಅಂಗಸ್ಥಲ ಲಿಂಗಸ್ಥಲಗಳನ್ನು ವಿಂಗಡಿಸುತ್ತಾರೆ.

---

* ಶರಣಸ್ಥಲದಲ್ಲಿರುವಾಗಲೆ ಗುರು ಆಗಬಹುದು ಎಂದು ಕೆಲವರ ಅಭಿಪ್ರಾಯ.

## ೧೧ನೆಯ ಪ್ರಕರಣ

# ಸಮನ್ವಯ ದೃಷ್ಟಿ

ಷಟ್ಸ್ಥಲಸಿದ್ಧಾಂತ ಕರ್ಮ ಭಕ್ತಿ ಜ್ಞಾನಗಳನ್ನು ಸಮನ್ವಯಗೊಳಿಸಿ ಕೊಂಡಿರುವ ಸಿದ್ಧಾಂತವೆಂದು ಹೇಳಬಹುದಾಗಿದೆ. ದೇಹರಚನೆಯಲ್ಲಿಯೂ ಮನಸ್ಸಿನ ವ್ಯಾಪಾರದಲ್ಲಿಯೂ ಯಾವ ಯಾವ ಮೆಟ್ಟಲುಗಳಿರುವವೋ ಅವುಗಳನ್ನೇ ಅನುಸರಿಸಿ ಇದನ್ನು ಏರ್ಪಡಿಸಿದ್ದಾಗಿದೆ. ಪಂಚಸಾದಾಖ್ಯಗಳು, ಪಂಚಕಲೆಗಳು, ಮತ್ತು ಪಂಚಶಕ್ತಿಗಳು ಪ್ರಪಂಚ ವಿಕಾಸಹೊಂದುವು ದಕ್ಕೂ ಪುನಃ ಪ್ರಪಂಚ ಅಡಗುವುದಕ್ಕೂ ತಕ್ಕ ನೆಲೆಗಳಾಗಿವೆ. ನೀರೂಪ ವಾಗಿದ್ದುದು ಹೇಗೆ ಕ್ರಮಕ್ರಮವಾಗಿ ರೂಪವನ್ನು ಪಡೆದು ಪ್ರಪಂಚ ವೆನಿಸುವುದೋ, ಮತ್ತು ಲಯಹೊಂದುವಾಗ ಹೇಗೆ ರೂಪವುಳ್ಳದ್ದು ಕ್ರಮ ಕ್ರಮವಾಗಿ ನೀರೂಪವಾಗುವುದೋ ಹಾಗೆಯೇ ಈ ಪ್ರವೃತ್ತಿ ಮತ್ತು ನಿವೃತ್ತಿ ಮಾರ್ಗಗಳಾದರೂ ಇರುತ್ತವೆ. ಕಾರಣಶರೀರ, ಸೂಕ್ಷ್ಮ ಶರೀರ ಮತ್ತು ಸ್ಥೂಲಶರೀರಕ್ಕನುಗುಣವಾಗಿ ಒಂದೇ ಶಿವತತ್ತ್ವ ನಿಷ್ಕಲ, ಸಕಲ ನಿಷ್ಕಲ ಮತ್ತು ಸಕಲ ಎಂದಾಯಿತು: ಭಾವಲಿಂಗ, ಪ್ರಾಣಲಿಂಗ ಮತ್ತು ಇಷ್ಟಲಿಂಗಗಳಾಗಿ ಪರಿಣಾಮ ಹೊಂದಿತು.

ಸಾಧನೆಯ ಮೆಟ್ಟಲುಗಳು ಶಾಸ್ತ್ರಸಮ್ಮತವಾಗಿಯೂ ಅನುಭವಸಮ್ಮತ ವಾಗಿಯೂ ಇವೆ. ಆಯಾ ಸ್ಥಲ, ಭಕ್ತಿ ಮತ್ತು ಹಸ್ತಗಳನ್ನು ನೋಡಿದರೆ ಇದು ಗೊತ್ತಾಗುತ್ತದೆ.

| ಸ್ಥಲ | ಭಕ್ತಿ | ಹಸ್ತ |
|---|---|---|
| ಭಕ್ತಸ್ಥಲ | ಸದ್ಭಕ್ತಿ | ಸುಚಿತ್ತ |
| ಮಾಹೇಶ್ವರಸ್ಥಲ | ನೈಷ್ಠಿಕೀ ಭಕ್ತಿ | ಸುಬುದ್ಧಿ |
| ಪ್ರಸಾದಿಸ್ಥಲ | ಅವಧಾನಭಕ್ತಿ | ನಿರಹಂಕಾರ |
| ಪ್ರಾಣಲಿಂಗಿಸ್ಥಲ | ಅನುಭವಭಕ್ತಿ | ಸುಮನಸ್ಸು |
| ಶರಣಸ್ಥಲ | ಆನಂದಭಕ್ತಿ | ಸುಜ್ಞಾನ |
| ಐಕ್ಯಸ್ಥಲ | ಸಮರಸಭಕ್ತಿ | ಸದ್ಭಾವ |

ಚಿತ್ತ ಇಂದ್ರಿಯಾಧೀನವಾದರೆ ವಿಕಾರಗಳಿಂದ ತುಂಬಿ ಕುಚಿತ್ತವೆನಿಸುತ್ತದೆ. ಇದು 'ಪ್ರಪಂಚಿ' ಯ ಸ್ಥಿತಿ. ಸತ್ಕ್ರಿಯಾಚರಣೆಯಲ್ಲಿ ಚಿತ್ತ ಮಗ್ನವಾದರೆ ಸತ್ಕ್ರಿಯಾಚಾರವೇ ತಾನಾಗಿ ಚಿತ್ತ ಸುಚಿತ್ತವಾಗುತ್ತದೆ. ಮೊದಲಿನಲ್ಲಿ ಇದಾದರೆ ಸುಬುದ್ಧಿ ವಿಕಾಸಹೊಂದುತ್ತದೆ. ಇದು ವಿಕಾಸಹೊಂದಿದಷ್ಟೂ ನಿಷ್ಠೆ ಬೆಳೆಯುತ್ತದೆ. ನಿಷ್ಠೆ ಬೆಳೆದ ಹಾಗೆಲ್ಲ ಸುಬುದ್ಧಿಯೂ ಬಲಿಯುತ್ತದೆ. ನಿತ್ಯಾನಿತ್ಯಗಳನ್ನು ವಿಮರ್ಶಿಸುವ ಸುಬುದ್ಧಿ ಬಲಿತರೆ ಅಹಂಭಾವ ಹಿಂದೆ ಬಿದ್ದು ತನ್ನ ಕರ್ತೃತ್ವವಿಲ್ಲವೆಂದು ತಿಳಿಯುತ್ತದೆ. ಹೀಗೆ ನಿರಹಂಭಾವ ಬರದೆ ಶಾಂತಿ ನೆಲಸುವುದಿಲ್ಲ, ಜ್ಞಾನೋದಯವಾಗುವುದಿಲ್ಲ. 'ನಾ ಸತ್ತರೆ ಮೋಕ್ಷವಾಗಬಹುದು' ಎಂಬ ಕನಕದಾಸರ ಅಭಿಪ್ರಾಯ ಇಲ್ಲಿಯೂ ಅನ್ವಯಿಸುತ್ತದೆ. ಭಗವಂತನ ಕರ್ತೃತ್ವವನ್ನು ತಿಳಿದು, ಬಂದುದನ್ನು ಪ್ರಸಾದವಾಗಿ ಪಡೆಯುವಲ್ಲಿ, ಮನಃಪ್ರಸಾದವುಂಟಾಗಿ ಶಾಂತಿ ಬೆಳೆಯುತ್ತದೆ, ಮನಸ್ಸು ದೃಢಪಡುತ್ತದೆ. ಆದುದರಿಂದಲೆ ಅವಧಾನ ಭಕ್ತಿಯಿಂದ ನಿರಹಂಭಾವ ಬೆಳೆಯಬೇಕೆಂದು ಷಟ್ಸ್ಥಲ ಹೇಳುತ್ತದೆ. ಶಾಂತಿ ನೆಲಗೊಂಡಾಗ ಸುಮನಸ್ಸಿಗೆ ಅಂಕುರಾರ್ಪಣ. ಒಳಗಿನ ತಳಮಳ ನಿಂತು, ಹೊರಗೆ ಹರಿಯುವ ಮನಸ್ಸು ಒಳಮುಖವಾಗಲು ಚಿಜ್ಜ್ಯೋತಿ ಸ್ಪಷ್ಟವಾಗುತ್ತ ಹೋಗುತ್ತದೆ. ಆದರೆ ಇದನ್ನು ಸ್ವಂತ ಅನುಭವದಿಂದ ಕಾಣಬೇಕು, ಕಂಡು ಕೂಡಬೇಕು. ಸಕ್ಕರೆ ಸಿಹಿಯೆಂದು ಯಾರು ಹೇಳಿದರೇನಾಯಿತು? ತಾನು ಸವಿದು ನೋಡಬೇಕಷ್ಟೆ.

(೧೧೦) ನಿಮ್ಮಲ್ಲಿ ನೀವು ತಿಳಿದು ನೋಡಿರೇ, ಅನ್ಯವಿಲ್ಲ ಕಾಣಿರಣ್ಣಾ. ಅರಿವು ನಿಮ್ಮಲ್ಲಿಯೆ ತಪ್ಪತವಾಗಿದೆ. ಅನ್ಯಭಾವವ ನೆನೆಯದೆ, ತನ್ನೊಳಗೆ ತಾನೇ ಎಚ್ಚರವಿರಬಲ್ಲರೆ ತನ್ನಲ್ಲಿಯೆ ತನ್ಮಯ ಗುಹೇಶ್ವರ ಲಿಂಗ.

೩೧೫. "ತನ್ನೊಳಗಣ ಅರಿವು ತನ್ನಲ್ಲಿ ತೋರಿದಲ್ಲದೆ, ಅನ್ಯರಲ್ಲಿ ತೋರಬಲ್ಲುದೇ? ತನ್ನಲ್ಲಿ ತಾನೇ ಇದ್ದಂತೆ ಇದ್ದಿತ್ತು. ತನ್ನ ತಾನೇ ಪಕ್ವಕ್ಕೆ ಬಂದು ತನ್ನಲ್ಲಿ ಹುಟ್ಟಿದ ನೆನಹಿನ ಬಿನ್ನಾಣವನು ಏನೆಂಬೆನಯ್ಯ ರಾಮನಾಥಾ!"

---

೩೧೫. ವ. ಶಾ. ಸಾ. ಭಾಗ ೧. (ಉ.) ಪುಟ ೧೮೪.

ಶಾಸ್ತ್ರಗ್ರಂಥಗಳನ್ನು ಓದಿಕೊಂಡು ಸುಮ್ಮನೆ ತರ್ಕಿಸುವ ಶುಷ್ಕ ಪಂಡಿತ ವೇದಾಂತಿಯಲ್ಲ, ಸಿದ್ಧಾಂತಿಯಲ್ಲ. "ಸಿದ್ಧಾಂತಿಯ ಜ್ಞಾನ ಸಾಧನೆಯಲ್ಲಿ ಹೋಯಿತ್ತು. ವೇದಾಂತಿಯ ಜ್ಞಾನ ವಾದದಲ್ಲಿ ಹೋಯಿತ್ತು. ಕ್ರಿಯಾವಂತನ ಜ್ಞಾನ ನುಡಿಯಲ್ಲಿ ಹೋಯಿತ್ತು". ಸತ್ಯದ ನೆಲೆ ತಿಳಿದರೆ ತಾನು ಪರವಸ್ತುವಿನಿಂದ ಹೊರಬಿದ್ದ ಶುದ್ಧ ಅಂಗನೆಂಬ ಅರಿವೂ ಆ ಪರವಸ್ತು ಜ್ಯೋತಿಯ ರೂಪದಲ್ಲಿರುವ ಅರಿವೂ ಉಂಟಾಗಿ ಆನಂದ ಉಕ್ಕೇರುವುದು ; ತಾನು ಯಾರೆಂಬ ವಿಷಯದಲ್ಲಿ ಸುಜ್ಞಾನ ದೃಢಪಡುವುದು. ಆದುದರಿಂದ ಎಲ್ಲ ಕ್ರಿಯೆಗಳೂ ಅರ್ಪಣಗಳೂ ಈ ಸುಜ್ಞಾನಹಸ್ತದ ಮೂಲಕ ನಡೆಯುವುವು. ಕಂಡ ಅರಿವು ಕೊಡುವ ಕೂಟ ಆನಂದ ಭಕ್ತಿಯನ್ನು ಬಲಿಸುವುವು. ತಾನು ಕೇವಲ ಜ್ಯೋತಿ, ಪರವಸ್ತು ಕೇವಲ ಜ್ಯೋತಿ,—ಈ ಸಮರಸದ ಸೌಭಾಗ್ಯದಲ್ಲಿ ಘಟದ ಜ್ಯೋತಿ ವಿಶ್ವಜ್ಯೋತಿಯಾಗಬಯಸಿ ಐಕ್ಯ ಹೊಂದುತ್ತದೆ. ಶಿವಸ್ವರೂಪಿಯಾಗಿದ್ದುದು ಸ್ವಯಂ ಲಿಂಗವಾಗುತ್ತದೆ.

ಭಕ್ತಿಯ ಮೆಟ್ಟಲುಗಳೇ ಸಾಧನೆಯ ಮೆಟ್ಟಲುಗಳು, ಹಸ್ತಗಳೇ ಪರಿಣಾಮಗಳು. ಸದ್ಭಕ್ತಿ, ನಿಷ್ಠೆ, ಅವಧಾನ, ಅನುಭವ, ಆನಂದ ಮತ್ತು ಸಮರಸ, ಇವು ಒಂದು ರೀತಿಯಲ್ಲಿ ಷಟ್ಸ್ಥಲಗಳು. ಸುಚಿತ್ತ, ಸುಬುದ್ಧಿ, ನಿರಹಂಕಾರ, ಸುಮನಸ್ಸು, ಸುಜ್ಞಾನ ಮತ್ತು ಸದ್ಭಾವ, ಇವೂ ಕೂಡ ಷಟ್ಸ್ಥಲಗಳು. ಭಕ್ತಿಗೂ ಹಸ್ತಕ್ಕೂ ಇರುವ ಸಂಬಂಧವನ್ನು ವಿಮರ್ಶಿಸಿದರೆ ಬೀಜವೃಕ್ಷ ನ್ಯಾಯವಾಗಿ ತೋರುತ್ತದೆ. ಇವು ಒಂದನ್ನೊಂದು ಬಿಟ್ಟಿಲ್ಲ.

ಮನಸ್ಸನ್ನು ಪರಿಪಕ್ವಗೊಳಿಸುವ ಸತ್ಕ್ರಿಯಾಚರಣೆಗಳಿಗೆ ಷಟ್ಸ್ಥಲ ಸಿದ್ಧಾಂತ ಆರಂಭದಲ್ಲಿಯೇ ಪ್ರಾಧಾನ್ಯಕೊಟ್ಟು ಕರ್ಮಯೋಗಕ್ಕೆ ಇಂಬುಗೊಟ್ಟದೆ. ಸುಮನಸ್ಸನ್ನು ದೊರಕಿಸುವ, ಸುಜ್ಞಾನೋದಯಕ್ಕೆ ರಂಗವಾದ, ನಿಷ್ಕಾಮಕರ್ಮದ ಸಾಧನೆಯನ್ನು ಇಲ್ಲಿ ಕಾಣಬಹುದು. ಯಜ್ಞಯಾಗಾದಿಗಳನ್ನು ಷಟ್ಸ್ಥಲ ನಿಷೇಧಿಸಿ ತನು ಮನ ಗುಣಾದಿಗಳನ್ನು ನಷ್ಟಗೊಳಿಸುವ ಅಹಿಂಸಾಯುತವಾದ ಸತ್ಕರ್ಮಗಳನ್ನು ವಿಧಿಸಿ, ಸಹಜಮಾಟದಿಂದ ಅವನ್ನು ನಡಸಿಕೊಂಡು ಬರಬೇಕೆಂದೂ ಆಚಾರಲಿಂಗದೊಡನೆ ಸಾಮರಸ್ಯ ಹೊಂದ

ಬೇಕೆಂದೂ ತಿಳಿಸುವುದರಿಂದ, ಸತ್ಕ್ರಿಯೆಗಳಿಗೆ ಲಿಂಗಸ್ವರೂಪವನ್ನು ಕೊಟ್ಟಂತಾಯಿತು. ಸತ್ಕ್ರಿಯೆ ಸದ್ಗುಣ ಇದ್ದರೆ ದೇವರು; ಇಲ್ಲದಿದ್ದರೆ ಮನುಷ್ಯ. ಆದುದರಿಂದ ಜ್ಞಾನಪ್ರಾಧಾನ್ಯವಾದ ಪ್ರಾಣಲಿಂಗಿಸ್ಥಲ, ಶರಣಸ್ಥಲ ಅಥವಾ ಐಕ್ಯಸ್ಥಲ, ಇವುಗಳಲ್ಲಿ ಯಾವುದರಲ್ಲಿಯೇ ಸಾಧಕನಿರಲಿ, ಅಥವಾ ಸಾಕ್ಷಾತ್ ಶಿವನೆನಿಸುವ ಜಂಗಮವೇ ಆಗಿರಲಿ, ಕ್ರಿಯಾಹೀನನಾದರೆ ಆತನಲ್ಲಿ ಸಮರಸವಿಲ್ಲ ಎಂಬುದೇ ವಚನಕಾರರ ಮತ.

೩೧೬. "ಗುರುವಿಗಾದರೂ ಅರುಹು ಆಚಾರ ಸತ್ಕ್ರಿಯೆ ಬೇಕು. ಲಿಂಗಕ್ಕಾದರೂ ಅರುಹು ಆಚಾರ ಸತ್ಕ್ರಿಯೆ ಬೇಕು. ಜಂಗಮಕ್ಕಾದರೂ ಅರುಹು ಆಚಾರ ಸತ್ಕ್ರಿಯೆ ಬೇಕು. ಅದೇನು ಕಾರಣವೆಂದರೆ ಅರುಹು ಆಚಾರ ಸತ್ಕ್ರಿಯೆ ಸನ್ನಿಹಿತ ಶಿವನಿರ್ಪನಾಗಿ. ಅರುಹುಗೆಟ್ಟು, ಆಚಾರದಪ್ಪಿ, ಸತ್ಕ್ರಿಯೆ ಹೀನನಾಗಿಪ್ಪರು ಸಲ್ಲರಯ್ಯ ಶಿವಪಥಕ್ಕೆ ಅಖಂಡೇಶ್ವರಾ"

೩೧೭. "ವೇದ ವೇದಾಂತವನೋದಿ ಜ್ಞಾನ ಸೂರೆಮಾಡುವ ಜಂಗಮ ಕ್ರಿಯಾಹೀನನಾದರೆ ಆಗದು ಸಮರಸ ಆತನಲ್ಲಿ. ಅದೇನು ಕಾರಣವೆಂದಡೆ, ನುಡಿದಂತೆ ನಡೆಯನು. ಅಲ್ಲಿ ಕೂಡಲ ಚೆನ್ನ ಸಂಗಮ ದೇವನು ನಿಲ್ಲಲಾರನು."

೩೧೮. "ಕ್ರಿಯೆ ಇಲ್ಲದ ಭಕ್ತ ಮನುಜ, ಕ್ರಿಯೆ ಇಲ್ಲದ (ಮಹೇಶ) ರಾಕ್ಷಸ; ಕ್ರಿಯೆ ಇಲ್ಲದ ಪ್ರಸಾದಿ ಯವನ, ಕ್ರಿಯೆ ಇಲ್ಲದ ಪ್ರಾಣಲಿಂಗಿ ಭವಿ, ಕ್ರಿಯೆ ಇಲ್ಲದ ಶರಣ ಅಜ್ಞಾನಿ, ಕ್ರಿಯೆ ಇಲ್ಲದ ಐಕ್ಯ ಜನನಕ್ಕೊಳಗು ನೋಡಾ ಕೂಡಲ ಚೆನ್ನ ಸಂಗಮ ದೇವಾ"

೩೧೯. "ಕ್ರಿಯೆಯೇ ಜ್ಞಾನ, ಜ್ಞಾನವೇ ಕ್ರಿಯೆ. ಜ್ಞಾನವೆಂದರೆ ತಿಳಿಯುವುದು, ಕ್ರಿಯೆ ಎಂದರೆ ತಿಳಿದಂತೆ ಮಾಡುವುದು. ಪರಸ್ತ್ರೀ ಭೋಗಿಸಬಾರದೆಂಬುದೇ ಜ್ಞಾನ. ಆದರಂತೆ ಆಚರಿಸುವುದೇ ಕ್ರಿಯೆ. ಅಂತು ಆಚರಿಸದಿದ್ದರೆ ಅದೇ ಅಜ್ಞಾನ ನೋಡಾ, ಕೂಡಲ ಚೆನ್ನ ಸಂಗಮ ದೇವಾ"

ಪ್ಲೇಟೋ ಎಂಬ ತತ್ತ್ವಜ್ಞಾನಿ 'Knowledge is virtue' (ಜ್ಞಾನವೇ ಶೀಲ) ಎಂದು ಹೇಳಿರುವನಷ್ಟೆ. ಅದೇ ತತ್ತ್ವವನ್ನು ಚೆನ್ನಬಸವೇಶ್ವರನ ಮೇಲಿನ ವಚನಗಳಲ್ಲಿ ಕಾಣಬಹುದು. ಕ್ರಿಯೆ ಮತ್ತು ಜ್ಞಾನಗಳ ಪರಸ್ಪರ ಸಂಬಂಧ ದೇಹ ಮತ್ತು ಪ್ರಾಣಗಳಂತೆ:

---

೩೧೬—೧೯. ವ. ಶಾ. ಸಾ. ಭಾಗ ೧. (ಉ.) ಪುಟಗಳು ೨೦೧, ೩, ೩, ೧೯೪.

೩೨೦. "ಕ್ರಿಯೆ ಇಲ್ಲದ ಜ್ಞಾನ ಪ್ರಯೋಜನವಿಲ್ಲವಯ್ಯ. ಅದು ಹೇಗೆಂಡಡೆ, ದೇಹವಿಲ್ಲದ ಪ್ರಾಣಕ್ಕೆ ಆಶ್ರಯವುಂಟೇ ಅಯ್ಯ? ಆ ಪ್ರಾಣವಿಲ್ಲದ ಕಾಯಕ್ಕೆ ಚೈತನ್ಯ ಉಂಟೇ ಅಯ್ಯ? ಕ್ರಿಯೆ ಇಲ್ಲದ ಜ್ಞಾನಕ್ಕೆ ಆಶ್ರಯವಿಲ್ಲ. ಜ್ಞಾನವಿಲ್ಲದ ಕ್ರಿಯೆಗೆ ಆಶ್ರಯವಿಲ್ಲ. ಕ್ರಿಯಾಜ್ಞಾನ ಪ್ರಕಾಶವಿಲ್ಲದೆ ಲಿಂಗಕ್ಕೆ ಆಶ್ರಯವಿಲ್ಲ. ಇದು ಕಾರಣ ಜ್ಞಾನ ಕ್ರಿಯೋಪಚಾರಂಗಳಿರಬೇಕೆಂದೆನಯ್ಯ ಮಹಾಲಿಂಗ ಗುರು ಶಿವಸಿದ್ಧೇಶ್ವರ ಪ್ರಭುವೇ"

ಹೇಗೆ ಕರ್ಮವನ್ನು ಬಿಡಲಾಗದೋ ಹಾಗೆಯೇ ಭಕ್ತಿಯನ್ನೂ ಬಿಡಲಾಗದು ಎಂದು ಹೇಳಿ ಷಟ್ಸ್ಥಲ ಭಕ್ತಿಯೋಗವನ್ನು ಒಳಗೊಂಡಿದೆ. ಪರವಸ್ತುವಿನಿಂದ ಬೇರೆಯಾಗಿ ಅಂಗವೆನಿಸಿದಾಗ ಅಂಗದಲ್ಲಿ ಸೇರಿದ ನಿವೃತ್ತಿಮುಖವಾದ ಶಕ್ತಿಗೆ ಭಕ್ತಿಯೆಂದೇ ನಾಮಕರಣವಾಗಿದೆ. ಮನುಷ್ಯನಿಗೆ ಕರ್ಮಕ್ಕಿಂತಲೂ ಭಕ್ತಿ ಹೆಚ್ಚು ಪರಿಣಾಮಕಾರಿಯಾದದ್ದು. ಕರ್ಮ ಒಂದು ರೀತಿಯಲ್ಲಿ ಮನಸ್ಸನ್ನು ಸಂಯಮನಕ್ಕೆ ಒಳಪಡಿಸಿ ಅದನ್ನು ಗಟ್ಟಿಮಾಡುತ್ತದೆ. ಹೀಗೆ ಗಟ್ಟಿಯಾಗಬೇಕಾದುದು ಆವಶ್ಯಕ. ಧೈರ್ಯ ಸ್ಥೈರ್ಯಗಳು ಬಲಿತು ಎಡರುಗಳನ್ನು ಜಯಿಸುವುದಕ್ಕೆ ಸಾಧನವಾಗುತ್ತದೆ. ಭಕ್ತಿ ಎಂಬುದು ಅಂತರಂಗವನ್ನು ಮೆತುಮಾಡುವಂತಹುದು, ಮನಸ್ಸನ್ನು ಕರಗಿಸುವಂತಹುದು. ಕರ್ಮ ಪ್ರಕಾರಾಂತರವಾಗಿ ಭಗವಂತನ ಸಂಬಂಧವನ್ನು ಬೆಳಸುತ್ತದೆ. ಭಕ್ತಿ ಸಾಕ್ಷಾತ್ತಾಗಿ ಭಗವಂತನ ಸಂಬಂಧವನ್ನುಂಟುಮಾಡುತ್ತದೆ. ಕರ್ಮಲೋಪವಾದರೂ ಭಕ್ತಿಯಿದ್ದರೆ ಭಗವಂತನ ಕಾರುಣ್ಯವುಂಟು, ಸಾಕ್ಷಾತ್ಕಾರವುಂಟು.

(೮೯) "ಅಯ್ಯಾ ಅಯ್ಯಾ ಎಂದು ಕರೆವುತ್ತಲಿದ್ದೇನೆ, ಅಯ್ಯಾ ಅಯ್ಯಾ ಎಂದು ಒರಲುತ್ತಲಿದ್ದೇನೆ. 'ಓ' ಎನ್ನಲಾಗದೇ ಅಯ್ಯಾ! ಆವಾಗಳೂ ನಿಮ್ಮ ಕರೆವುತ್ತಲಿದ್ದೇನೆ. 'ಓ' ಎನ್ನದೆ ಮಾನವೇ ಕೂಡಲ ಸಂಗಮ ದೇವಾ"

ಎಂದು ಒಂದು ಬಾರಿ ಅಂಗಲಾಚಿದರೆ ಹೃದಯ ಮಂದಿರದ ಬಾಗಿಲು ತೆರೆಯುತ್ತದೆ, ಆದರ ಜ್ಯೋತಿ ಅಂತರಂಗವನ್ನೆಲ್ಲ ಬೆಳಗುತ್ತದೆ.

---

೩೨೦. ವ. ಶಾ. ಸಾ. ಭಾಗ ೧. (ಉ.) ಪುಟ ೧೯೩.

೩೨೧. "ಹೊಲಬುಗೊಂಡರಸಬೇಡ ಬಿಲಿತು ತರಬೇಡ. ಒಲಿದು ಒಮ್ಮೆ 'ಶಿವ ಶರಣು' ಎನ್ನಿರಯ್ಯಾ. ಒಂದು ಸೊಲ್ಲಿಂಗೆ ಮುಕ್ತಿ ಸಿದ್ಧಿ, ಕೂಡಲ ಸಂಗಮ ದೇವ ಭಕ್ತಿಲಂಪಟನಾಗಿ"

ಹೀಗೆ ಆತ್ಮಾರ್ಪಣ ಮಾಡಿದರೆ ಮುಕ್ತಿಯುಂಟಾಗುತ್ತದೆ. ಆದರೆ ಭಕ್ತಿ ಕೂಡ ಜ್ಞಾನಯುತವಾಗಿರಬೇಕೆಂಬುದು ವಚನಕಾರರ ಮತ. ಕ್ರಿಯೆ ಮತ್ತು ಜ್ಞಾನ ಇವೆರಡೂ ಹೇಗೆ ಒಟ್ಟುಗೂಡಿರಬೇಕೋ ಹಾಗೆಯೇ ಭಕ್ತಿ ಮತ್ತು ಜ್ಞಾನ ಒಟ್ಟುಗೂಡಿರಬೇಕು. ಕುರುಡು ಭಕ್ತಿಯಿಂದ ಪ್ರಯೋಜನ ಕಡಮೆ. "ಶಿಷ್ಯನ ಸುಜ್ಞಾನೋದಯವಾಗದನ್ನಕ್ಕ ಭಕ್ತಿ ಎಂತಹುದೋ" ಎಂದು ಪ್ರಭು ಹೇಳಿದ್ದಾನೆ.

೩೨೨. ಅರಿದು ಮಾಡುವದು ಗುರುಭಕ್ತಿ. ಅರಿದು ಮಾಡುವದು ಲಿಂಗಭಕ್ತಿ. ಅರಿದು ಮಾಡುವದು ಜಂಗಮಭಕ್ತಿ. ಅರಿವೆಯಿಂದ ಕಾಂಬುದು ಸದಾಶಿವ ಮೂರ್ತಿ ಲಿಂಗವನರಿವುದಕ್ಕೆ"

ಜ್ಞಾನಕ್ಕೂ ಭಕ್ತಿಗೂ ಅಂತಹ ವೈರವೇನೂ ಇಲ್ಲ. ಜ್ಞಾನದ ಬೆಂಬಲ ವಿಲ್ಲದ ಭಕ್ತಿ ಸ್ಥಿರವಾಗಿ ನಿಲ್ಲಲಾರದು. ಜ್ಞಾನವಾದರೋ ಭಕ್ತಿಯಿಲ್ಲದೆ ಜನಿಸದು.

೩೨೩. "ಭಕ್ತಿ ಎಂಬುದು ಬೇರು, ವಿರಕ್ತಿ ಎಂಬುದು ಮರ, ಜ್ಞಾನವೆಂಬುದು ಫಲ"

ಷಟ್ಸ್ಥಲದಲ್ಲಿ ಕರ್ಮಯೋಗ ಭಕ್ತಿಯೋಗಗಳಿರುವಂತೆಯೇ ಜ್ಞಾನ ಯೋಗವೂ ಸೇರಿಕೊಂಡಿದೆ. ಆತ್ಮಸ್ವರೂಪವನ್ನು ತಿಳಿಯುವುದೇ ಜ್ಞಾನ. ಇದು ಗ್ರಂಥಾವಲೋಕನದಿಂದ ಬರತಕ್ಕದ್ದಲ್ಲ; ಅನುಭವವೇದ್ಯವಾದುದು. ದೀಕ್ಷಾಕಾಲದಲ್ಲಿ ಗುರು 'ತತ್ತ್ವಮಸಿ' ಎಂದು ಬೋಧೆಮಾಡಿ ಈ ಜ್ಞಾನಕ್ಕೆ ಅಂಕುರಾರ್ಪಣ ಮಾಡಿರುತ್ತಾನೆ. ಮುಂದೆ ಅದನ್ನು ಶಿಷ್ಯನು ತನ್ನಲ್ಲಿ ಕಂಡುಕೊಳ್ಳಬೇಕು. ಇದಕ್ಕೆ ಯೋಗ ಸಹಾಯಮಾಡುತ್ತದೆ. ಯಾವುದನ್ನು ಧ್ಯಾನಿಸಬೇಕು? ಯಾವುದನ್ನು ಸೇರಬೇಕು? ಎಂಬ ನಿಶ್ಚಯ ಜ್ಞಾನವಿಲ್ಲದಿದ್ದರೆ

೩೨೧. ಬ. ವ. ಪುಟಗಳು ೨೭.

೩೨೨. ವ. ಶಾ. ಸಾ. ಭಾಗ ೧. (ಉ.) ಪುಟ ೧೭೬.

೩೨೩. ವ. ಶಾ. ಸಾ. ಭಾಗ ೧. (ಉ.) ಪುಟ ೧೮೧.

ಯೋಗ ಫಲಕಾರಿಯಲ್ಲ. ಆದುದರಿಂದ ಮೊದಲು ಅರಿವು, ಅನಂತರ ಅರಿವಿನ ಗುರಿ ಹಿಡಿದು ಯೋಗ. ಹೀಗೆ ಜ್ಞಾನ ಮತ್ತು ಯೋಗ ಪರಸ್ಪರ ವಾಗಿ ಬಲಿಯುತ್ತ ಮಾಯಾಮೋಹಗಳನ್ನು ಜಯಿಸಿ "ತೆರಹಿಲ್ಲದ ಅರುಹು ತಾನಾಗಿ, ನೆರೆ ಅರುಹಿನೊಳು ನಿಬ್ಬೆರಗಾಗಿ" ಸಾಧಕನು ಪರಿಣಮಿಸುತ್ತಾನೆ.

ಷಟ್ಸ್ಥಲಸಿದ್ಧಾಂತದಲ್ಲಿ ದ್ವೈತ, ವಿಶಿಷ್ಟಾದ್ವೈತ ಮತ್ತು ಅದ್ವೈತ ಮೂರೂ ಸೇರಿಕೊಂಡಿವೆ. ಅಂಗ ಲಿಂಗಗಳ ಸ್ವರೂಪವನ್ನು ವಿವರಿಸುವಾಗ ಒಂದೇ ಆದ ಪರವಸ್ತು ಸ್ವಲೀಲೆಯಿಂದ ಲಿಂಗಸ್ಥಲ ಮತ್ತು ಅಂಗಸ್ಥಲ ಎಂದಾಯಿತು ಎಂದು ಹೇಳಿದೆ. ಕಡೆಗೆ ಮುಕ್ತಿಯ ಸ್ಥಿತಿಯಾದರೂ ಏನು? ತಾನು ಪ್ರತ್ಯೇಕವಾಗಿ ಉಳಿದು ಆನಂದಾನುಭವವನ್ನು ಮಾಡುವುದಲ್ಲ. ತಾನು ಎಲ್ಲಿಂದ ಹೊರಬಿದ್ದನೋ ಅಲ್ಲಿಯೇ ಐಕ್ಯವಾಗುವುದು. ಆದುದರಿಂದ ಮೊದಲಿನಲ್ಲೂ ಅದ್ವೈತ, ಕೊನೆಯಲ್ಲೂ ಅದ್ವೈತ; ಮಧ್ಯದಲ್ಲಿ ದ್ವೈತ ಮತ್ತು ವಿಶಿಷ್ಟಾದ್ವೈತಗಳು ಕಂಡು ಬರುತ್ತವೆ. ಭಗವಂತನ ಕರುಣೆ ಅವಶ್ಯಕ. ಸಾಧನೆಯಲ್ಲಿ ಸಿದ್ಧಿಪಡೆಯಬೇಕಾದರೆ ಮೊದಲು 'ಸೋಹಂ' ಎನ್ನದೆ 'ದಾಸೋಹಂ' ಎನ್ನಬೇಕು ಎಂದು ಷಟ್ಸ್ಥಲಸಿದ್ಧಾಂತ ಹೇಳುತ್ತದೆ. ಭಕ್ತ, ಮಾಹೇಶ, ಮತ್ತು ಪ್ರಸಾದಿಸ್ಥಲಗಳಲ್ಲಿ ದ್ವೈತವೇ ಇದೆ. ಲಿಂಗದ ಗುಣಗಳು ನೆಲಸುವವರೆಗೂ ಅಂಗವೇ; ಆದುದರಿಂದ ದ್ವೈತ. ಲಿಂಗದ ಗುಣಗಳನ್ನು ಪಡೆಯುತ್ತ ಬಂದ ಹಾಗೆಲ್ಲ, ತಾನು ಶಿವರೂಪಿಯೆಂಬ ಅರಿವು ಬಂದಹಾಗೆಲ್ಲ, ವಿಶಿಷ್ಟಾದ್ವೈತದ ಅನುಭವ ಆನಂದಗಳು ದೊರೆಯುತ್ತವೆ. ಇದು ಸಾಮರಸ್ಯಾನುಭವದ ಕಾಲವೆಂದು ಷಟ್ಸ್ಥಲಸಿದ್ಧಾಂತದ ರೀತಿ ಹೇಳಬಹುದು. ಈ ಸ್ಥಿತಿಯ ಜೀವರುಗಳು ಕೈಲಾಸದಲ್ಲಿ ಗಣಗಳಾಗಿರ ಬಹುದು; ಪರಮಾತ್ಮನ ಸಾನ್ನಿಧ್ಯದಲ್ಲಿದ್ದುಕೊಂಡು ಸೇವೆಮಾಡುತ್ತ ಆ ಆನಂದದಲ್ಲಿ ಮಗ್ನರಾಗಿರಬಹುದು; ಭೂಲೋಕದಲ್ಲಿಯೂ ಜೀವನ್ಮುಕ್ತರಂತೆ ಇರಬಹುದು. ತಮಿಳು ಶೈವಸಿದ್ಧಾಂತಕಾರರು ಜೀವನ್ಮುಕ್ತ ಸ್ಥಿತಿಯನ್ನು ಒಪ್ಪಿಕೊಂಡಿದ್ದಾರೆ. ಆದುದರಿಂದ ಷಟ್ಸ್ಥಲದ ವಿಶಿಷ್ಟಾದ್ವೈತ ಭಾಗ ಈ ತಮಿಳು ಸಿದ್ಧಾಂತದ ವಿಶಿಷ್ಟಾದ್ವೈತವನ್ನು ಹೋಲುತ್ತದೆಂದು ಹೇಳ ಬೇಕು. ಇದು ಹೆಚ್ಚು ಕಡಮೆ ಶರಣಸ್ಥಲದ ಲಕ್ಷಣಗಳನ್ನು ಅನುಸರಿಸಿ ಕೊಂಡಿದೆ. ಷಟ್ಸ್ಥಲಸಿದ್ಧಾಂತದ ಪ್ರಕಾರ ನಿಜವಾದ ಮುಕ್ತಿ,

"ಯಥಾ ನದ್ಯಃ ಸ್ಯಂದಮಾನಾಃ ಸಮುದ್ರೇಽ।
ಸ್ತಂಗಚ್ಛಂತಿ ನಾಮರೂಪೇ ವಿಹಾಯ
ತಥಾ ವಿದ್ವಾನ್ ನಾಮರೂಪಾದ್‌ವಿಮುಕ್ತಃ
ಪರಾತ್ಪರಂ ಪುರುಷಮುಪೈತಿ ದಿವ್ಯಂ" ॥

ಎಂಬ ಮುಂಡಕೋಪನಿಷತ್ತಿನ ಅಭಿಪ್ರಾಯದಂತೆ ಐಕ್ಯವಾಗುವುದೇ ಆಗಿದೆ; ಅಥವಾ ಬಸವಣ್ಣನವರ ವಚನದಂತೆ

"ಸಮರತಿ, ಸಮಕಳೆ, ಸಮಸುಖ" "ನದಿಯೊಳಗೆ ನದಿ ಬೆರಸಿದಂತೆ"

ಈ ಸಿದ್ಧಾಂತವನ್ನು ಏನೆಂದು ಕರೆಯುವುದು? ಅಲ್ಲಮಪ್ರಭು 'ಇದು ಅದ್ವೈತ ಕಾಣಾ' ಎನ್ನುತ್ತಾನೆ. ಮಹದೇವಿಯಕ್ಕ ಕೂಡ 'ಅದ್ವೈತದಿಂದ ತನ್ನ ತಾನರಿದಡೆ ಚೆನ್ನಮಲ್ಲಿಕಾರ್ಜುನನೆಂಬ ಲಿಂಗ ತಾನೇ' ಎಂದು ಹೇಳಿದ್ದಾಳೆ. ಬಸವಣ್ಣನವರು

೩೨೪. "ದ್ವೈತಾದ್ವೈತವನೋದಿ ಏನ ಮಾಡುವಿರಯ್ಯ, ನಮ್ಮ ಶರಣರ ಉರಿಗೆ ಅರಗಾಗಿ ಕರಗದನ್ನಕ್ಕ"

ಎಂದು ಹೇಳಿರುವುದನ್ನು ನೋಡಿದರೆ ಈ ಷಟ್ಸ್ಥಲಸಿದ್ಧಾಂತ "ದ್ವೈತಾದ್ವೈತ" ಎಂದು ಅವರು ಅಭಿಪ್ರಾಯಪಟ್ಟಿರುವ ಹಾಗಿದೆ. ತೋಂಟದಾರ್ಯರು ಹೇಳುವುದು ನೋಡಿದರೆ ಈ ಸಿದ್ಧಾಂತ * ಶಿವಾದ್ವೈತವೆನಿಸುತ್ತದೆ:

೩೨೫. "............ಈ ಷಟ್ಸ್ಥಲ ಮಾರ್ಗವು ದ್ವೈತಾದ್ವೈತದ ಪರಿವರ್ತನೆಯಲ್ಲ. ಅದೇನು ಕಾರಣವೆಂದಡೆ, ಇದು ಶಿವಾದ್ವೈತ ಮಾರ್ಗವಾದ ಕಾರಣ. ಈ ಲಿಂಗಾಂಗಸಮರಸೈಕ್ಯವ ತಿಳಿದ ಬಳಿಕ ಬೊಮ್ಮ ಪರಬೊಮ್ಮವೆಂದು ಬೇರುಂಟೇ ತಾನಲ್ಲದೆ, ಮಹಾಲಿಂಗ ಗುರು ಶಿವ ಸಿದ್ಧೇಶ್ವರ ಪ್ರಭುವೇ"

---

೩೨೪. ಬ. ವ. ಪುಟ ೨೦.

*ಆದರೆ ಶ್ರೀಕಂಠಭಾಷ್ಯದ ಶಿವಾದ್ವೈತದಂತೆ ಷಟ್ಸ್ಥಲದ ಶಿವಾದ್ವೈತವಲ್ಲ. ಶ್ರೀಕಂಠಭಾಷ್ಯದಲ್ಲಿ ಷಟ್ಸ್ಥಲಗಳ ವಿವರಣೆ ಇಲ್ಲ. "ಮುಕ್ತಃ ಶಿವ ಸಮೋಭವೇತ್" ಎಂಬುದು ಷಟ್ಸ್ಥಲದ ರೀತಿಯಲ್ಲಿ ಮುಕ್ತಿಯಲ್ಲ.

೩೨೫. ವ. ಶಾ. ಸಾ. ಭಾಗ ೧. (ಪೂ.) ಪುಟ ೧೧೪

ಪರಮಾರ್ಥದಲ್ಲಿ ಶಿವಜೀವರಿಗೆ ಅಭೇದವೂ ಭೇದವೂ ಬೆಂಕಿಯಿಂದ ಹೊರಬಿದ್ದ ಕಿಡಿಯಂತೆ ಇರುವುದಾದ್ದರಿಂದ ಇದನ್ನು * ಭೇದಾಭೇದವೆಂದು ಕರೆಯುವುದೂ ಉಂಟು.

ಶಿವನು ಶಕ್ತಿವಿಶಿಷ್ಟನಾದವನು, ಜೀವನೂ ಶಕ್ತಿ (ಭಕ್ತಿ) ವಿಶಿಷ್ಟನಾದವನು; ಶಿವಶಕ್ತಿಯರು ಅವಿನಾಭಾವದಿಂದಿರತಕ್ಕವರು ಎಂಬುದು ಈ ಸಿದ್ಧಾಂತದಲ್ಲಿ ಬರುವುದರಿಂದ ಶಕ್ತಿ ವಿಶಿಷ್ಟಾದ್ವೈತವೆಂದು ಇದನ್ನು ಕರೆಯುವುದುಂಟು. ಶ್ರೀಪತಿ ಪಂಡಿತ ಶ್ರೀಕರಭಾಷ್ಯದಲ್ಲಿ,

ದ್ವೈತಾದ್ವೈತಮತೇ ಶುದ್ಧೇ ವಿಶೇಷಾದ್ವೈತ ಸಂಜ್ಞಕೇ।
ವೀರಶೈವೈಕ ಸಿದ್ಧಾಂತೇ ಸರ್ವಶ್ರುತಿ ಸಮನ್ವಯಃ ॥

ಎಂದು ಹೇಳಿದ್ದಾನೆ. ಇದನ್ನು ಸಾಮರಸ್ಯ ಸಿದ್ಧಾಂತವೆಂದು ಕರೆದರೆ ತಪ್ಪಾಗಲಾರದು.

---

* ಸಿದ್ಧಾಂತ ಶಿಖಾಮಣಿ ಪುಟ ೫೨.

## ೧೨ನೆಯ ಪ್ರಕರಣ

# ವಚನಧರ್ಮದಲ್ಲಿ ನೀತಿ

ಯಾವ ನಾಗರಿಕ ಧರ್ಮದಲ್ಲಿಯೇ ಆಗಲಿ ದುರಾಚಾರಕ್ಕೂ ದುರ್ನೀತಿಗೂ ಪ್ರೋತ್ಸಾಹವಿರುವುದಿಲ್ಲ. ಸಮಾಜ ಹಿತಚಿಂತನೆ ಧರ್ಮದಲ್ಲಿ ಒಂದು ಮುಖ್ಯಭಾಗ. ತಾನು ಸುಖವಾಗಿರಬೇಕು, ತನಗೆ ಇತರರಿಂದ ಬಾಧೆಯಾಗಬಾರದು, ತನ್ನ ಹಕ್ಕುಗಳು ತನಗಿರಬೇಕು, ತನ್ನ ಸ್ವತ್ತನ್ನು ಇತರರು ಅಪಹರಿಸಬಾರದು ಎಂಬ ಮುಂತಾದ ಸ್ವಾರ್ಥಪರವಾದ ಆಕಾಂಕ್ಷೆಗಳಲ್ಲಿ ನೀತಿಶಾಸ್ತ್ರಕ್ಕೆ ಪ್ರಾರಂಭವಾಗುತ್ತದೆ. ತನ್ನನ್ನು ಇತರರು ಹೇಗೆ ಕಾಣಬೇಕೆಂದು ಬಯಸುವನೋ ಹಾಗೆಯೇ ತಾನೂ ಇತರರನ್ನು ಕಾಣಬೇಡವೆ? ಆದುದರಿಂದ ಸಮಾಜ ತನ್ನ ಸದಸ್ಯರ ನಡವಳಿಗೆ ಒಂದು ಕಟ್ಟುಪಾಡನ್ನು ವಿಧಿಸುತ್ತದೆ. ಈ ಕಟ್ಟುಪಾಡನ್ನು ಯಾರೂ ಮೀರಬಾರದೆಂದೇ ಗೊತ್ತು ಮಾಡಿರುತ್ತದೆ. ಯಾರಾದರೂ ಮೀರಿದರೆ ರಾಜಾಜ್ಞೆಯಿಂದ ದಂಡನೆಯಾಗುತ್ತದೆ; ಅಥವಾ ಸಮಾಜವೇ ಬಹಿಷ್ಕಾರಾದಿಗಳಿಂದ ದಂಡನೆ ಮಾಡುತ್ತದೆ. ಆದರೆ ಕೆಲವು ನೀತಿಗಳನ್ನು ಇತರರಿಗೆ ತಿಳಿಯದಂತೆ ವ್ಯಕ್ತಿ ಉಲ್ಲಂಘಿಸಬಹುದು ಅಥವಾ ತಾನು ಬಲಿಷ್ಠನಾಗಿರುವುದರಿಂದ ಸಮಾಜವನ್ನು ದುರ್ಲಕ್ಷಿಸಿ ಉಲ್ಲಂಘಿಸಬಹುದು. ಆದುದರಿಂದ ದಂಡನೆ ಇಹಲೋಕದಲ್ಲಿ ಆಗದಿದ್ದರೂ ಪರಲೋಕದಲ್ಲಿ ಆಗುತ್ತದೆಂದು ಆಸ್ತಿಕರಾದವರು ಹೇಳುತ್ತಾರೆ, ನಂಬುತ್ತಾರೆ. ಹೀಗೆಯೇ ಒಂದು ಒಳ್ಳೆಯ ಕೆಲಸಕ್ಕೆ ಫಲ ಇಹದಲ್ಲಿ ದೊರೆಯದಿದ್ದರೆ ಪರದಲ್ಲಿ ಕಾದಿರುತ್ತದೆ. ಆದುದರಿಂದ ಸ್ವರ್ಗ, ನರಕ, ಎಂಬುದರ ಕಲ್ಪನೆಗಳಿವೆ.

ಪರಮಾತ್ಮನನ್ನು ಒಲಿಸುವುದು ಧರ್ಮದಲ್ಲಿ ಮುಖ್ಯವಾದುದರಿಂದ ಪರಮಾತ್ಮನ ಕಟ್ಟಳೆಯನ್ನು ಮೀರದಿರುವುದು ಹಾಗೆ ಒಲಿಸುವುದಕ್ಕೆ ಮುಖ್ಯವಾದ ಮಾರ್ಗ. ಆದುದರಿಂದ ಎಲ್ಲರೂ ಸದಾಚಾರ ಸದ್ವರ್ತನೆಗಳಿಂದ ಇರತಕ್ಕದ್ದು, ಅಂತರಂಗ ಶುದ್ಧಿಯನ್ನು ಪಡೆಯತಕ್ಕದ್ದು, ಎಂಬುದು ವಚನಕಾರರ ಮತ.

೩೨೬. "ಕಳಬೇಡ, ಕೊಲಬೇಡ, ಹುಸಿಯ ನುಡಿಯಲುಬೇಡ, ಮುನಿಯಬೇಡ, ಅನ್ಯರಿಗೆ ಅಸಹ್ಯ ಪಡಬೇಡ, ತನ್ನ ಬಣ್ಣಿಸಬೇಡ, ಇದಿರ ಹಳಿಯಲು ಬೇಡ, ಇದೇ ಅಂತರಂಗಶುದ್ಧಿ, ಬಹಿರಂಗಶುದ್ಧಿ, ಇದೇ ನಮ್ಮ ಕೂಡಲ ಸಂಗಮ ದೇವರನೊಲಿಸುವ ಪರಿ."

ಯಾರು ಭಕ್ತರಾಗಬೇಕೆಂದು ಬಯಸುವರೋ ಅವರು ಅದಕ್ಕೆ ತಕ್ಕ ನಡತೆಯುಳ್ಳವರಾಗಬೇಕು. ಇಲ್ಲದಿದ್ದರೆ ಇದು ಆತ್ಮವಂಚನೆಯಲ್ಲಿ ಆರಂಭವಾಗಿ ಆಷಾಢಭೂತಿಯಂತೆ ಪರರ ವಂಚನೆಯಲ್ಲಿ ಮುಕ್ತಾಯವಾಗುತ್ತದೆ. ಆದುದರಿಂದ ಇಂಥ ವೇಷಧಾರಕರಿಗೆ ಪರಮಾತ್ಮನೊಲಿಯುವುದಿಲ್ಲ.

೩೨೭. ಅರ್ಥವಡಗದು, ಕ್ರೋಧ ತೊಲಗದು, ಕ್ರೂರ ಕುಹಕ ಕುಭಾಷೆ ಬಿಡದನ್ನಕ್ಕ, ನೀನೆತ್ತ ಶಿವನೆತ್ತ, ಹೋಗತ್ತ ಮರುಳೇ. ಭವರೋಗವೆಂಬ ತಿಮಿರ ತಿಳಿಯದನ್ನಕ್ಕ ಕೂಡಲ ಸಂಗಯ್ಯನೆತ್ತ, ನೀನೆತ್ತ ಮರುಳೇ?"

೩೨೮. "ತಪವೆತ್ತ ಹೆರರ ಕೇಡಿಂಗೆ ಬಗೆವುದೆತ್ತ? ಜಪವೆತ್ತ ಶರಣರ ಮೇಲೆ ಅನೃತವ ನುಡಿವುದೆತ್ತ? ಪಂಚಾಚಾರವೆತ್ತ ಪಾತಕಕ್ಕೆ ಮನ ಬಗೆವುದೆತ್ತ? ಇಂತೀ ಹೊರ ಬಳಕೆಯ ಲೋಕರಂಜನೆಯಲ್ಲಿಪ್ಪವರಿಗೆ ನಾನಂಜುವೆ. ನಿಜ ಗುರು ಸ್ವತಂತ್ರ ಸಿದ್ಧಲಿಂಗೇಶ್ವರಾ ನೀನು ಅಂಜಿ ದೂರದಲ್ಲಿ ಓಡುವೆ"

ವಚನಧರ್ಮ ಮನುಷ್ಯರು ಯಾವ ರೀತಿ ವರ್ತಿಸಬೇಕು, ತಮ್ಮ ನಿತ್ಯಜೀವನದಲ್ಲಿ ಯಾವ ನಿಯಮಗಳನ್ನು ಪಾಲಿಸಬೇಕು ಎಂಬ ಬಗ್ಗೆ ಒಂದು ಸದಾಚಾರಸ್ಮೃತಿಯೇ ಆಗಿದೆ. ಯಾವ ಪಾಪಕ್ಕೂ ಸಾಮಾನ್ಯವಾಗಿ ಆಸೆಯೇ ಮೂಲವಾಗಿರುತ್ತದೆ. ಆಸೆಯನ್ನು ತೃಪ್ತಿಪಡಿಸುವುದು ಸಾಧ್ಯವೇ ಇಲ್ಲ. ಈ ಆಸೆಯಿಂದಲೇ ಜನ್ಮಗಳನ್ನೆತ್ತಬೇಕಾಗುತ್ತದೆ. ಆಸೆಗೆ ಅಡ್ಡಿ ಬಂದಾಗ ರೋಷ ಹುಟ್ಟುತ್ತದೆ, ರೋಷದಿಂದ ಅನರ್ಥಪರಂಪರೆಗಳಾಗುತ್ತವೆ. ಆದುದರಿಂದ ಎಲ್ಲಕ್ಕಿಂತ ಮೊದಲು ಆಸೆಯನ್ನು ಬಿಡಿ. ಆಸೆಬಿಟ್ಟವನು ದೇವರು ಎಂದು ವಚನಧರ್ಮ ಹೇಳುತ್ತದೆ.

---

೩೨೬. ಬ. ವ. ಪುಟ ೩೫. ೩೨೭. ಬ. ವ. ಪುಟ ೨೦.
೩೨೮. ವ. ಶಾ. ಸಾ. ಭಾಗ ೧ (ಪೂ.) ೧೮೩.

೩೩೯. "ಧರೆ ದೆಸೆವಳಯವೆಲ್ಲ ತನಗಾದಡಂ ನಿಲ್ಲಳು. ಇನಿತು ತ್ರಿಭುವನ ರಾಜ್ಯಪದಂಗಳು ತನಗಾದಡಂ ನಿಲ್ಲಳು. ಅನಿತರೊಳು ತೃಪ್ತಿವಡೆಯಳು. ಈ ಆಶೆ ಎಂಬ ಪಾತಕಿಯನೆಂದಿಂಗೆ ನೀಗಿ, ನಿಮ್ಮನೊಡಗೂಡಿ ಬೇರಾಗದೆಂದಿಪ್ಪೆನೋ ಕಪಿಲಸಿದ್ಧ ಮಲ್ಲಿಕಾರ್ಜುನಾ?"

೩೪೦. "ಆಸೆಯುಳ್ಳಾತ ಒಬ್ಬರಾಧೀನದಲ್ಲಿಪ್ಪನು; ಆಸೆಯ ಮನದ ಕೊನೆಯನರಿದಾತ ಕೈಲಾಸದಾಚೆಯಲ್ಲಿಪ್ಪನೆಂದಾತ ನಮ್ಮ ಅಂಬಿಗರ ಚೌಡಯ್ಯ"

೩೪೧. "ಆಸೆಯುಳ್ಳನ್ನಕ್ಕ ಒಬ್ಬರ ಆಶ್ರಯಿಸುವುದು. ಆಶ್ರಯದಾಸೆ ಕಷ್ಟ ಕಾಣರಯ್ಯ. ಆಸೆಯೇ ದಾಸತ್ವ, ನಿರಾಶೆಯೇ ಈಶತ್ವ. ದಾಸತ್ವದ ಈಶತ್ವದ ಈ ಅನುವ ವಿಚಾರಿಸಿ, ನಿರಾಶೆಯಾಗಿಪ್ಪುದೇ ಈಶ ಪದವಯ್ಯ ಉರಿಲಿಂಗಪೆದ್ದಿಪ್ರಿಯ ವಿಶ್ವೇಶ್ವರಾ"

ಕೆಲವರು ತಮ್ಮಲ್ಲಿ ಆ ಆಸೆ ತುಂಬಿರುವುದನ್ನು ತಿಳಿದುಕೊಳ್ಳದೆ ಹೊನ್ನು ಹೆಣ್ಣು ಮಣ್ಣುಗಳು ಮಾಯಾಸ್ವರೂಪಗಳೆಂದೂ ಅವು ತಮ್ಮನ್ನು ಮೋಹಗೊಳಿಸುವುವೆಂದೂ ಹೇಳುತ್ತಾರೆ. ಬೆಂಕಿಗೆ ತುಪ್ಪ ಕರಗುವುದು ಸಹಜವಲ್ಲವೇ? ಹಾಗೆಯೇ ತಮ್ಮ ಮನಸ್ಸು ಕರಗುವುದೆಂದು ಹೇಳುವ ಒಂದು ವಾದವೂ ಇದೆ. ಆದರೆ ವಚನಕಾರರು ಅವು ಮಾಯೆಯಲ್ಲ ಎಂದು ಹೇಳುತ್ತಾರೆ.

೩೪೨. "ಹೊನ್ನು ಮಾಯೆ ಎಂಬರು, ಹೆಣ್ಣು ಮಾಯೆ ಎಂಬರು, ಮಣ್ಣು ಮಾಯೆ ಎಂಬರು. ಹೊನ್ನು ಮಾಯೆಯಲ್ಲ, ಹೆಣ್ಣು ಮಾಯೆಯಲ್ಲ, ಮಣ್ಣು ಮಾಯೆಯಲ್ಲ, ಮನದ ಮುಂದಣ ಆಸೆಯೇ ಮಾಯೆ ಕಾಣಾ ಗುಹೇಶ್ವರಾ"

ಆದುದರಿಂದ ಈ ಆಸೆಯನ್ನು ನಿರ್ಮೂಲನಮಾಡಿ. ಪರಧನ ಪರಸ್ತ್ರೀ ಮುಂತಾದುವನ್ನು ಆಸೆಮಾಡುವುದಿಲ್ಲವೆಂದು ಶಪಥ ಮಾಡಿಕೊಳ್ಳಿ.

೩೪೩. "ಬಟ್ಟೆಯಲ್ಲಿ ಹೊನ್ನು ವಸ್ತ್ರ ಬಿದ್ದಿದ್ದರೆ, ನಾನು ಕೈಮುಟ್ಟಿ ಎತ್ತಿದೆನಾದಡೆ ನಿಮ್ಮಾಣೆ, ನಿಮ್ಮ ಪ್ರಮಥರಾಣೆ. ಅದೇನು ಕಾರಣವೆಂದಡೆ, ನೀವಿಕ್ಕಿದ ಭಿಕ್ಷೆಯಲ್ಲಿಪ್ಪೆನಾಗಿ. ಇಂತಲ್ಲದೆ ನಾನು ಅಳಿಮನವಮಾಡಿ, ಪರದ್ರವ್ಯಕ್ಕೆ ಆಶೆ ಮಾಡಿದೆನಾದಡೆ ನೀನಾಗಲೇ ಎನ್ನ ನರಕದಲದ್ದಿ ನೀನೆದ್ದು ಹೋಗಾ ಶಂಭು ಜಕ್ಕೇಶ್ವರಾ"

---

೩೩೯-೩೪೧. ವ. ಶಾ. ಸಾ. ಭಾಗ ೧ (ಪೂ.) ಪುಟ ೧೪೩. ೩೪೨. ಪ್ರ. ದೇ. ಪುಟ ೪೭.
೩೪೩. ವ. ಶಾ. ಸಾ. ಭಾಗ ೧ (ಪೂ.) ಪುಟ ೧೩೧.

ಕಳ್ಳತನದಿಂದ ತಂದ ದ್ರವ್ಯವನ್ನು ಒಪ್ಪಿಸಿದರೆ ಪರಮಾತ್ಮ ಮೆಚ್ಚುವುದಿಲ್ಲ. ಆ ದ್ರವ್ಯದಿಂದ ಪೂಜಾಸಾಮಗ್ರಿಗಳನ್ನು ತಂದು ಪೂಜಿಸಿದರೂ ಒಲಿಯುವುದಿಲ್ಲ.

೩೩೪. "ತೊರೆಯ ಮಿಾವಣ್ಣಗಳಿರಾ, ತೊರೆಯಿರೋ ಪರಧನವ! ಪರದ್ರವ್ಯವ ಬಿಡದೆ ಹೋಗಿ ತೊರೆಯಲ್ಲಿ ಮಿಂದರೆ, ಆ ತೊರೆ ಎಲ್ಲ ಬರುದೊರೆ ಕಂಡಯ್ಯ! ಕಳವ ತೊರೆದು ಮಿಂದರೆ ಒಲಿದು ಕೂಡಿಕೊಂಬ ನಮ್ಮ ಕೂಡಲ ಸಂಗಮ ದೇವ"

೩೩೫. "ಕುಳಿತಿದ್ದು ಲಿಂಗವ ಪೂಜಿಸಿ ಅಲ್ಲದಾಟವನಾಡುವರಯ್ಯ! ಬೆಳ್ಳಿತ್ತಿನ ಮಠೆಯಲ್ಲಿದ್ದು ಹುಲ್ಲೆಗಂಬ ತೊಡುವಂತೆ, ಕಳ್ಳ ಹಾದರಿಗರ ಕಯ್ಯಲು ಪೂಜೆಯ ಕೊಳ್ಳ ನಮ್ಮ ಕೂಡಲ ಸಂಗಮ ದೇವ"

ಪರರ ಹೊನ್ನು ಮಣ್ಣುಗಳ ಆಸೆ ಬಿಟ್ಟಂತೆ ಪರಸ್ತ್ರೀಯಾಸೆಯನ್ನೂ ಬಿಡಬೇಕು; ಇಲ್ಲದಿದ್ದರೆ ನರಕಕ್ಕೆ ಹೋಗುವುದು ತಪ್ಪದು.

೩೩೬. "ನೋಡಲಾಗದು, ನುಡಿಸಲಾಗದು, ಪರಸ್ತ್ರೀಯರ ಬೇಟ ಬೇಡ ಕಾಣಿರೋ. ತಗರ ಬೆನ್ನಿನಲ್ಲಿ ಹರಿವ ಸೊಣಗನಂತೆ ಬೇಡ ಕಾಣಿರೊ. ಒಂದಾಸೆಗೆ ಸಾಸಿರ ವರುಷ ನರಕದಲ್ಲಿಕ್ಕುವ ಕೂಡಲ ಸಂಗಮ ದೇವಯ್ಯ"

೩೩೭. "ಗಂಡನುಳ್ಳಮ್ಮನ ಗೌರಿ ಎಂದು ಕಂಡಡೆ ಭೂಮಂಡಲಕ್ಕೆ ಅರಸಾಗಿ ಪುಟ್ಟುವನಾತನು. ಗಂಡನುಳ್ಳಮ್ಮನ ಕಂಡು ಒಡವೆರೆದಾತ ನರಕದಲ್ಲಿ ದಿಂಡುಗೆಡೆದಿಪ್ಪನ್ನೆ ರಾಮನಾಥಾ"

ಪರಸ್ತ್ರೀಯ ಬೇಟವೆಂಬುದು ಮಹಾಪಾತಕ. ಎಂಥ ಬಲಿಷ್ಠನಾದರೂ ಅವನ ಪ್ರಾಣವನ್ನು ಕೊಳ್ಳದೆ ಬಿಡದು. ರಾವಣಾಸುರನು ಸಾಮಾನ್ಯನಲ್ಲ; ಚತುರ್ವೇದ ಪಾರಂಗತ, ದೊಡ್ಡ ಶಿವಭಕ್ತ ಮಹಾ ಪ್ರತಾಪಶಾಲಿಯಾದ ಚಕ್ರವರ್ತಿ, ಮೂರು ಲೋಕಗಳನ್ನೂ ಗೆದ್ದ ಮಹಾವೀರ. ಅವನಿಗೆ ಯಾವುದರಲ್ಲಿ ಕಡಮೆ? ಅವನಿಗೆ ಆದ ಗತಿಯಿಂದ ಎಚ್ಚರಿಕೆ ಪಡೆಯಿರಿ.

---

೩೩೪. ವ. ಶಾ. ಸಾ. ಭಾಗ ೧ (ಪೂ.) ಪುಟ ೧೩೧. ೩೩೫. ಬ. ವ. ಪುಟ ೯೮.
೩೩೬. ಬ. ವ. ಪುಟ ೯೮. ೩೩೭. ವ. ಶಾ. ಸಾ. ಭಾಗ ೧ (ಪೂ.). ಪುಟ ೧೪೪.

(೩೩೭) "ಹರಿವ ಹಾವಿಂಗಂಜೆ, ಉರಿಯ ನಾಲಗೆಗಂಜೆ, ಸುರಗಿಯ ಮೊನೆಗಂಜೆ, ಒಂದಕ್ಕಂಜುವೆ, ಒಂದಕ್ಕಳುಕುವೆ. ಪರಸ್ತ್ರೀ ಎಂಬ ಜೂಜಿಂಗಂಜುವೆ. ಮುನ್ನಂಜದ ರಾವಣ ಏ ವಿಧಿಗೊಳಗಾದ? ಅಂಜುವೆನಯ್ಯಾ ಕೂಡಲ ಸಂಗಮ ದೇವಾ"

೩೩೮. "ಅಸುರನೈಶ್ವರ್ಯವನೆಣಿಸುವರೆ, ಸೀತೆಗೆ ಸರಿಮಿಗಿಲೆನಿಸುವರೆಂಟುಕೋಟಿ ಸತಿನಂತೆಯರು; ಶಿರಃಪ್ರಧಾನರೆಂಟು ಕೋಟಿ, ಲೆಕ್ಕವಿಲ್ಲದ ದಳವು, ಲಕ್ಷ ಕುಮಾರರು; ದಿಕ್ಪಾಲಕರವನ ಮನೆಯ ಬಂಧನದಲ್ಲಿಪ್ಪರು; ಸುರಸತಿಯರ ನೆಲ್ಲರನಾತ ಸೆರೆಸೂಡಿ ಆಳಿದ. ಶಿವನೇ, ನೀನು ಕರುಣಿಸಿದಂತಿರದೆ, ಪರ ವಧುವಿನ ಬೇಟವವನ ಪ್ರಾಣವ ಕೊಂದಿತ್ತು. ಇದನರಿತು ಪರವಧುವಿಗೆಳಸುವವರ ಕಂಡು ಗರುಡನ ಕಂಡ ಸರ್ಪ ಧರೆಗಿಳಿವಂತೆ ಅಡಗಿಪ್ಪೆನೈ ಕೂಡಲ ಸಂಗಮ ದೇವಾ"

ಪ್ರಾಣಿಹಿಂಸೆ ಮಾಡಬಾರದು, ಸಕಲ ಜೀವಿಗಳಲ್ಲಿಯೂ ದಯೆಯನ್ನು ತೋರಬೇಕು ಎಂದು ವಚನಧರ್ಮ ಹೇಳುತ್ತದೆ.

೩೩೯. "ದಯವಿಲ್ಲದ ಧರ್ಮವದಾವುದಯ್ಯಾ; ದಯವೇ ಬೇಕು ಸಕಲ ಪ್ರಾಣಿಗಳೆಲ್ಲರಲ್ಲಿ. ದಯವೇ ಧರ್ಮದ ಮೂಲವಯ್ಯಾ. ಕೂಡಲ ಸಂಗಯ್ಯನಂತಲ್ಲದೊಲ್ಲನಯ್ಯಾ"

ಒಡಲಿಚ್ಛೆಗಾಗಿ ಪ್ರಾಣಿಗಳನ್ನು ಕೊಂದು ಅಡಗನ್ನು ತಿನ್ನುವುದು ಮಹಾಪಾಪ. ನಮಗೆ ಹೇಗೆ ಪ್ರಾಣದಾಸೆಯಿರುತ್ತದೆಯೋ ಹಾಗೆಯೇ ಆ ಜೀವ ಜಂತುಗಳಿಗೂ ಇರುವುದಲ್ಲವೆ? ಆ ಮೂಕ ಪ್ರಾಣಿಗಳ ಮೊರೆಯನ್ನು ಕಟುಕನು ಕೇಳದಿದ್ದರೂ ಪರಮಾತ್ಮನರಿಯನೆ? ಹಾಗೆ ಕೊಲೆಮಾಡಿದವನನ್ನು ನರಕದಲ್ಲಿಕ್ಕದೇ ಹೋಗುವನೆ?

೩೪೦. "ಬೆಟ್ಟದ ಮೇಲಣ ಗಿಡಗಳು ಬೆಟ್ಟವ ಮುಟ್ಟದಂತಿಪ್ಪವೇ? ವಿವರಿಸಿ ನೋಡಿದಡೆ, ಸೃಷ್ಟಿಯೊಳಗಣ ಪ್ರಾಣಿಗಳು ಪರಮನ ಮುಟ್ಟದಿಪ್ಪವೇ? ಕಷ್ಟರು ಬೇಡವೆಂದು ಬಿಟ್ಟೋಡುತಿಪ್ಪ ಪ್ರಾಣಿಗಳನಟ್ಟಿ, ಪಿಡಿದು ಕೊಂದರೆ, ಪ್ರತಿಷ್ಠಿಸಿದೀಶ್ವರ ಇಕ್ಕದಿರ್ಪನೇ ನರಕದಲ್ಲಿ? ಸಕಲ ಪ್ರಾಣಿಗಳಲ್ಲಿ ಮೇಲಾರೈಕೆ ನಮ್ಮ ಸಕಳೇಶ್ವರ ದೇವನಲ್ಲದೆ ಮತ್ತೊಬ್ಬರುಂಟೆ"

---

೩೩೮. ವ. ಶಾ. ಸಾ. ಭಾಗ ೧ (ಪೂ.) ಪುಟ ೧೪೯.

೩೩೯. ಬ. ವ. ಪುಟ ೩೭. ೩೪೦. ವ. ಶಾ. ಸಾ. ಭಾಗ ೧ (ಪೂ.) ಪುಟ ೧೩೧.

ಆದುದರಿಂದ ಜೀವಹಿಂಸೆಯನ್ನು ಯಾವ ನೆಪದಲ್ಲಿ ಮಾಡಿದರೂ ಪಾಪವೇ; ನರಕಕ್ಕೆ ಹೋಗುವುದು ತಪ್ಪದು. ಬೌದ್ಧ ಮತ್ತು ಜೈನ ಧರ್ಮಗಳಂತೆ ವಚನಧರ್ಮ "ಅಹಿಂಸಾ ಪರಮೋಧರ್ಮಃ" ಎಂಬುದನ್ನು ಎತ್ತಿಹಿಡಿದು ಯಜ್ಞಯಾಗಗಳನ್ನು ಒಪ್ಪುವ ವೇದಮತವನ್ನು ಇಲ್ಲಿ ವಿರೋಧಿಸುತ್ತದೆ.

೩೪೧. "ಎಲ್ಲವನರಿವಲ್ಲಿ ಕಡೆಯಲ್ಲಿ ಕೊಲ್ಲಬೇಕೆಂಬುದೊಂದು ಭೇದ ಉಂಟೇ? ಶಾಸ್ತ್ರವನೆಲ್ಲ ಕಲಿತಲ್ಲಿ ಗೆಲ್ಲ ಸೋಲಕ್ಕೆ ಹೋರಬೇಕೆಂಬುದು ಕಡೆಯಲ್ಲಿ ಒಂದು ಸೊಲ್ಲುಂಟೇ? ಪುರಾಣವನೆಲ್ಲವನೋದಿದಲ್ಲಿ, ಸರ್ವಜೀವವ ಕೊಲ್ಲು, ಕೊರೆ ಎಂಬುದೊಂದು ದಳ್ಳುರಿಯುಂಟೇ? ಶ್ರುತಿಯ ಕೇಳುವಲ್ಲಿ, ಸ್ಮೃತಿಯುನಂಗೀಕರಿಸುವಲ್ಲಿ, ಸರ್ವಹತವ ಮಾಡಬೇಕೆಂಬುದೊಂದು ಗತಿಯುಂಟೇ? ಇಂತೀ ಆತ್ಮನಲ್ಲಿ ಸರ್ವಭೂತಹಿತವುಳ್ಳವ ಆತ ಅತೀತ, ಸ್ವಯವಸ್ತು ದಸರೇಶ್ವರ ಲಿಂಗವು"

೩೪೨. ನಿಮ್ಮ ವಚನ ಎನ್ನ ಪುಣ್ಯ ಎಂಬುದು ಹುಸಿಯಾಯಿತ್ತು ನೋಡಾ. ಶಾಸ್ತ್ರದ ವಚನ ಹೋತಿಂಗೆ ಮಾರಿ. ಎಂತು ನಂಬುವೆನಯ್ಯ? ನಾನು ಕೊಲ್ಲೆ ನೇಣು ಕೊಲ್ಲಿತ್ತೆಂಬ ನೇಣು ಸೂನಿಗರ ಮೆಚ್ಚ ನಮ್ಮ ಕೂಡಲ ಸಂಗಮ ದೇವ"

೩೪೩. "ಮಾತಿನ ಮಾತಿಂಗೆ ನಿನ್ನ ಕೊಂದಿಹರೆಂದು, ಎಲೇ ಹೋತೇ ಅಳು ಕಂಡೆಯಾ. ವೇದವನೋದಿದವರ ಮುಂದೆ ಅಳು ಕಂಡೆಯಾ ಹೋತೇ. ಶಾಸ್ತ್ರವ ಕೇಳಿದವರ ಮುಂದೆ ಅಳು ಕಂಡೆಯಾ ಹೋತೇ. ನೀನತ್ತುದಕ್ಕೆ ತಕ್ಕದ್ದು ಮಾಡುವ ಕೂಡಲ ಸಂಗಮ ದೇವನವರ"

ವಚನಧರ್ಮ ಹೀಗೆ ಯಜ್ಞಯಾಗಗಳನ್ನು ಪ್ರತಿಭಟಿಸಿ "ವೇದವೆಂಬುದು ನಿಮಗೆ ತಿಳಿಯದು" ಎಂದು ಬ್ರಾಹ್ಮಣರನ್ನು ಆಕ್ಷೇಪಿಸುತ್ತಿದ್ದಾಗ ಅವರು ವಾದಕ್ಕೆ ಕರೆದಿರಬಹುದೆಂದು ತೋರುತ್ತದೆ. ಆದರೆ ಅವರೊಡನೆ ಬಸವಣ್ಣನವರು ವಾದಿಸಿದಂತೆ ತೋರುವುದಿಲ್ಲ.

---

೩೪೧. ವ. ಶಾ. ಸಾ. ಭಾಗ ೧ (ಪೂ.) ಪುಟ ೧೩೨.

೩೪೨–೩. ಬ. ವ. ಪುಟ ೮೫, ೮೬.

೩೪೪. "ಇಟ್ಟಿಯ ಹಣ್ಣ ನರಿ ತಿಂದು ಸೃಷ್ಟಿ ತಿರುಗಿತೆಂಬಂತೆ, ಮುಟ್ಟಿಯನಿಟ್ಟ ದ್ವಿಜರ ಮಾತೇಕೋ? ಹಗಲು ಕಾಣದ ಗೂಗೆ ಇರುಳಾಯಿತೆಂದರೆ, ಜಗಕ್ಕೆ ಇರುಳಪ್ಪುದೇ ಮರುಳೇ? ಹೋಮದ ನೇಮದಲ್ಲಿ ಹೋತವ ಕೊಂದು ತಿಂಬ ಅನಾಮಿಕರೊಡನಾಡಿ ಗೆಲ್ಲುವುದೇನು ಕೂಡಲ ಸಂಗಮ ದೇವಾ"

ಎಂದು ಅವರು ತಿರಸ್ಕಾರಭಾವವನ್ನು ಸೂಚಿಸಿದ್ದಾರೆ. ಯಜ್ಞಯಾಗಗಳ ಪ್ರಾಬಲ್ಯ ಕ್ರಿ. ಶ. ಹತ್ತನೆಯ ಶತಮಾನದ ಹೊತ್ತಿಗೆ ಬಹಳ ಮಟ್ಟಿಗೆ ಕಡಮೆಯಾಗಿದ್ದಿರಬೇಕೆಂದು ತೋರುತ್ತದೆ. ಬೌದ್ಧ ಮತ್ತು ಜೈನ ಮತಗಳ ದಾಳಿಯೊಂದು ಕಡೆ; ತಮಿಳು ನಾಡಿನಲ್ಲಿ ಶೈವಭಕ್ತಿಪಂಥ ತಲೆಯೆತ್ತಿದ್ದು ಇನ್ನೊಂದು ಕಡೆ; ಕಾಶ್ಮೀರ ಶೈವ, ಶಂಕರಾಚಾರ್ಯರ ಅದ್ವೈತ ಮೊದಲಾದುವು ಹರಡಿದ್ದು ಮತ್ತೊಂದು ಕಡೆ,—ಈ ಎಲ್ಲ ಆಘಾತಗಳ ಫಲವಾಗಿ ಯಜ್ಞಯಾಗಗಳು ಹಿಂದಕ್ಕೆ ಬಿದ್ದಿರಬೇಕು. ಆ ತರುವಾಯ ರಾಮಾನುಜಾಚಾರ್ಯರಿಂದಲೂ ಮಧ್ವಾಚಾರ್ಯರಿಂದಲೂ ವೈಷ್ಣವ ಭಕ್ತಿಪ್ರವಾಹ ನಾಡಿನಲ್ಲೆಲ್ಲ ಹರಿಯ ತೊಡಗಿತು. ಇದರಲ್ಲಿಯೂ ಯಜ್ಞಯಾಗಗಳಿಗೆ ಪ್ರಾಶಸ್ತ್ಯ ದೊರೆಯಲಿಲ್ಲ. ಸಜೀವ ಪ್ರಾಣಿಗಳನ್ನು ಕೊಲ್ಲುವ ಬದಲು ಪಿಷ್ಟದಲ್ಲಿ ಮಾಡಿದ ಪ್ರಾಣಿಗಳನ್ನು ಕೊಲ್ಲಲು ತೊಡಗಿದರೆಂದು ಕಾಣುತ್ತದೆ. ಪ್ರಾಣಿಹತ್ಯೆಯೇ ಸಂಕಲ್ಪವಾದ್ದರಿಂದ ಈ ಪಿಷ್ಟಪ್ರಾಣಿಗಳ ಹಿಂಸೆಯೂ ಪಾಪಕರವೆಂದು ಜೈನರು * ಅಭಿಪ್ರಾಯಪಟ್ಟಿದ್ದಾರೆ. ವಚನಧರ್ಮದಲ್ಲಿ ಅಹಿಂಸೆಗೆ ಎಷ್ಟೊಂದು ಪ್ರಾಧಾನ್ಯವಿದೆಯೆನ್ನುವುದು ಚೆನ್ನಬಸವೇಶ್ವರನ ಮುಂದಿನ ವಚನದಿಂದ ಗೊತ್ತಾಗುತ್ತದೆ.

೩೪೫. "ಲಿಂಗದ ಗುಣದಿಂದ ಲಿಂಗೈಕ್ಯವೆಂಬರು. ಲಿಂಗದ ಗುಣದಿಂದ ಲಿಂಗೈಕ್ಯವಿಲ್ಲ ನೋಡಾ. ಭಾವಾದ್ವೈತಂ ಪರಹಿತಂ ಕೂಡಲ ಚೆನ್ನಸಂಗಾ ಲಿಂಗೈಕ್ಯವು"

ವಚನಧರ್ಮ ಸತ್ಯವನ್ನೇ ಹೇಳಬೇಕು, ಅಸತ್ಯವನಾಡಬಾರದು ಎಂದು ಬೋಧಿಸುತ್ತದೆ.

೩೪೬. "ದೇವಲೋಕ ಮರ್ತ್ಯಲೋಕವೆಂಬುವು ಬೇರಿಲ್ಲ ಕಾಣ ಭೋ. ಸತ್ಯವ ನುಡಿವುದೇ ದೇವಲೋಕ, ಮಿಥ್ಯವ ನುಡಿವುದೇ ಮರ್ತ್ಯಲೋಕ. ಆಚಾರವೇ ಸ್ವರ್ಗ, ಅನಾಚಾರವೇ ನರಕ. ಇದಕ್ಕೆ ನೀವೇ ಪ್ರಮಾಣ ಕೂಡಲ ಸಂಗಮ ದೇವಾ"

---

೩೪೪. ಬ. ವ. ಪುಟ ೮೬. ೩೪೫. ವ. ಶಾ. ಸಾ. ಭಾಗ ೧ (ಪೂ.) ಪುಟ ೧೩೨.

* ಜನ್ನನ ಯಶೋಧರ ಚರಿತೆ ನೋಡಿ. ೩೪೬. ಬ. ವ. ಪುಟ ೩೬.

೩೪೭. "ಸ್ವಾಮಿ ಭೃತ್ಯಸಂಬಂಧಕ್ಕೆ ಆವುದು ಪಥವೆಂದರೆ, ದಿಟವ ನುಡಿವುದು, ನುಡಿದಂತೆ ನಡೆವುದು. ನುಡಿದು ಹುಸಿವ ನಡೆದು ತಪ್ಪುವ ಪ್ರಪಂಚಿಯನೊಲ್ಲ ಕೂಡಲ ಸಂಗಮ ದೇವ"

೩೪೮. "..................ಹುಸಿ ಎಂಬುದು ಹೊಲೆ. ಶಿವಭಕ್ತಂಗೆ ಹುಸಿ ಎಂಬುದುಂಟೇ ಅಯ್ಯ? ಹುಸಿಯನಾಡಿ ಲಿಂಗವ ಪೂಜಿಸಿದಡೆ ಹೊಳ್ಳ ಬಿತ್ತಿ ಫಲವನರಸುವಂತೆ ಕಾಣಾ ಚೆನ್ನಮಲ್ಲಿಕಾರ್ಜುನಾ"

ಲೋಭಿಯಾಗಿರದೆ ಸ್ವಾರ್ಥವನ್ನು ಗಳಿಸದೆ ದಾನಮಾಡಿ; ಇತರರ ಕಷ್ಟಸಂಕಟಗಳಲ್ಲಿ ನೆರವಾಗಿ ಎಂದು ವಚನಧರ್ಮ ಸಾರುತ್ತದೆ. ತಾನು ಗಟ್ಟಿಮುಟ್ಟಾಗಿದ್ದು ಸಂಪಾದಿಸುತ್ತಿದ್ದಾಗ, ಇತರರಿಗೊಂದು ಉಪಕಾರವನ್ನೂ ಮಾಡದೆ ಪ್ರಾಣಹೋಗುವ ಕಾಲದಲ್ಲಿ 'ಶಿವಶಿವಾ! ಹರಹರಾ!' ಎಂದು ಭಗವಂತನನ್ನು ನೆನೆದರೆ, ಯಾವ ಫಲವೂ ಉಂಟಾಗುವುದಿಲ್ಲವೆಂದು ವಚನಕಾರರು ಅಭಿಪ್ರಾಯಪಡುತ್ತಾರೆ. ಮಾಡಿದ ದುಷ್ಕರ್ಮವನ್ನು ಅನುಭವಿಸಲೆಂದು ಬಿಡುವನಲ್ಲದೆ ಆ ಕಡುಲೋಭಿಯನ್ನು ದೇವರು ಕೈಲಾಸಕ್ಕೊಯ್ಯುವುದಿಲ್ಲ.

೩೪೯. "ಉಂಬಾಗಳಿಲ್ಲೆಂಬ, ಉಡುವಾಗಳಿಲ್ಲೆಂಬ, ಬಂಧುಗಳು ಬಂದಾಗಳಿಲ್ಲೆಂಬ, ಲಿಂಗಕ್ಕೆ ಇಲ್ಲೆಂಬ, ಜಂಗಮಕ್ಕೆ ಇಲ್ಲೆಂಬ, ಬಂದ ಪುರಾತನರಿಗೆ ಇಲ್ಲೆಂಬ, ಸಾವಾಗ ದೇಹವನು ದೇಗುಲಕೆ ಒಯ್ಯೆಂಬ, ದೇವರಿಗೆ ಹೆಣ ಬಿಟ್ಟಿ ಹೇಳಿತ್ತೆ ಕೂಡಲ ಸಂಗಮ ದೇವಾ"

ಏಕೆ ಇಷ್ಟು ದುರಾಸೆ? ಏಕೆ ಒಬ್ಬರಿಗೆ ಒಂದಿಷ್ಟು ಕೊಡದೆ ಇರುವುದು? ಅದು ಕೇವಲ ಸ್ವಾರ್ಥ; ತಾನು ತನ್ನ ಹೆಂಡಿರು ಮಕ್ಕಳು ಬದುಕ ಬೇಕೆಂಬ ಇಚ್ಛೆ; ಆದರೆ ತಾನು ಮಾಡಿದ ಕರ್ಮ ತನ್ನ ಬೆನ್ನಹತ್ತುವುದಲ್ಲದೆ ಹೆಂಡಿರು ಮಕ್ಕಳು ಬೆನ್ನು ಹತ್ತುವರೇ? ಇದನ್ನು ಆಲೋಚಿಸಿ.

---

೩೪೭. ಬ. ವ. ಪುಟ ೩೭.

೩೪೮. ವ. ಶಾ. ಸಾ. ಭಾಗ ೧ (ಪೂ.) ಪುಟ ೧೩೦.

೩೪೯. ಬ. ವ. ಪುಟ ೩೩.

೪೫೦. "ಮಡದಿ, ಮಕ್ಕಳು, ಪಡೆದ ದ್ರವ್ಯವು, ಎನ್ನೊಡವೆ ಎಂದು ನೆಚ್ಚಬೇಡಿರೋ. ಎಲೆ ಹುಚ್ಚು ಮಾನವರಿರಾ, ಅವು ನಿಮ್ಮೊಡವೆಯಾದಡೆ, ನೀವು ಮಡಿದು ಹೋಗುವಾಗ್ಗೆ, ನಿಮ್ಮೊಡನೆ ಬಪ್ಪವೇ ಹೇಳಿರೋ? ಇದನರಿತು ತಡೆಯದೆ ಮೃಡನ ಸೇವೆಯೊಳು ತೊಡಗಿದರೆ, ಕಡೆ ಮೊದಲಿಲ್ಲದ ಪದವು ದೊರೆಕೊಂಬುದು ನೋಡಾ, ನಮ್ಮ ಅಖಂಡೇಶ್ವರ ಲಿಂಗದಲ್ಲಿ"

೪೫೧. "ಚಂದ್ರೋದಯಕ್ಕೆ ಅಂಬುಧಿ ಹೆಚ್ಚುವುದಯ್ಯ! ಚಂದ್ರ ಕುಂದೆ, ಕುಂದುವುದಯ್ಯ! ಚಂದ್ರಂಗೆ ರಾಹು ಅಡ್ಡಬಂದಲ್ಲಿ, ಅಂಬುಧಿ ಬೊಬ್ಬಿಟ್ಟಿತ್ತೆ? ಅಂಬುಧಿಯ ಮುನಿ ಆಪೋಶನವ ಕೊಂಬಲ್ಲಿ, ಚಂದ್ರಮನಡ್ಡಬಂದನೆ? ಆರಿಗಾರು ಇಲ್ಲ, ಕೆಟ್ಟವಂಗೆ ಕೆಳೆಯಿಲ್ಲ. ಜಗದ ನಂಟ ನೀನೇ ಅಯ್ಯ ಕೂಡಲ ಸಂಗಮದೇವಾ"

ಆದುದರಿಂದ ಪಾತ್ರವರಿತು ದಾನಮಾಡಿ; ದಾನಮಾಡಿದಷ್ಟು ದೇವ ಕೊಡುವನು.

೪೫೨. "ಮಾಡುವ ಭಕ್ತಂಗೆಯೂ ಕೊಡುವ ದೇವಂಗೆಯೂ ಎಂದೆಂದಿಗೂ ಕೇಡಿಲ್ಲ. ಮಾಡಿ ಭೋ, ಮಾಡಿ ಭೋ, ಎಲ್ಲವೂ ಸವೆಯಿತ್ತು ಹೋಯಿತ್ತು ಎಂಬ ಚಿಂತೆ ಸಂತೋಷವಿಲ್ಲದೆ ಮಾಡಿ ಭೋ ನಮ್ಮ ಸಕಳೇಶ್ವರ ದೇವನರಿದು ಸಲಹುವನಾಗಿ"

ಆದರೆ ಈ ತಿಳಿವಳಿಕೆಯನ್ನು ಯಾರು ಕೊಟ್ಟರೂ ಲೋಭಿ ಕೇಳಲೊಲ್ಲನು. ಲೋಭಿಗೆ ಬುದ್ಧಿ ಬರಬೇಕಾದರೆ ಇರುವ ದ್ರವ್ಯ ನಾಶವಾಗಿ ಬಡತನ ಬರಬೇಕು. ತಾನು ಉಣಲಿಲ್ಲ, ಪರರಿಗೆ ಕೊಡಲಿಲ್ಲ; ತನಗೆ ಇಹವಿಲ್ಲ ಪರವಿಲ್ಲ ಎಂದು ಆಗ ಗೋಳಾಡುವನು.

೪೫೩. "ನಿಲ್ಲಿಸಬಹುದಯ್ಯ ಒಂದೇ ಮಂತ್ರದಿಂದ ಕಾಳೋರಗನ. ನಿಲ್ಲಿಸಬಹುದಯ್ಯ ಒಂದೇ ಮಂತ್ರದಿಂದ ಪಾರುವ ಪಕ್ಷಿಯ. ನಿಲ್ಲಿಸಬಹುದಯ್ಯ ಒಂದೇ ಮಂತ್ರದಿಂದ ಹೆಬ್ಬುಲಿಯ. ನಿಲ್ಲಿಸಬಹುದಯ್ಯ ಒಂದೇ ಮಂತ್ರದಿಂದ ಮೃತ್ಯುವೆಂಬ ಹೆಮ್ಮಾರಿಯ. ಲೋಭವೆಂಬ ಗ್ರಹ ಹಿಡಿದವರ ಏತರಿಂದಲೂ ಬಿಡಿಸಲಾಗದು.

---

೪೫೦. ವ. ಶಾ. ಸಾ. ಭಾಗ ೧ (ಪೂ.) ಪುಟ ೧೫೫. ೪೫೧. ಬ. ವ. ಪುಟ ೫.
೪೫೨. ವ. ಶಾ. ಸಾ. ಭಾಗ ೧ (ಪೂ.) ಪುಟ ೧೫೪.
೪೫೩. ವ. ಶಾ. ಸಾ. ಭಾಗ ೧ (ಪೂ.) ಪುಟ ೧೫೬.

ಈ ಲೋಭಕ್ಕೆ ದರಿದ್ರವೇ ಔಷಧ. ಹೇಳಿದರೆ ಕೇಳರು, ತಾವು ತಿಳಿಯರು; ಶಾಸ್ತ್ರವ ನೋಡರು, ಭಕ್ತಿಯ ಹಿಡಿಯರು. ಇಂತಹ ಗೊಡ್ಡುಮೂಳ ಹೊಲೆಯರಿಗೆ ಕರ್ಮವೆಂಬ ಶರಧಿಯಲ್ಲಿ ಬಿದ್ದು ಉರುಳಾಡುವುವೇ ಸತ್ಯವೆಂದಾತ ನಮ್ಮ ಅಂಬಿಗರ ಚೌಡಯ್ಯ"

೩೫೪. "ಹಾವ ತಿಂದವರ ನುಡಿಸಬಹುದು. ಗರ ಹೊಡೆದವರ ನುಡಿಸಲು ಬಹುದು. ಸಿರಿಗರ ಹೊಡೆದವರ ನುಡಿಸಲು ಬಾರದು. ನೋಡಯ್ಯ! ಬಡತನವೆಂಬ ಮಂತ್ರವಾದಿ ಹೋಗಲು ಒಡನೆ ನುಡಿವರಯ್ಯಾ, ಕೂಡಲ ಸಂಗಮ ದೇವಾ"

ಐಶ್ವರ್ಯ ಈ ಜನ್ಮದಲ್ಲಿ ಲಭಿಸಿದ್ದರೆ ಅದನ್ನು ಕೊಟ್ಟಿರುವವನು ಆ ಭಗವಂತ. ಆತನೇನಾದರೂ ಸ್ವಲ್ಪ ಕೈಬಿಟ್ಟರೆ ಇದ್ದ ಐಶ್ವರ್ಯವೆಲ್ಲ ಒಂದೇ ಗಳಿಗೆಯಲ್ಲಿ ನಾಶವಾಗುತ್ತದೆ. ಆದುದರಿಂದ ಐಹಿಕದ ಭೋಗಕ್ಕೂ ಭಗವಂತನ ಒಲುಮೆಯನ್ನು ಸಂಪಾದಿಸಬೇಕು.

೩೫೫. ಹರಸೀವ ಕಾಲಕ್ಕೆ ಸಿರಿ ಬೆನ್ನಲ್ಲಿ ಬಕ್ಕು. ಹರಿದು ಹೆದ್ದೊರೆ ಕೆರೆಯ ತುಂಬಿದಂತಯ್ಯ ನೆರೆಯದ ವಸ್ತು ನೆರೆವುದು ನೋಡಯ್ಯ. ಅರಸು, ಪರಿವಾರ, ಕೈವಾರ ನೋಡಯ್ಯ. ಪರಮ ನಿರಂಜನನು ಮರೆವ ಕಾಲಕ್ಕೆ ತುಂಬಿದ ಹರವಿಯ ಕಲ್ಲು ಕೊಂಡಂತೆ ಕೂಡಲ ಸಂಗಮ ದೇವ"

ಆದುದರಿಂದ ಐಶ್ವರ್ಯವಿದ್ದಾಗ ಭಗವಂತನನ್ನು ಮರೆಯದೆ ಸತ್ಪಾತ್ರದಲ್ಲಿ ದಾನಮಾಡಿ; 'ಶಿವನೊಡವೆಯ ಶಿವನಿಗೊಪ್ಪಿಸಿ;' ಗುರು ಲಿಂಗ ಜಂಗಮದಲ್ಲಿ ಭಕ್ತಿಯನ್ನು ತೋರಿಸಿ; ಎಲ್ಲವೂ ಪರಮಾತ್ಮನ ಅನುಗ್ರಹವೆಂದು ತಿಳಿಯಿರಿ. ಐಶ್ವರ್ಯ ಮದದಿಂದ ಮುಂದುಗಾಣದೆ ಸದ್ಗುಣವನ್ನು ಬೆಳಸದೆ ಪರಮಾತ್ಮನ ಅನುಗ್ರಹವೆಂಬುದನ್ನು ಮರೆತರೆ ನರಕಕ್ಕೆ ಹೋಗುವಿರಲ್ಲದೆ ಸದ್ಗತಿಯಿಲ್ಲ.

೩೫೬. "ಆನೆಯನೇರಿಕೊಂಡು ಹೋದಿರಿ ನೀವು, ಕುದುರೆಯನೇರಿಕೊಂಡು ಹೋದಿರಿ ನೀವು, ಕುಂಕುಮ ಕಸ್ತೂರಿಯ ಪೂಸಿಕೊಂಡು ಹೋದಿರೋ ಅಣ್ಣ! ಸದ್ಗುಣವೆಂಬ ಫಲವ ಬಿತ್ತದೆ ಬೆಳೆಯದೆ ಹೋದಿರಲ್ಲಾ! ಅಹಂಕಾರವೆಂಬ ಮದಗಜವನೇರಿ ಮೂವಿಧಿಗೆ ಗುರಿಯಾಗಿ ಕೆಟ್ಟುಹೋದಿರಲ್ಲಾ! ನಮ್ಮ ಕೂಡಲ ಸಂಗಮ ದೇವರನರಿಯದೆ ನರಕಕ್ಕೆ ಭಾಜನರಾದಿರಲ್ಲಾ"

---

೩೫೪–೬. ಬ. ವ. ಪುಟ ೨೦, ೨೬, ೯೭.

ಅಹಂಕಾರವೆಂಬ ಮದಗಜದ ಮೇಲೆ ಕುಳಿತವರು, ಇಂದ್ರಿಯಗಳೆಂಬ ಕುದುರೆಗಳಿಗೆ ಅಧೀನರಾಗಿ ಹೋದವರು, ರಾಗದ್ವೇಷಾದಿಗಳ ಲೇಪನವುಳ್ಳವರು, ಎಂದಿಗಾದರೂ ಸದ್ಗತಿಯನ್ನು ಪಡೆಯುವುದುಂಟೆ? ಇನ್ನು ನರಕಕ್ಕೆ ಭಾಜನರಾಗದೆ ಮತ್ತೆ ಏನಾದಾರು?

ಕೋಪ ತಾಪಗಳನ್ನು ಬಿಡಬೇಕು, ನಡೆನುಡಿಗಳಲ್ಲಿ ನಯವಿನಯಗಳಿರಬೇಕು, ನಯವಿನಯಗಳಿಂದ ಪರಮಾತ್ಮನೊಲುಮೆ ಕೈಗೂಡಿ ಸದ್ಗತಿಯುಂಟಾಗುವುದು ಎಂದು ವಚನಧರ್ಮ ಹೇಳುತ್ತದೆ.

೩೫೭. "ತನಗೆ ಮುನಿವರಿಗೆ ತಾ ಮುನಿಯಲೇಕಯ್ಯ? ಅವರಿಗಾದಡೇನು? ತನಗಾದಡೇನು? ತನುವಿನ ಕೋಪ ತನ್ನ ಹಿರಿಯತನದ ಕೇಡು, ಮನದ ಕೋಪ ತನ್ನ ಅರುವಿನ ಕೇಡು. ಮನೆಯೊಳಗಣ ಕಿಚ್ಚು ಮನೆಯ ಸುಟ್ಟಲ್ಲದೆ, ನೆರೆಮನೆ ಬೇವುದೇ ಕೂಡಲ ಸಂಗಮ ದೇವ"

೩೫೮. "........ಮೃದುವಚನವೇ ಸಕಲ ತಪಂಗಳಯ್ಯ. ಮೃದು ವಚನವೇ ಸಕಲ ಜಪಂಗಳಯ್ಯ. ಸದುವಿನಯವೇ ಸದಾಶಿವನ ಒಲುಮೆಯಯ್ಯ. ಕೂಡಲ ಸಂಗಮ ದೇವಯ್ಯನಂತಲ್ಲದೊಲ್ಲನಯ್ಯ"

೩೫೯. "ಇತ್ತ ಬಾರಯ್ಯ ಇತ್ತ ಬಾರಯ್ಯ ಎಂದು ಭಕ್ತರೆಲ್ಲರು ಕೂರ್ತು ಹತ್ತೆ ಕರೆವುತ್ತಿರಲು, ಮತ್ತೆ ಕೆಲಕೆ ಹೋಗಿ, ಶರಣೆಂದು ಹಸ್ತಬಾಯನೆ ಮುಚ್ಚಿ, ಕಿರಿದಾಗಿ ಭೃತ್ಯಾಚಾರವ ನುಡಿದು, ವಿನಯ ಧ್ಯಾನ ಉಳ್ಳಡೆ ಎತ್ತಿಕೊಂಬನಯ್ಯ ಕೂಡಲ ಸಂಗಮ ದೇವ ಪ್ರಮಥರ ಮುಂದೆ"

ಅನ್ಯರ ಮನಸ್ಸನ್ನು ನೋಯಿಸಬಾರದು. ನಮಗೆ ತಿಳಿಯದೆಯೇ ನಮ್ಮ ಬಾಯಿಯಿಂದ ಒರಟು ಮಾತುಗಳು ಬರಬಹುದು. ನಮಗೆ ತಿಳಿಯದೆಯೇ ಪಾಪರಾಶಿ ಬೆಳೆಯಬಹುದು. ಸ್ವಲ್ಪ ಎಚ್ಚರಿಕೆಯಿದ್ದು ಒಳ್ಳೆಯ ಮಾತನ್ನಾಡಿದರೆ ಪುಣ್ಯ ಬೆಳೆಯುವುದು. ಸ್ವರ್ಗ ನರಕಗಳೆಂಬ ವ್ಯತ್ಯಾಸ ಬಹಳ ಸ್ವಲ್ಪದರಲ್ಲಿದೆ.

---

೩೫೭–೯. ಬ. ವ. ಪುಟ ೩೭, ೩೬, ೩೭.

೩೬೦. "ಪುಣ್ಯಪಾಪಂಗಳೆಂಬುವು ತಮ್ಮ ಇಷ್ಟವು ಕಂಡಿರೇ. ಅಯ್ಯ ಎಂದರೆ ಸ್ವರ್ಗ, ಎಲವೋ ಎಂದರೆ ನರಕ"

ಒಂದು ವೇಳೆ ಬಂದವರಿಗೆ ಏನನ್ನಾದರೂ ಕೊಡಲು ಇಲ್ಲದಿದ್ದರೆ ಒಳ್ಳೆಯ ಮಾತನ್ನಾದರೂ ಆಡಿ, ಒಳ್ಳೆಯ ನಡತೆಯನ್ನಾದರೂ ತೋರಿ ಎಂದು ಬಸವಣ್ಣನವರು ಹೇಳಿದ್ದಾರೆ.

೩೬೧. "ಏನು ಬಂದಿರಿ, ಹದುಳವಿದ್ದಿರಿ, ಎಂದರೆ ನಿಮ್ಮ ಮೈಸಿರಿ ಹಾರಿ ಹೋಹುದೇ? ಕುಳ್ಳಿರಿ ಎಂದರೆ ನೆಲ ಕುಳಿ ಹೋಹುದೇ? ಒಡನೆ ನುಡಿದರೆ ಶಿರ ಹೊಟ್ಟೆ ಒಡೆವುದೇ? ಕೊಡಲಿಲ್ಲದಿದ್ದರೊಂದು ಗುಣವಿಲ್ಲದಿದ್ದರೆ ಮೂಗ ಕೊಯ್ಯದೆ ಮಾಣ್ಬನೇ ಕೂಡಲ ಸಂಗಯ್ಯ"

ಮಾತಿನಲ್ಲಿ ಬಹಳ ಎಚ್ಚರಿಕೆಯಿರಬೇಕು. ಅಳಿವುದು ಉಳಿವುದು ತನ್ನ ವಚನದಿಂದಲೇ, ಅನ್ಯರಿಂದಲ್ಲ ಎಂದು ವಚನಕಾರರು ಬಹಳ ಸೊಗಸಾಗಿ ಹೇಳಿದ್ದಾರೆ.

೩೬೨. "ಹಾವಾಡಿಗ ಹಾವನಾಡಿಸುವಲ್ಲಿ ತನ್ನ ಕಾಯ್ದುಕೊಂಡು ಹಾವನಾಡಿಸುವಂತೆ ಆವ ಮಾತನಾಡಿದಡೂ ತನ್ನ ಕಾಯ್ದು ಆಡಬೇಕು. ಅದೆಂತೆಂದೊಡೆ, ತನ್ನ ವಚನವೇ ತನಗೆ ಹಗೆಯಹುದಾಗಿ. ಅನ್ನಿಗರಿಂದ ಬಂದಿತೆನಬೇಡ. ಅಳಿವುದು ಉಳಿವುದು ತನ್ನ ವಚನದಲ್ಲಿಯೇ ಅದೆ. ನಿಜಗುರು ಸ್ವತಂತ್ರ ಸಿದ್ಧಲಿಂಗೇಶ್ವರಾ ಹಗೆಯೂ ಕೆಳೆಯೂ ತನ್ನ ವಚನವೇ, ಬೇರಿಲ್ಲ"

ಹೀಗೆ ಯಾರು ವಚನಧರ್ಮದಲ್ಲಿರುವ ನೀತಿಗಳನ್ನು ಆಚರಿಸುವರೋ ಆಚರಿಸಿ ಮರ್ತ್ಯಲೋಕದಲ್ಲಿ ಸರಿಯಾಗಿ ಬಾಳುವರೋ ಅವರಿಗೆ ಪರದಲ್ಲಿ ಸದ್ಗತಿಯುಂಟು; ಹಾಗೆ ಬಾಳದವರಿಗೆ ಸದ್ಗತಿಯಿಲ್ಲ.

೩೬೩. "ಮರ್ತ್ಯಲೋಕವೆಂಬುದು ಕರ್ತಾರನ ಕಮ್ಮಟವಯ್ಯ, ಇಲ್ಲಿ ಸಲ್ಲುವರು ಅಲ್ಲಿಯೂ ಸಲ್ಲುವರು. ಇಲ್ಲಿ ಸಲ್ಲದವರು ಅಲ್ಲಿಯೂ ಸಲ್ಲರು ಕೂಡಲ ಸಂಗಮ ದೇವಾ"

---

೩೬೦–೧. ಬ. ವ. ಪುಟ ೩೬.

೩೬೨. ವ. ಶಾ. ಸಾ. ಭಾಗ (ಪೂ.) ಪುಟ ೧೬೨.

೩೬೩. ಬ. ವ. ಪುಟ ೨೪.

೩೬೪. "ಮನೆಯೊಳಗೆ ಮನೆಯೊಡೆಯನಿದ್ದಾನೋ ಇಲ್ಲವೊ? ಹೊಸ್ತಿಲಲ್ಲಿ ಹುಲ್ಲು ಹುಟ್ಟಿ ಮನೆಯೊಳಗೆ ರಜ ತುಂಬಿ, ಮನೆಯೊಳಗೆ ಮನೆಯೊಡೆಯನಿದ್ದಾನೋ ಇಲ್ಲವೊ? ತನುವಿನಲ್ಲಿ ಹುಸಿ ತುಂಬಿ, ಮನದೊಳಗೆ ವಿಷಯ ತುಂಬಿ ಮನೆಯೊಳಗೆ ಮನೆಯೊಡೆಯನಿಲ್ಲ ಕೂಡಲ ಸಂಗಮ ದೇವಾ"

ಯಾವಾಗ ಮನೆಯಲ್ಲಿ ಕಸವೂ, ಹೊಸ್ತಿಲಲ್ಲಿ ಹುಲ್ಲು ಮೊದಲಾದುವೂ ಬೆಳೆದಿರುತ್ತವೋ ಆಗ ಮನೆಯಲ್ಲಿ ವಾಸಮಾಡುತ್ತಿರುವರಾರೂ ಇಲ್ಲವೆಂದು ತಿಳಿಯುವುದಲ್ಲವೆ? ಹಾಗೆಯೇ ಸುಳ್ಳು ಹೇಳುವುದೂ, ವಿಷಯಗಳ ಕಡೆಗೆ ಮನಸ್ಸು ಹರಿಯುವುದೂ ಎಲ್ಲಿ ಕಂಡು ಬರುತ್ತದೋ ಅಲ್ಲಿ ಆತ್ಮಜ್ಯೋತಿಯಿಲ್ಲ, ಬರಿಯ ಕತ್ತಲೆ ಎಂಬುದು ತಿಳಿಯುತ್ತದೆ. ಹೀಗೆ ಪ್ರಪಂಚಕ್ಕೆಲ್ಲ ಅನ್ವಯಿಸುವ ನೀತಿಪಥವನ್ನು ವಚನಧರ್ಮ ಸಾರುತ್ತದೆ. ಯಾವುದನ್ನು ಉಪನಿಷತ್ತುಗಳು ವಿಶ್ವಕಲ್ಯಾಣಕ್ಕಾಗಿ ಉದ್ಘೋಷಿಸಿದವೋ ಆ "ಸತ್ಯಂ ವದ, ಧರ್ಮಂ ಚರ" ಎಂಬುದನ್ನು ವಚನಧರ್ಮವೂ ಸಾರುತ್ತದೆ. ಪುಣ್ಯಶಾಲಿಗಳ, ಭಾಗವತ ಪುಸ್ತಕ ರತ್ನಗಳ ಉದ್ಧಾರಕ್ಕಿಂತ ಅಜಾಮಿಳರ ಉದ್ಧಾರ ನಮಗೆ ಹೆಚ್ಚು ಮುಖ್ಯವಾಗಿದೆ. ಆದುದರಿಂದ ಬಸವಣ್ಣನವರು,

(೩೬೦.) "ಎಲವೋ ಎಲವೋ ಪಾಪಕರ್ಮವ ಮಾಡಿದವನೇ, ಎಲವೋ ಎಲವೋ ಬ್ರಹ್ಮಹತ್ಯವ ಮಾಡಿದವನೇ, ಒಮ್ಮೆ ಶರಣೆನ್ನಿ........ಒಮ್ಮೆ ಶರಣೆಂದಡೆ ಸಕಲ ಪಾಪಂಗಳು ಕೆಟ್ಟೋಡುವುವು............ಒಮ್ಮೆ ಶರಣೆನ್ನಿ ಎಮ್ಮ ಕೂಡಲ ಸಂಗಮ ದೇವಂಗೆ"

ಎಂದು ತಿಳಿಯ ಹೇಳುವಾಗ ನಮ್ಮ ಅಂತಃಕರಣ ಕರಗಿ ನೀರಾಗುತ್ತದೆ. ವಚನಧರ್ಮ ವಿಸ್ತಾರವಾದ ಧರ್ಮ; ಸದಾಚಾರದ ಸದ್ವರ್ತನೆಯು ಭದ್ರವಾದ ನೆಲಗಟ್ಟು ಅದಕ್ಕಿದೆ. ಭಕ್ತಿ, ಜ್ಞಾನ, ವೈರಾಗ್ಯಗಳೆಂಬ ಗೋಪುರಗಳನ್ನೂ ಚಿನ್ನದ ಕಳಶಗಳನ್ನೂ ಇಟ್ಟು ಷಟ್ಸ್ಥಲವೆಂಬ ಮಹ ಮನೆಯನ್ನು ವಚನಕಾರರು ಕಟ್ಟಿದ್ದಾರೆ. ಅದರಲ್ಲಿ ದಿವ್ಯಪ್ರಕಾಶದ ಜ್ಯೋತಿ ಬೆಳಗುತ್ತಿದೆ. ಪ್ರತಿಯೊಬ್ಬರೂ ಅದನ್ನು ತಮ್ಮಲ್ಲಿಯೇ ಅನುಭವ ಮಾಡಿ

---

೩೬೪. ಬ. ವ. ಪುಟ ೧೫೫.

ಕೊಳ್ಳಬಹುದು; ಸಾಮಾನ್ಯರಾದ ಲೌಕಿಕ ಜನ ಹೀಗೆ ಅನುಭವ ಪಡೆಯುವುದಕ್ಕೆ ಪ್ರಯತ್ನಿಸಬೇಕಲ್ಲದೆ, ಇತರರಿಗೆ ಉಪದೇಶ ಮಾಡಲು ಹೊರಡಬಾರದು; ತಮ್ಮ ತಮ್ಮ ಯೋಗಕ್ಷೇಮಗಳನ್ನು ನೋಡಿಕೊಳ್ಳುವದು ಮಾತ್ರ ಅವರ ಕರ್ತವ್ಯ ಎಂದು ವಚನಕಾರರು ಹೇಳುತ್ತಾರೆ.

೩೬೫. "ಲೋಕದ ಡೊಂಕ ನೀವೇಕೆ ತಿದ್ದುವಿರಿ? ನಿಮ್ಮ ನಿಮ್ಮ ತನುವ ಸಂತೈಸಿಕೊಳ್ಳಿ, ನಿಮ್ಮ ನಿಮ್ಮ ಮನವ ಸಂತೈಸಿಕೊಳ್ಳಿ. ನೆರೆ ಮನೆಯವರ ದುಃಖಕ್ಕೆ ಅಳುವರ ಮೆಚ್ಚ ಕೂಡಲ ಸಂಗಮ ದೇವ"

ಪ್ರತಿಯೊಬ್ಬರೂ ತಮ್ಮ ಡೊಂಕನ್ನು ಸರಿಪಡಿಸಿಕೊಂಡರೆ ಲೋಕಕ್ಕೆ ಎಲ್ಲಿಯದು ಡೊಂಕು !

---

೩೬೫. ಬ. ವ. ಪುಟ ೧೯.

# ೧೩ನೆಯ ಪ್ರಕರಣ

# ವಚನಕಾರರ ವಿಚಾರವಾದ

ವಚನಕಾರರು ತಲೆಯೆತ್ತಿ ಒಂದು ರೀತಿಯಲ್ಲಿ ವಿಚಾರವಾದವನ್ನು ಪ್ರಚಾರಕ್ಕೆ ತಂದಾಗ ಹೊಸದೂ ಹಳೆಯದೂ ಪರಸ್ಪರ ಹೊಂದಿಕೊಳ್ಳುವ ಸಂಧಿಸಮಯ ಪ್ರಾಪ್ತವಾಯಿತೆಂದು ತೋರುತ್ತದೆ. ಕೆಲವು ಜಟಿಲವಾದ ಸಮಸ್ಯೆಗಳ ವಿಷಯದಲ್ಲಿ ಅವರು ತಮ್ಮ ಅಭಿಪ್ರಾಯಗಳನ್ನು ಹೇಗೆ ಧೈರ್ಯವಾಗಿ ಹೇಳಿದ್ದಾರೆಂಬುದನ್ನು ಮುಂದೆ ತೋರಿಸುತ್ತೇವೆ.

(i) ದೀಕ್ಷೆ :—ದೀಕ್ಷೆ ಎಂದರೆ ಶಿವಜ್ಞಾನವನ್ನು ಕೊಡುವುದೂ, ಮಲತ್ರಯಗಳನ್ನು ಕ್ಷಯಿಸುವುದೂ ಯಾವುದೋ ಅದೇ ದೀಕ್ಷೆ. ಈ ದೀಕ್ಷೆಗೆ ಎಲ್ಲ ವರ್ಣದವರೂ ಸ್ತ್ರೀಯರೂ ಗಂಡಸರೂ ಹಕ್ಕುಳ್ಳವರಾದರೂ ಸದಾಚಾರಿಗಳಿಗೆ ಮಾತ್ರ ಗುರು ದೀಕ್ಷೆಯನ್ನು ಕೊಡಬೇಕೆಂದೂ ಗುಣಶೀಲಗಳನ್ನು ಪರೀಕ್ಷಿಸದೆ ದೀಕ್ಷೆಕೊಟ್ಟರೆ ಅದು ವ್ಯರ್ಥವಾಗುತ್ತದೆಂದೂ ವಚನಕಾರರು ಹೇಳಿದ್ದಾರೆ.

೩೬೬. "ಎಲ್ಲರ ದೀಕ್ಷೆಯ ಪರಿಯಂತಲ್ಲ ಎಮ್ಮಯ್ಯನ ದೀಕ್ಷೆ. ನಡೆ ನುಡಿ ಶುದ್ಧವಾದವರಿಗಲ್ಲದೆ ಅನುಗ್ರಹಿಸ ನೋಡಾ. ಪರಮಾರ್ಥಕ್ಕಲ್ಲದ ಜಡ ಜನರನೊಲ್ಲ, ದೀಕ್ಷೆಯ ಕೊಡನು, ಭವಭಾರಿಗಳ ಮುಖದತ್ತ ನೋಡನು, ನಮ್ಮ ಕೂಡಲ ಚೆನ್ನ ಸಂಗಯ್ಯನೆಂಬ ಜ್ಞಾನಗುರು"

೩೬೭. "ಕುಂಬಳದ ಕಾಯಿಗೆ ಕಬ್ಬುನದ ಕಟ್ಟು ಕೊಟ್ಟರೆ ಕೊಳೆವುದಲ್ಲದೆ ಬಲುಹಾಗಬಲ್ಲುದೆ? ಅಳಿಮನದವಂಗೆ ಶಿವದೀಕ್ಷೆಯ ಕೊಟ್ಟರೆ ಭಕ್ತಿ ಎಂತಹುದೋ? ಮುನ್ನಿನಂತೆ. ಕೂಡಲ ಸಂಗಯ್ಯ ಮಾನಹೀನನ ಮಾಸಲ ಕಾಯ್ದಿರಿಸಿದಂತೆ"

೩೬೮. "ಸೆಗಣಿಯ ಬೆನಕಂಗೆ ಸಂಪಿಗೆಯರಳಲ್ಲಿ ಪೂಜಿಸಿದರೆ ರಂಜನೆಯಹುದಲ್ಲದೆ ಅದರ ಗಂಜಳ ಬಿಡದಣ್ಣ. ಮಣ್ಣ ಪುತ್ಥಳಿಯ ಮಾಣದೆ ಜಲದಲ್ಲಿ ತೊಳೆದರೆ ನಿಚ್ಚ ನಿಚ್ಚ ಕೆಸರಹುದಲ್ಲದೆ, ಅದರಚ್ಚುಗ ಬಿಡದಣ್ಣ. ಲೋಕದ ಮಾನವಂಗೆ ಶಿವದೀಕ್ಷೆಯ ಕೊಟ್ಟರೆ ಕೆಟ್ಟವನೇಕೆ ಸದ್ಭಕ್ತನಹನು ಕೂಡಲ ಸಂಗಮ ದೇವ"

---

೩೬೬. ವ. ಶಾ. ಸಾ. ಭಾಗ ೧ (ಪೂ.) ಪುಟ ೮೮.

೩೬೭–೮. ಬ. ವ. ಪುಟ ೧೪.

ಆದುದರಿಂದ ದೀಕ್ಷೆಯನ್ನು ಕೊಡುವ ಮೊದಲು ಗುಣಶೀಲಗಳನ್ನು ಪರೀಕ್ಷೆಮಾಡಬೇಕು. ದ್ರವ್ಯಾಭಿಲಾಷೆಯಿಂದ ದೀಕ್ಷೆ ಕೊಡುವ ಗುರು ಹುಟ್ಟಂಧಕ. ಅಂಥವನ ಕೈಯಲ್ಲಿ ದೀಕ್ಷೆಗೊಂಡವನೂ, ಹಾಗೆ ದೀಕ್ಷೆ ಕೊಟ್ಟವನೂ ಇಬ್ಬರೂ ನರಕದಲ್ಲಿ ಬೀಳುವರು.

ಎರಡನೆಯದಾಗಿ ದೀಕ್ಷೆಯನ್ನು ವೀರಶೈವ ಗುರುವಿನಿಂದ ಪಡೆಪ ಬೇಕು. ಇದು ಸಹಜವಾಗಿಯೇ ಇದೆ ಆದರೆ ಶೈವಪಂಥದಲ್ಲಿದ್ದು ಆಗಲೇ ಲಿಂಗಧಾರಿಗಳಾಗಿರುವವರೂ, ಶೈವಗುರುಗಳನ್ನು ಕುಲಗುರುಗಳಾಗಿ ಪಡೆದವರೂ ವೀರಶೈವವನ್ನು ಅವಲಂಬಿಸಿದಾಗ ಏನು ಮಾಡುವುದು? ಇದು ತೊಡಕಿನ ವಿಷಯ.

೩೬೯. ತನ್ನದಾದರೇನು ಕನ್ನಡಿ? ಅನ್ಯರದಾದಡೇನು ಕನ್ನಡಿ? ತನ್ನ ರೂಪು ಕಂಡಡೆ ಸಾಲದೇ? ಸದ್ಗುರು ಆವನಾದಡೇನು? ತನ್ನನರುಹಿದಡೆ ಸಾಲದೇ ಹೇಳಾ ಸಿಮ್ಮಲಿಗೆಯ ಚೆನ್ನರಾಮಾ?"

ಎಂದು ಒಂದು ಅಭಿಪ್ರಾಯವಿದೆ. ಕುಲಕ್ರಮಾನುಗತವಾಗಿ ಬಂದ ವೀರಶೈವ ಗುರುವಿನ ಮೂಲಕ ದೀಕ್ಷೆಯನ್ನು ಪಡೆಯಲೂ ಬಹುದು, ಅಥವಾ ಷಟ್ಸ್ಥಲಬ್ರಹ್ಮಿಯಾದ ಅನ್ಯಗುರುವಿನ ಮೂಲಕ ದೀಕ್ಷೆಯನ್ನು ಪಡೆಯಲೂ ಬಹುದು ಎಂದು ಮೇಲಿನ ವಚನಕ್ಕೆ ಅರ್ಥಮಾಡೋಣವೆಂದರೆ,

೩೭೦. "ಶೈವನೇಮಸ್ತರ ಕಯ್ಯಲು ಉಪದೇಶವಾದರೆ ಏನಯ್ಯ? ಅಲ್ಲಿ ಏನೂ ಊನ ವಿಲ್ಲ, ಪಾರಂಪರ್ಯದಲ್ಲಿ ನಡೆದಿತ್ತಾಗಿ. ನದಿಯ ಮೂಲವನು ಗುರುವಿನ ಮೂಲವನು ಅರಸುವರೇ? ಗುರು ಲಿಂಗ ಜಂಗಮ ಸಾಕ್ಷಿಯಾಗಿ ಪಟ್ಟಾಭಿಷೇಕ ಪ್ರಣವ ಮಂತ್ರದಿಂದ ಲಿಂಗದರ್ಶನವಾಯಿತ್ತಾಗಿ, ಕಳೆಯಬಾರದು. ಬೆರಸಿ ತನ್ನೊಳಗೆ ತಾನಚ್ಚೊತ್ತಿ ಕರಿಗೊಂಡಿತ್ತಾಗಿ................ಉಳಿಯುಮೇಶ್ವರಾ"

ಎಂಬ ಅಭಿಪ್ರಾಯವೂ ಇದೆ. ಇದನ್ನು ನೋಡಿದರೆ ಶೈವಗುರುವಿನಿಂದ ದತ್ತವಾದ ಚರಲಿಂಗವನ್ನು ಬಿಡಬಾರದೆಂದೂ, ಆ ದೀಕ್ಷೆಯನ್ನು ಅಲ್ಲಗಳೆಯ ಬಾರದೆಂಮೂ ಆ ವಚನಕಾರರು ಹೇಳಿದಂತೆ ತೋರುತ್ತದೆ. ಈ ಅಭಿಪ್ರಾ

೩೬೯–೭೦. ವ. ಶಾ. ಸಾ. ಭಾಗ ೧ (ಪೂ.) ಪುಟ ೯೫.

ಯಕ್ಕೆ ಹೆಚ್ಚು ಪುಷ್ಟಿ ಇತರ ವಚನಕಾರರಲ್ಲಿ ದೊರೆಯುವುದಿಲ್ಲ. ಶೈವಗುರುವಿನಿಂದ ಬಂದ ಲಿಂಗವನ್ನು ವೀರಶೈವ ಗುರುವಿನ ಕೈಯಲ್ಲಿ ಕೊಟ್ಟು ಪುನಃ ದೀಕ್ಷೆಯನ್ನು ಪಡೆಯಬೇಕೆಂಬುದು ಹಲವರ ಅಭಿಪ್ರಾಯವಾಗಿದೆ. ಏಕೆಂದರೆ ಶೈವದೀಕ್ಷೆಯಲ್ಲಿ ಲಿಂಗಧಾರಣವಾದರೂ, ದೇಹ ಪ್ರಾಣ ಭಾವಗಳು ಮಲಯುಕ್ತವಾಗಿವೆ ಎಂಬ ಶಂಕೆಯಿರುವುದರಿಂದ "ಪಶುಭಾವವಲ್ಲದೆ ಲಿಂಗಭಾವವಿಲ್ಲ, ಈ ಸಂದೇಹ ಭ್ರಾಂತಿಯುಳ್ಳ ಕಾರಣ ಶೈವ ಹೊಲ್ಲ ಎನುತಿದ್ದೆನಯ್ಯಾ"

೩೭೧. ತನು ಶುದ್ಧವಿಲ್ಲ ಎಂಬಾತ ಅಂಗದ ಮೇಲೆ ಲಿಂಗವ ಧರಿಸಲಾಗದು. ಮನ ಶುದ್ಧವಿಲ್ಲ ಎಂಬಾತ ಲಿಂಗವ ಹಿಡಿದು ಪೂಜೆಯ ಮಾಡಲಾಗದು. ಪ್ರಾಣ ಮಲಿನವು ಎಂಬ ಪಶುಗಳಿಗೆ ಪ್ರಾಣಲಿಂಗವೆಲ್ಲಿಯದೋ? ಇದು ಕಾರಣ ಶೈವದಲ್ಲಿ ನಡೆಯುತಿಪ್ಪರೆಲ್ಲ ಬಾರದ ಭವದಲ್ಲಿ ಬಪ್ಪುದು ತಪ್ಪದು ಕಾಣಾ, ನೀನು ಸಾಕ್ಷಿಯಾಗಿ ಮಹಾಲಿಂಗ ಗುರು ಶಿವ ಸಿದ್ಧೇಶ್ವರ ಪ್ರಭುವೇ"

ಆದುದರಿಂದ ಶೈವಗುರುವಿನಿಂದ ಆದ ದೀಕ್ಷೆ ಪ್ರಯೋಜನಕಾರಿಯಲ್ಲ. ಆ ಲಿಂಗವನ್ನು ವೀರಶೈವ ಗುರುವಿನ ಕೈಯಲ್ಲಿ ಕೊಟ್ಟು, ಪುನಃ ಆತನಿಂದ ದೀಕ್ಷೆ ಪಡೆಯಬೇಕು.

೩೭೨. ........ಶೈವಗುರುವಿನ ಕಯ್ಯಲ್ಲಿ ಸಾಹಿತ್ಯವಾದ ಲಿಂಗವನು ವೀರಶೈವ ಗುರುವಿನ ಕಯ್ಯಲ್ಲಿ ಕೊಟ್ಟು, ಮರಳಿ ಕೊಂಡಡೆ ಆತ ಇಹಲೋಕ ಪೂಜ್ಯನು. ನಿಮ್ಮಾಣೆ, ನಿಮ್ಮ ಪ್ರಮಥರಾಣೆ, ತಪ್ಪದು ರೇಕಣ್ಣಪ್ರಿಯ ನಾಗನಾಥಾ"

೩೭೩. "ಇಂತಪ್ಪ ಭಿನ್ನಗುರುವಿನ ಕೈಯಿಂದ ಪಡಕೊಂಡ 'ಲಿಂಗವ ಮರಳಿ ಜ್ಞಾನ ಗುರುವಿನ ಕೈಯಲ್ಲಿ ಕೊಟ್ಟು ಲಿಂಗವ ಪಡೆಯಬೇಕು. ಇದಕ್ಕೆ ಸಂಶಯವ ಮಾಡುವಿರಿ. ಸಂಶಯ ಮಾಡಲಾಗದು...........ಭಿನ್ನಭಾವದ ಶೈವಗುರುವಿನ ಉಪದೇಶ ವಿಸರ್ಜಿಸಿ ಅಭಿನ್ನಭಾವವೆಂಬ ಸ್ವಾನುಭಾವ ಜ್ಞಾನಗುರು ಮುಖದಿಂ ತಾರಕ ಮಂತ್ರೋಪದೇಶವ ಪಡೆದು ಲಿಂಗಧಾರಣವಾದಡೆ, ವೀರಶೈವದ ಅಚ್ಚು,

---

೩೭೧. ವ. ಶಾ. ಸಾ. ಭಾಗ ೧ (ಪೂ.) ಪುಟ. ೯೨.

೩೭೨. ವ. ಶಾ. ಸಾ. ಭಾಗ ೧ (ಪೂ.) ಪುಟ. ೯೫.

೩೭೩. ವ. ಶಾ. ಸಾ. ಭಾಗ ೧ (ಪೂ.) ಪುಟ ೯೬.

ಪುರಾತನರ ಮೆಚ್ಚು, ಸರ್ವಗಣಂಗಳಿಗೆ ಸನ್ಮತ. ಇಂತಪ್ಪ ವಿಚಾರವನರಿಯದೆ ಮೂಢಮತಿಯಿಂದ ಕಾದಲಿಂಗವ ಕೈಯಲ್ಲಿ ಕೊಟ್ಟು ಪೂಜಿಸೆಂದು ಹೇಳುವ ಗುರು, ಆ ಕಲ್ಲ ಲಿಂಗವ ಕೈಯಲ್ಲಿ ಪಿಡಿದು ಅಷ್ಟವಿಧಾರ್ಚನೆ ಷೋಡಶೋಪ ಚಾರದಿಂದ ಪೂಜಿಸುವ ಶಿಷ್ಯ, ಬಳ್ಳಿಗುರುಡನ ಕೈಯ ಬಳ್ಳಿಗುರುಡಪಿಡಿದು ಕಾಣದೆ ಡೊಂಗುರವ ಬಿದ್ದಂತೆ ಗುರುಶಿಷ್ಯರೆಂಬುಭಯರು ಯಮಗುಂಡದಲ್ಲಿ ಬೀಳುವರು ನೋಡೆಂದ ಕಾಡಿನೊಳಗಾದ ಶಂಕರಪ್ರಿಯ ಚೆನ್ನಕದಂಬ ಲಿಂಗ ನಿರ್ಮಾಯ ಪ್ರಭುವೇ"

ಹೀಗೆ ಪುನಃ ದೀಕ್ಷೆ ಮಾಡುವುದನ್ನು ನೋಡಿ ಅಸಮಾಧಾನಪಟ್ಟುಕೊಂಡ ವರಿಗೆ ಚೆನ್ನಬಸವೇಶ್ವರನು ತಿಳಿವಳಿಕೆಯನ್ನು ನೀಡಿದಂತೆ ತೋರುತ್ತದೆ; ಮತ್ತು ಶೈವಗುರುಗಳ ದೀಕ್ಷೆಯನ್ನು ಒಪ್ಪದೆ ಪುನಃ ವೀರಶೈವ ದೀಕ್ಷೆಯನ್ನು ತಾನೇ ಹಲವರಿಗೆ ಮಾಡಿದಂತೆಯೂ ತೋರುತ್ತದೆ.

೩೭೪. "ವಿಷದಷ್ಟವಾಗಿದ್ದ ನರನ ಗಾರುಡ ಮಂತ್ರೌಷಧದಿಂದ ಆರೋಗ್ಯಕಾಯನ ಮಾಡುವಂತೆ, ಶೈವಗುರುವಿನ ಕೈಯಲ್ಲಿ ಮಂತ್ರೋಪದಿಷ್ಟನಾದ ಶಿಷ್ಯಂಗೆ ವೀರಶೈವ ಮಂತ್ರೋಪದೇಶದಿಂದ ಆತನ ಕಾಯಶುದ್ಧಾತ್ಮನಂಮಾಡಿ, ಆತನ ಲಿಂಗಕ್ಕೆ ಪ್ರಾಣ ಪ್ರತಿಷ್ಠೆಯಂ ತುಂಬಿ, ಆತನ ಲಿಂಗದ ಮೇಲೆ ಲಿಂಗನಂ ಬಿಜಯಂಗೈಸಿ ಕೃತಕೃತ್ಯನಂ ಮಾಡಿದ ನಮ್ಮ ವೀರಶೈವಗುರು ಕೂಡಲ ಚೆನ್ನ ಸಂಗಮದೇವ"

ಮೂರನೆಯದಾಗಿ ಹೀಗೆ ದೀಕ್ಷೆಯನ್ನು ಪಡೆದು ಲಿಂಗಧಾರಣವಾದ ಮೇಲೆ ಜಾತಿ ಶಿವಜಾತಿ. ಆದುದರಿಂದ ವರ್ಣವ್ಯತ್ಯಾಸಗಳಿಲ್ಲ. ಅಂಥವರೆಲ್ಲ ಅತಿ ವರ್ಣಿಗಳು.

೩೭೫. "ದೇವದೇವ ಬಿನ್ನಪವ ಅವಧಾರು. ವಿಪ್ರ ಮೊದಲು ಅಂತ್ಯಜ ಕಡೆಯಾಗಿ ಶಿವಭಕ್ತರಾದವರನೆಲ್ಲರನೊಂದೇ ಎಂಬೆ. ಹಾರುವ ಮೊದಲು ಶ್ವಪಚ ಕಡೆಯಾಗಿ ಭವಿಯಾದವರನೆಲ್ಲರನೊಂದೇ ಎಂಬೆ. ಹೀಗೆಂದು ನಂಬುವುದೆನ್ನ ಮನವು. ಈ ನುಡಿದ ನುಡಿಯೊಳಗೆ ಎಳ್ಳು ಮೊನೆಯಷ್ಟು ಸಂದೇಹವುಳ್ಳರೆ ನೀನಂದೇ ಮೂಗಕೊಯ್ಯಿ ಕೂಡಲ ಸಂಗಮ ದೇವಾ"

---

೩೭೪. ವ. ಶಾ. ಸಾ. ಭಾಗ ೧ (ಪೂ) ಪುಟ ೯೫.

೩೭೫. ಬ. ವ. ಪುಟ ೧೦೮.

೩೭೬. "ಕರ್ಮಜಾತನ ಕಳೆದು ಶ್ರೀಗುರು ಪುಣ್ಯಜಾತನ ಮಾಡಿದ ಬಳಿಕ, ಶಿವ ಕುಲವಲ್ಲದೆ ಅನ್ಯಥಾ ಕುಲವುಂಟೇ ಶರಣರಿಗೆ? ಅವ ಕುಲವಾದರೇನು? ಲಿಂಗ ವಿದ್ಧಾತನೇ ಕುಲಜನು. ಕುಲವನರಸುವರೇ ಶರಣರಲ್ಲಿ ಆಚಾರವನರಸಬೇಕಲ್ಲದೆ. ಜಾತಿ ಸಂಕರನಾದ ಬಳಿಕ ನಿಮ್ಮ ಶರಣರ ಕುಲಕ್ಕೆ ಪ್ರತಿಗಾಣೆನು. ನಿಮ್ಮ ಕುಲವಲ್ಲವೇ ಅವರು? ನಿಮ್ಮ ಪ್ರತಿಗಾಣೆನು. ನಿಮ್ಮ ಕುಲಕ್ಕೆ ಪ್ರತಿಯಿಲ್ಲವಾಗಿ ಕೂಡಲ ಸಂಗಮ ದೇವಯ್ಯ ನಿಮ್ಮ ಶರಣರಲ್ಲಿ ಸೂತಕವನರಸುವವರಿಗೆ ನಾಯಕ ನರಕ ತಪ್ಪದು."

೩೭೭. "ಪಟ್ಟವ ಕಟ್ಟಿದ ಬಳಿಕ ಲಕ್ಷಣವನರಸುವರೇ? ಲಿಂಗದೇವನ ಪೂಜಿಸಿ ಕುಲವನರಸುವರೇ? ಅಯ್ಯಾ ಕೂಡಲ ಸಂಗಮ ದೇವಾ, ಭಕ್ತಕಾಯ ಮಮ ಕಾಯವೆಂದುದಾಗಿ"

ದೀಕ್ಷೆಯಾದ ಬಳಿಕ ವರ್ಣ ವ್ಯತ್ಯಾಸಗಳಿಲ್ಲ, ವೀರಶೈವದೀಕ್ಷೆ ಪಡೆದ ವರು ಅತಿವರ್ಣಿಗಳು ಎಂಬುದೇ ಆಗಮಗಳ ನಿಜವಾದ ಅಭಿಪ್ರಾಯ; ಬ್ರಾಹ್ಮಣಾದಿ ವರ್ಣಗಳು ಇನ್ನೂ ಉಂಟೆಂದೂ 'ನಾನು ಹೆಚ್ಚು ನೀನು ಕಡಮೆ' ಎಂದೂ ಹೊಡೆದಾಡಬೇಡಿ,—ಎಂದು ವಚನಕಾರರು ಹೇಳುತ್ತಾರೆ.

೩೭೮. ಜಾತಿವಿಡಿದು ಸೂತಕವನರಸುವೆ, ಜ್ಯೋತಿವಿಡಿದು ಕತ್ತಲೆಯನರಸುವೆ, ಇದೆಂತೋ ಮರುಳು ಮಾನವಾ. ಜಾತಿಯಲ್ಲಿ ಅಧಿಕನೆಂಬೆ. ವಿಪ್ರಶತಕೋಟ ಗಳಿದ್ದಲ್ಲಿ ಫಲವೇನು? ಭಕ್ತ ಶಿಖಾಮಣಿ ಎಂದುದು ವಚನ, ಕೂಡಲ ಸಂಗಮ ದೇವ"

ಮನುಷ್ಯರೆಲ್ಲ ಸಮಾನರು ಜಾತಿಭೇದಗಳಿಲ್ಲ ಎಂದು ಬೌದ್ಧಧರ್ಮ ಪ್ರಚಾರಕ್ಕೆ ತಂದಂತೆಯೆ. ಭಕ್ತರೆಲ್ಲ ಸಮಾನರು ಅವರಲ್ಲಿ ಜಾತಿ ಭೇದಗಳಿಲ್ಲ ಎಂದು ವಚನಧರ್ಮ ತಂದಿತು. ಆದರೆ ವೈದಿಕಮತ ತನ್ನ ಪ್ರಾಬಲ್ಯ ಪ್ರಭಾವಗಳನ್ನು ಬೀರದೆ ಹೋಗಿಲ್ಲ. ಭಕ್ತರಲ್ಲಿಯೂ ವರ್ಣವ್ಯತ್ಯಾಸ ಗಳನ್ನು ಸ್ಥಾಪಿಸಲು ವೇದಗಳನ್ನೂ ಆಗಮಗಳನ್ನೂ ಹಿಡಿದು ವಾದಿ ಸುತ್ತಿದ್ದವರು ಹಿಂದೆಯೂ ಇದ್ದಂತೆ ತೋರುತ್ತದೆ. ಆದುದರಿಂದ ಬಸವಣ್ಣನವರು

---

೩೭೬. ವ. ಶಾ. ಸಾ. ಭಾಗ ೧ (ಪೂ.) ಪುಟ. ೩೭೧.
೩೭೭. ಬ. ವ. ಪುಟ ೩೧.
೩೭೮. ಬ. ವ. ಪುಟ ೯೦,

೩೭೯. "ವೇದಕ್ಕೊರೆಯ ಕಟ್ಟುವೆ. ಶಾಸ್ತ್ರಕ್ಕೆ ನಿಗಳವನಿಕ್ಕುವೆ. ತರ್ಕದ ಬೆನ್ನಬಾರ ನೆತ್ತುವೆ. ಆಗಮದ ಮೂಗ ಕೊಯ್ಯುವೆ. ನೋಡಯ್ಯ ಮಹಾದಾನಿ ಕೂಡಲ ಸಂಗಮ ದೇವ ಮಾದಾರ ಚೆನ್ನಯ್ಯನ ಮನೆಯಲುಂಡ ಕಾರಣ"

ಎಂದು ಹೇಳಿದ್ದಾರೆ.

(ii) ಇಷ್ಟಲಿಂಗ :—ಇದು ವೀರಶೈವದ ಮುಖ್ಯ ಚಿಹ್ನೆ. ಸಾಮಾನ್ಯ ವಾಗಿ ಶೈವರಲ್ಲಿ ಕೆಲವರು ಲಿಂಗಧಾರಣೆಯನ್ನು ಮಾಡಿಕೊಳ್ಳಬಹುದು; ಆ ಚರಲಿಂಗವನ್ನು ಪೂಜಿಸಲೂ ಬಹುದು; ಆದರೆ ಅದು ಇಷ್ಟಲಿಂಗವಲ್ಲ. ಶೈವರು ದೇವಾಲಯದಲ್ಲಿರುವ ಸ್ಥಾವರ ಲಿಂಗವನ್ನೂ ಪೂಜಿಸ ಬಹುದು. ಆದರೆ ವೀರಶೈವನು ಇಷ್ಟಲಿಂಗವನ್ನು ಮಾತ್ರ ಪೂಜಿಸಬೇಕು. ವೈದಿಕ ಶೈವರು ಸ್ಥಾವರಲಿಂಗ ಪೂಜೆಯ ಜೊತೆಗೆ ಯಜ್ಞಯಾಗಗಳಿಗೂ ಪ್ರೋತ್ಸಾಹ ಕೊಡುತ್ತಿದ್ದರು. ಆಗಮಿಕ ಶೈವರು ಯಜ್ಞಯಾಗಗಳನ್ನು ಖಂಡಿಸಿ ದೇವಾಲಯಗಳನ್ನು ಕಟ್ಟುವುದಕ್ಕೂ ಸ್ಥಾವರಲಿಂಗ ಪೂಜೆಗೂ ಪ್ರೋತ್ಸಾಹ ಕೊಡುತ್ತಿದ್ದರು. ವಚನಕಾರರು ಇವರಿಬ್ಬರಿಗೂ ವಿರೋಧವಾಗಿ ನಿಂತು ಒಂದು ಕಡೆ ಯಜ್ಞಯಾಗಗಳನ್ನು ಖಂಡಿಸಿದರು; ಮತ್ತೊಂದು ಕಡೆ ದೇವಾಲಯ ಕಟ್ಟುವುದನ್ನೂ ಸ್ಥಾವರ ಲಿಂಗಪೂಜೆಯನ್ನೂ ಖಂಡಿಸಿದರು.

೩೮೦. "ಕಟ್ಟಿದ ಲಿಂಗವ ಬಿಟ್ಟು ಬೆಟ್ಟದ ಲಿಂಗಕ್ಕೆ ಹೋಗಿ ಹೊಟ್ಟೆಯಡಿಯಾಗಿ ಬೀಳುವ ಲೊಟ್ಟೆ ಮೂಳನ ಕಂಡಡೆ ಎಡ ಪಾದರಕ್ಷೆಯ ತೆಗೊಂಡು ಲಟಲಟನೆ ಹೊಡಿ ಎಂದಾತ ನಮ್ಮ ಅಂಬಿಗರ ಚೌಡಯ್ಯ"

೩೮೧. "ಅಂಗದ ಮೇಲಣ ಲಿಂಗವ ಹಿಂಗಿ, ಸ್ಥಾವರಲಿಂಗಕ್ಕೆರಗುವ ಭಂಗಿತರ ಮುಖವ ನೋಡಲಾಗದು"

೩೮೨. "ಸದ್ಭಕ್ತರಾದವರು ಸ್ಥಾವರಲಿಂಗದ ಭಜನೆಯ ಮಾಡಲಾಗದು; ಮನದಲ್ಲಿ ಸ್ಥಾವರ ಘನವೆಂದು ನೆನೆಯಲಾಗದು."

ಏಕಲಿಂಗನಿಷ್ಠಾಚಾರವಿರಬೇಕೆಂದೂ, ಇಷ್ಟಲಿಂಗದಿಂದ ಪ್ರಾಣಲಿಂಗ ಭಾವಲಿಂಗಗಳ ಅರಿವುಂಟಾಗಬೇಕೆಂದೂ, ಎಲ್ಲ ಇಷ್ಟಾರ್ಥಗಳನ್ನೂ ಇಷ್ಟ ಲಿಂಗದಿಂದಲೇ ಪಡೆಯಬಹುದೆಂದೂ ವಚನಕಾರರು ತಿಳಿಸುತ್ತಾರೆ.

---

೩೭೯. ಬ. ವ. ಪುಟ ೧೮೯.

೩೮೦–೨. ವ. ಶಾ. ಸಾ. ಭಾಗ ೧ (ಪೂ.) ಪುಟ ೩೨೮, ೩೨೫, ೩೨೭.

ಅವರ ಒಂದು ವಿಚಾರವನ್ನು ಇಲ್ಲಿ ಹೇಳಬೇಕಾಗಿದೆ. ಬಸವಣ್ಣನವರು, ಅಲ್ಲಮಪ್ರಭು, ಸಿದ್ಧರಾಮ, ದೇವರದಾಸಿಮಯ್ಯ, ಶಂಕರದಾಸಿಮಯ್ಯ, ಮಡಿವಾಳ ಮಾಚಯ್ಯ ಮುಂತಾದ ವಚನಕಾರರ—ಹಾಗೂ ಅವತಾರ ಪುರುಷರ—ಅಂಕಿತಗಳು ಬಹುಮಟ್ಟಿಗೆ ಸ್ಥಾವರಲಿಂಗಗಳಿಗೆ ಸಂಬಂಧಿಸಿವೆ ಯೆಂದು ತೋರುತ್ತದೆ. ಕೃಷ್ಣಾ ಮತ್ತು ಮಲಪ್ರಭಾ ನದಿಗಳ ಸಂಗಮ ವಲ್ಲಿರುವ ಕೂಡಲ ಸಂಗಮನಾಥನು ಬಸವಣ್ಣನವರ ಇಷ್ಟದೈವ. ಬಳ್ಳಿ ಗಾವೆಯ ಗೊಗ್ಗೇಶ್ವರ ಪ್ರಭುವಿನ ಇಷ್ಟದೈವ. ಸೊನ್ನಲಾಪುರದ ಕಪಿಲ ಸಿದ್ಧ ಮಲ್ಲಿಕಾರ್ಜುನ ಸಿದ್ಧರಾಮನ ಇಷ್ಟದೈವ. ಮುದನೂರಿನ ರಾಮನಾಥಲಿಂಗ ದೇವರದಾಸಿಮಯ್ಯನ ಇಷ್ಟದೈವ. ನವಿಲೆಯ ಜಡೆಯ ಶಂಕರದೇವ ಶಂಕರದಾಸಿಮಯ್ಯನ ಇಷ್ಟದೈವ. ಹಿಪ್ಪರಿಗೆಯ ಕಲ್ಲಿನಾಥ ಮಡಿವಾಳ ಮಾಚಯ್ಯನ ಇಷ್ಟದೈವ. ಕೆಲವರಂತೂ ಆ ಸ್ಥಾವರ ಲಿಂಗಗಳ ಉಪಾಸಕರಾಗಿದ್ದರೆಂಬುದು ಅವರವರ ಜೀವನ ಚರಿತ್ರೆಗಳಿಂದ ತಕ್ಕಮಟ್ಟಿಗೆ ತಿಳಿಯುತ್ತದೆ. ವಚನಗಳಲ್ಲಾದರೋ ಸ್ಥಾವರಲಿಂಗ ಪೂಜೆಯನ್ನು ಖಂಡಿಸಲಾಗಿದೆ.

ಇಷ್ಟಲಿಂಗಕ್ಕೆ ಸಂಬಂಧಿಸಿದ ತೊಡಕಿನ ವಿಚಾರ ಒಂದಿದೆ. ಇಷ್ಟಲಿಂಗ ಪತನವಾದರೆ ಅಥವಾ ಕಳೆದು ಹೋದರೆ ಏನು ಮಾಡಬೇಕು? ದೀಕ್ಷಾ ಕಾಲದಲ್ಲಿ ಗುರು ಇಷ್ಟಲಿಂಗವನ್ನು ಕೊಡುವಾಗ "ದೇಹದಿಂದ ಇದನ್ನು ಯಾವಾಗಲೂ ಅಗಲದಿರು. ಇದನ್ನು ನಿನ್ನ ಪ್ರಾಣದಂತೆ ತಿಳಿದುಕೋ. ಪ್ರಮಾದವಶದಿಂದ ಇದು ನೆಲಕ್ಕೆ ಬಿದ್ದರೆ, ಅಥವಾ ಚೋರಾದಿಗಳಿಂದ ಅಪಹೃತವಾದರೆ ತಕ್ಷಣ ಪ್ರಾಣವನ್ನು ಬಿಡು" ಎಂದು ಉಪದೇಶ ಮಾಡುವನಷ್ಟೆ. ಇದು ಶೈವಸಂಪ್ರದಾಯವಲ್ಲ. ಇಷ್ಟಲಿಂಗದಲ್ಲಿ ಮಹಾ ನಿಷ್ಠೆಯುಳ್ಳವನಾಗಿ ಅದನ್ನು ವೀರಭಕ್ತಿಯಿಂದ ಸೇವಿಸುವುದೂ, ಲಿಂಗದಲ್ಲಿ ಪ್ರಾಣವುಳ್ಳವನಾಗಿ ಪ್ರಾಣದಲ್ಲಿ ಲಿಂಗವುಳ್ಳವನಾಗಿರುವುದೂ, ವೀರಶೈವದ ವೈಶಿಷ್ಟ್ಯ. ಭಕ್ತನು ನಿದ್ದೆ ಮಾಡುತ್ತಿದ್ದಾಗ ಇಷ್ಟಲಿಂಗವನ್ನು ಸಡಿಲಿಸಿದ್ದರಿಂದ ಪ್ರಾಣಹೋದದ್ದೂ, ಇಷ್ಟಲಿಂಗವನ್ನು ಮರಳಿ ಸೇರಿಸಿದ್ದರಿಂದ ಪ್ರಾಣ ಬಂದದ್ದೂ ಕಥೆಗಳಲ್ಲಿ ವರ್ಣಿಸಲ್ಪಟ್ಟಿವೆ. ಹೀಗಿದ್ದರೂ ಲಿಂಗ ಹೋದರೆ

ಆತ್ಮಘಾತವನ್ನು ಮಾಡಿಕೊಳ್ಳಬಾರದೆಂದು ವಚನಕಾರರು ಹೇಳಿದ್ದಾರೆ. ಇಷ್ಟಲಿಂಗವನ್ನು ಕರುಣಿಸಿರುವುದು ಸಾಧನೆಗಾಗಿ; ಅದು ಜ್ಞಾನಾಭ್ಯಾಸಕ್ಕೆ ಆವಶ್ಯಕ. ಆದುದರಿಂದ ಅದು ಒಂದು ಕುರುಹು ಮಾತ್ರ.

೩೮೩. "ಸೃಷ್ಟಿಯ ಮೇಲಣ ಕಣೆಯು ತಂದು, ಇಷ್ಟಲಿಂಗವೆಂದು ಮಾಡಿ, ಅಷ್ಟತನುವಿನ ಕಯ್ಯಲ್ಲಿ ಕೊಟ್ಟು, ಆ ಅಷ್ಟತನುವಿನ ಕಯ್ಯ ತಪ್ಪಿ, ಸೃಷ್ಟಿಯ ಮೇಲೆ ಬಿದ್ದಿತೆಂದು, ಮೆಟ್ಟ ಮೆಟ್ಟ ಹೂಳಿಸಿಕೊಂಬ ಗುರುದ್ರೋಹಿಗಳ ಮುಖವ ನೋಡಲಾಗದು.........ಅಭ್ಯಾಸವ ಮಾಡುವಲ್ಲಿ ಕೋಲು ಬಿದ್ದರೆ ತನ್ನ ತಾನೇ ಇರಿದುಕೊಂಡು ಸಾಯಬಹುದೇ? ಆ ಕೋಲಿನಲ್ಲಿ ಗರುಡಿಯ ಮನೆಯನೇ ಹೊಕ್ಕು ಅಭ್ಯಾಸವ ಮಾಡಿ, ಸುರಗಿಯ ಮೊನೆಯನೇ ಗೆಲಿಯಬೇಕಲ್ಲದೆ. ಇದು ಕಾರಣ ಜಲ, ಅಗ್ನಿ, ನೇಣು, ವಿಷ, ಅಸಿಪತ್ರ, ಸಮಾಧಿ, ಇಂತಿವರಿಂದ ಪ್ರಾಣಹಿಂಸೆಯ ಮಾಡುವರಿಗೆ ಅಘೋರ ನರಕದಲ್ಲಿ ಎದ್ದೆದ್ದಿಕ್ಕುವ ನಮ್ಮ ಕೂಡಲ ಚೆನ್ನ ಸಂಗಮದೇವ"

೩೮೪. "ಅಂಗದೊಳಗೆ ಮಹಾಲಿಂಗವಿರಲು, ಕಯ್ಯಲಿಂಗವು ಬಿದ್ದಿತೆಂದು ನೆಲದೊಳಗಂಗವ ಹೂಣುವರು. ಭಂಗಪಡುವರಲ್ಲಾ ಗುಹೇಶ್ವರಾ ಲಿಂಗವನರಿಯದ ಜಡರುಗಳು"

೩೮೫. "ತೆರಹಿಲ್ಲದ ಮಹಾಘನ ಪರಿಪೂರ್ಣಲಿಂಗವು ಬೀಳಲಿಕ್ಕೆ ತೆರಹುಂಟೇ? ಅರಿಯರರಿಯರು ಪ್ರಾಣಲಿಂಗದ ನೆಲೆಯನು. ಅರಿಯದೆ ಅಜ್ಞಾನದಲ್ಲಿ ಕುರುಹು ಬಿದ್ದಿತ್ತೆಂದು ಪ್ರಾಣಘಾತಕವ ಮಾಡಿಕೊಂಡು ಸಾವ ಅಜ್ಞಾನಿಗಳ ನೋಡಾ! ಅರಿದು ಕೂಡಿ, ಸ್ವಯವಾಗಿರ್ದ ಲಿಂಗವು ಓಸರಿಸಿತ್ತೆಂದು ಆ ಲಿಂಗದೊಡನೆ ಸಾವ ಅಜ್ಞಾನಿಗಳಿಗೆ ಅಘೋರ ನರಕ ತಪ್ಪದು ಕಾಣಾ ಕೂಡಲಿ ಚೆನ್ನಸಂಗಮ ದೇವಾ"

ಹಾಗಾದರೆ ಅಂಥ ಸಂದರ್ಭದಲ್ಲಿ ಏನು ಮಾಡಬೇಕು? ಅದೇ ಲಿಂಗವನ್ನು ಎತ್ತಿಕೊಂಡು ಮುಂದೆ ಸಾಧನೆಯನ್ನು ಮಾಡುವುದು. ಒಂದು ವೇಳೆ ಇಷ್ಟಲಿಂಗ ಕಳೆದು ಹೋಗಿದ್ದರೆ ಗುರುವಿನಿಂದ ಮತ್ತೊಂದು ಲಿಂಗವನ್ನು ಪಡೆದುಕೊಂಡು ಸಾಧನೆಯನ್ನು ಮುಂದುವರಿಸುವುದು. ಸಮಾಜಹಿತದ

---

೩೮೩. ವ. ಶಾ. ಸಾ. ಭಾಗ ೧ (ಪೂ.) ಪುಟ ೩೭೯.

೩೮೪–೫. ವ. ಶಾ. ಸಾ. ಭಾಗ ೧ (ಪೂ.) ಪುಟ ೩೪೧.

ದೃಷ್ಟಿಯಿಂದ ವಚನಕಾರರು ಸಂಪ್ರದಾಯವನ್ನು ಬದಿಗೊತ್ತಿ ಆತ್ಮಘಾತವನ್ನು ಮಾಡಿಕೊಳ್ಳಬೇಡಿ ಎಂದರು; ಅಜ್ಞಾನದಿಂದ ಮಾಡಿಕೊಂಡರೆ ನರಕಕ್ಕೆ ಹೋಗುತ್ತೀರಿ ಎಂದು ಎಚ್ಚರಿಕೆ ಕೊಟ್ಟರು.

೩೮೬. "ಗುರು ಸತ್ತರೆ ಸಮಾಧಿಯ ಹೊಗಲೊಲ್ಲರಯ್ಯ! ಲಿಂಗ ಬಿದ್ದರೆ ಸಮಾಧಿಯ ಹೊಕ್ಕೆವೆಂಬರು. ಗುರುವಿಂದ ಲಿಂಗವಾಯಿತ್ತೋ ಲಿಂಗದಿಂದ ಗುರುವಾದನೋ? ಅದೆಂತೆಂದೊಡೆ ಪೃಥ್ವಿಯಲ್ಲಿ ಹುಟ್ಟಿತ್ತು, ಕಲ್ಲುಕುಟಿಗನಿಂದ ರೂಪಾಯಿತ್ತು, ಗುರುವಿನ ಹಸ್ತದಿಂದ ಲಿಂಗವಾಯಿತ್ತು. ಇಂತೀ ಮೂವರಿಗೆ ಹುಟ್ಟಿದ ಲಿಂಗವ ಕಟ್ಟಿ ಜಗವೆಲ್ಲ ಭಂಡಾಯಿತ್ತು. ನೋಡಿರೋ ಅಣ್ಣ. ಲಿಂಗ ಬಿದ್ದಿತ್ತು ಲಿಂಗ ಬಿದ್ದಿತ್ತು ಎಂದು ನೋಯಲೇಕೆ? ಬಿದ್ದ ಲಿಂಗವನೆತ್ತಿಕೊಂಡು ಷೋಡಶೋಪಚಾರಮಂ ಮಾಡುವುದು. ಹೀಗಲ್ಲದೆ ಶಸ್ತ್ರ ಸಮಾಧಿ ದುರ್ಮರಣವ ಮಾಡಿಕೊಂಡಿಹೆನೆಂಬ ಪಂಚಮಹಾಪಾತಕಂಗೆ ನಾಯಕ ನರಕ. ಲಿಂಗವು ಬೀಳಬಲ್ಲುದೇ? ಭೂಮಿಯಾನಬಲ್ಲುದೇ? ಸದ್ಗುರುನಾಥನಿಲ್ಲವೇ? ಇಂತೀ ಕಟ್ಟುವ ತೆರನ ಮುಟ್ಟುವ ಭೇದವ ಆರು ಬಲ್ಲರೆಂದಡೆ, ಈರೇಳು ಭುವನ ಹದಿನಾಲ್ಕು ಲೋಕದೊಡೆಯ ಪೂರ್ವಾಚಾರಿ ಕೂಡಲ ಚೆನ್ನಸಂಗಯ್ಯನಲ್ಲದೆ ಮಿಕ್ಕಿನ ಮಾತಿನ ಜ್ಞಾನಿಗಳೆತ್ತ ಬಲ್ಲರು?"

ಎಂದು ಧೈರ್ಯವಾಗಿ ವಚನಕಾರರು ಬೋಧಿಸಿದ್ದಾರೆ.

---

೩೮೬, ವ. ಶಾ. ಸಾ. ಭಾಗ ೧ (ಪೂ.) ಪುಟ ೩೮೩.

# ೧೪ನೆಯ ಪ್ರಕರಣ

## ವಚನಧರ್ಮವೂ ಸ್ತ್ರೀಯರೂ

ವಚನಧರ್ಮದಲ್ಲಿ ಸ್ತ್ರೀಯರಿಗೆ ಪುರುಷರಂತೆಯೇ ಸಮಾನವಾದ ಹಕ್ಕುಗಳೂ ಗೌರವವೂ ಉಂಟು. ಮಹದೇವಿಯಕ್ಕನ ಚರಿತ್ರೆಯನ್ನು ವಿವರಿಸುವಾಗ ಆಕೆ ಎಂಥ ಜ್ಞಾನಿಯಾಗಿದ್ದಳೆಂಬುದನ್ನೂ ಆಕೆಯ ವಿಷಯ ದಲ್ಲಿ ಅಲ್ಲಮಪ್ರಭು ಮೊದಲಾದವರೆಲ್ಲ ಎಂಥ ಉನ್ನತಾಭಿಪ್ರಾಯಗಳನ್ನು ವ್ಯಕ್ತಗೊಳಿಸಿದ್ದಾರೆಂಬುದನ್ನೂ ನೋಡಿದ್ದೇವೆ. ಮಹದೇವಿಯಕ್ಕನಂತೆಯೇ ಶಿವಶರಣೆಯರು ಹಲವರಿದ್ದರು. ಅವರು ಶಿವಾನುಭವ ಮಂಟಪದ ಚರ್ಚೆ ಗಳಲ್ಲಿ ಭಾಗಿಗಳಾಗುತ್ತಿದ್ದರಲ್ಲದೆ ಮನೆಗಳಲ್ಲಿ ತಂತಮ್ಮ ಪತಿಗಳಿಗೆ ಹಲವು ಸಂದರ್ಭಗಳಲ್ಲಿ ತತ್ತ್ವೋಪದೇಶವನ್ನೂ ಮಾಡುತ್ತಿದ್ದರು. ಆ ಶಿವಶರಣೆಯರ ಜ್ಞಾನ, ಸಂಸ್ಕೃತಿ, ಸೌಜನ್ಯ, ಮೊದಲಾದುವನ್ನು ನೋಡಿದರೆ ನಮ್ಮ ಮನಸ್ಸು ವೇದೋಪನಿಷತ್ತುಗಳ ಕಾಲಕ್ಕೆ ಹೋಗುತ್ತದೆ; ಶಾಂಡಿಲಿ, ಮೈತ್ರೇಯಿ, ಮೊದಲಾದವರ ಜ್ಞಾಪಕ ಬರುತ್ತದೆ.

ಬಸವಣ್ಣನವರು ಕಲ್ಯಾಣಪಟ್ಟಣವನ್ನು ತ್ಯಜಿಸಿ ಕೂಡಲಸಂಗಮ ಕ್ಷೇತ್ರಕ್ಕೆ ದುಃಖಭಾರದಿಂದ ಹೋದಾಗ, ತಾವು ಹಿಂದೆ ಬಿಟ್ಟು ಬಂದಿದ್ದ ತಮ್ಮ ಮುದ್ದುಮಡದಿಯಾದ ನೀಲಾಂಬಿಕೆಯ ಆಲೋಚನೆ ಮನಸ್ಸಿಗೆ ಬಂದಿತು. ತಾವು ಕೂಡಲಸಂಗಮನಲ್ಲಿ ಐಕ್ಯವಾಗುವುದಾಗಿಯೂ, ಆದುದ ರಿಂದ ನೀಲಾಂಬಿಕೆ ಕೂಡಲಸಂಗಮಕ್ಷೇತ್ರಕ್ಕೆ ಬಂದು ಅಲ್ಲಿ ಐಕ್ಯವಾಗಬೇ ಕೆಂದೂ ಬಸವಣ್ಣನವರು ಆಕೆಗೆ ಹೇಳಿ ಕಳುಹಿಸಿದರು. ಹಡಪದ ಅಪ್ಪಣ್ಣ ಬಂದು ನೀಲಲೋಚನೆಗೆ ಬಿನ್ನಹಮಾಡಿದನು. ಆಕೆ

೩೮೭. "ನಾನಾರ ಸಾರುವೆನೆಂದು ಚಿಂತಿಸಲೇಕಯ್ಯ? ನಾನಾರ ಹೊಂದುವೆನೆಂದು ಭ್ರಮೆಪಡಲೇಕಯ್ಯ? ನಾನಾರ ಇರವನರಿಯೆನೆಂದು ಪ್ರಳಾಪಿಸಲೇಕಯ್ಯ? ಪರಿಣಾಮ ಮೂರ್ತಿ ಬಸವನ ರೂಪು ಕರಸ್ಥಲದಲ್ಲಿ ಬೆಳಗಿದ ಬಳಿಕ ಸಂಗಯ್ಯನ ಹಂಗು ನಮಗೇತಕ್ಕೆ ಅಪ್ಪಣ್ಣಾ?"

---

೩೮೭. ಶೂ. ಸಂ. ಪುಟ ೩೯೪.

೩೮೮. "ಅಲ್ಲಿಗೆ ಎನ್ನನು ಬರಹೇಳಿದರಂತೆ. ಇಲ್ಲಿ ತಾನಿಲ್ಲವೆ ಸಂಗಯ್ಯನು? ಅಲ್ಲಿ ಇಲ್ಲಿ ಎಂಬ ಉಭಯ ಸಂದೇಹವು ಬಲ್ಲ ಮಹಾತ್ಮರಿಗಿದು ಗುಣವೆ?"

೩೮೯. "ಸಂಗನ ಬಸವಣ್ಣನೆಂಡ ನಿರೂಪಕ್ಕೆ ಹಿಂಗವೆ ಕರೆವೆತ್ತಿ ಮುಗಿವುತಲಿ ಸಂಗಮನಾಥನೆ ಈತನೆಂವೆನುತಲಿ ಎನ್ನಂಗೈಯ ಲಿಂಗದೊಳಡಗುವೆ"

ಎಂದು ಹೇಳಿದಳು. ಮೋಹದಿಂದ ನಿಜವನ್ನು ಮರೆತರಲ್ಲಾ ಬಸವಣ್ಣನವರು; ಸಂಗಮನಾಥನು ಅಲ್ಲಿ ಇದ್ದಾನೆ ಇಲ್ಲಿಲ್ಲ ಎಂಬ ಭ್ರಾಂತಿ ಜನಿಸಿತಲ್ಲಾ ಅವರಿಗೆ,—ಎಂದು ಆಕೆ ವ್ಯಸನಪಟ್ಟಳು. ನನ್ನ ಕರಸ್ಥಳದಲ್ಲಿಯೇ ಬಸವಣ್ಣನವರ ರೂಪದಲ್ಲಿ ಸಂಗಮನಾಥನಿದ್ದಾನೆ. ಆ ದೃಢ ನಿಶ್ಚಯ ಜ್ಞಾನ ತನಗಿದೆ, ಚಿಂತಿಸಬೇಕಾದುದಿಲ್ಲ, ಎಂದು ವಿವೇಕವನ್ನೂ ಸಮಾಧಾನವನ್ನೂ ಹೇಳಿ ಮಹಾಸತಿವ್ರತೆಯೂ ಮಹಾಜ್ಞಾನಿಯೂ ಆದ ನೀಲಲೋಚನೆ ತನ್ನ ಕರಸ್ಥಳದ ಇಷ್ಟಲಿಂಗದಲ್ಲೇ ಐಕ್ಯವಾದಳು! ಬಸವಣ್ಣನವರು

೩೯೦. "ನಾನಾ ಭವ ದುಃಖದಲ್ಲಿ ಹುಟ್ಟಿದ ಪ್ರಾಣಿಯನಿಲ್ಲಿಗೆ ತಂದೆ. ಇನ್ನು ಹುಟ್ಟಲಾರೆನು ಹೊಂದಲಾರೆನು. ಜನನ ಮರಣವೆಂಬೆರಡಕ್ಕೆ ಹೊರಗಾದೆನಯ್ಯಾ. ನೀವು ಹೇಳಿದ ಮಣಿಹವ ಮಾಡಿದೆ. ಇನ್ನು ನಿಮ್ಮೊಳಗೆ ಕೂಡಿಕೊಳ್ಳಾ ಕೂಡಲ ಸಂಗಮ ದೇವಾ"

ಎಂದು ಸಂಗಮೇಶ್ವರನಲ್ಲಿ ಮೊರೆಯಿಡುತ್ತ ಅಲ್ಲಿ ಐಕ್ಯರಾದರು!

ಮೋಳಿಗೆ ಮಾರಯ್ಯ ಎಂಬ ಶರಣ ತಾನು ಲಿಂಗದಲ್ಲಿ ಐಕ್ಯನಾಗುವೆನೆಂದು ತನ್ನ ಸತಿಯಾದ ಮಹಾದೇವಿಯಮ್ಮನಿಗೆ ತಿಳಿಸಿದನು. ಆಕೆ ಗಂಡನ ಅಜ್ಞಾನಕ್ಕೆ ವ್ಯಥೆಪಟ್ಟು ಇನ್ನೂ ತಾನು ಬೇರೆ, ಲಿಂಗ ಬೇರೆ, ಎಂಬ ಭಿನ್ನ ಭಾವದಿಂದ ಗಂಡನು ವರ್ತಿಸುತ್ತಿರುವನಲ್ಲದೆ ತಾನೇ ಲಿಂಗವೆಂಬ ಏಕಾರ್ಥ ಉದಯಿಸಲಿಲ್ಲ ಎಂದುಕೊಂಡಳು.

೩೯೧. "ಅದೇತಕಯ್ಯ ಶಿವನೊಳಗೆ ಕೂಟಸ್ಥವಾದಿಹೆನೆಂಬ ಬಲು ಬೇಟ? ಇದು ಭಕ್ತಿ ಸತ್ಯದ ಆಟವಲ್ಲ. ಇನ್ನಾರ ಕೇಳಿ ಮತ್ತಿನ್ನಾರಿಗೆ ಹೇಳಿ ನೀ ಮಾಡುವ ಮಾಟ. ಮುನ್ನ ನೀನಾರೆಂದಿದ್ದೆ ಹೇಳಾ? ಆ ಭಾವವನರಿದು ನಿನ್ನ ನೀನೇ ತಿಳಿ ಎನ್ನಯ್ಯ ಪ್ರಿಯ ಇಮ್ಮಡಿ ನಿಃಕಳಂಕ ಮಲ್ಲಿಕಾರ್ಜುನಾ"

---

೩೮೮–೮೯. ಶೂ. ಸಂ. ಪುಟ ೩೯೪. ೩೯೦. ಶೂ. ಸಂ. ಪುಟ ೩೯೫.
೩೯೧. ಶೂ. ಸಂ. ಪುಟ ೨೪೨.

ಎಂದು ಪತಿಗೆ ಹೇಳಿದಳು. “ನಿಶ್ಚಯವ ತಾನರಿದು, ಅತ್ತಣ ಗೊತ್ತು ನಿಶ್ಚಯವಾಗಿ ನಿಂದಲ್ಲಿ, ಆ ಬಚ್ಚಬಯಲ ಬೆಳಗು ನಿನ್ನ ನೀ ನೋಡಿಕೋ” ಎಂದು ಎಚ್ಚರಿಸಿರುವುದು ಅಲ್ಲಮಪ್ರಭು ಹೇಳಿದ “ಎಲೆ ಮನವೇ ನೀ ನಿನ್ನ ನಿಜವ ತಿಳಿವೊಡೆ ಹೇಳುವೆ ಕೇಳು, ಅದು ಕೇವಲ ಜ್ಯೋತಿ” ಎಂಬುದನ್ನು ಜ್ಞಾಪಕಕ್ಕೆ ತರುತ್ತದೆ. ಮೋಳಿಗೆ ಮಾರಯ್ಯ ತನ್ನ ಸತಿ ಹೇಳಿದುದನ್ನು ಗ್ರಹಿಸದೆ ಮತ್ತೆಯೂ “ನಿಃಕಳಂಕಮಲ್ಲಿಕಾರ್ಜುನ ಎಲ್ಲಿದ್ದ ಹನು ಹೇಳಾ” ಎಂದು ಕೇಳಿದನು. ಆಕೆ ತಾನು ಜ್ಞಾನಿಯಾದರೂ ಪಾತಿವ್ರತ್ಯಕ್ಕೆ ಭೂಷಣವಾದ, ಸೌಜನ್ಯಕ್ಕೆ ಪುಟವಿಡುವ,

೪೯೩. “ಕಾಯವಿದ್ದಂತೆ ತಲೆ ನಡೆವುದುಂಟೆ ಅಯ್ಯ? ಕಣ್ಣಿದ್ದಂತೆ ಕರ್ಣ ನೋಡಿ ದುದುಂಟೆ ಅಯ್ಯ? ಬಾಯಿಯಿದ್ದಂತೆ ನಾಸಿಕ ಉಂಡುದುಂಟೆ ಅಯ್ಯ? ತಾಯಿ ಇಲ್ಲದೆ ಮಕ್ಕಳು ಬಂದ ತೆರನ ಹೇಳಯ್ಯ. ನಿಮ್ಮ ಸೇವೆಯ ತೊತ್ತ ಅನುಭಾವವ ಕೇಳಲೇತಕ್ಕೆ? ಪಟವೊಳಗಣ ಬಾಲಸರಕ್ಕೆ ಪ್ರತಿಸೂತ್ರ ನೇಣುಂಟೆ? ನಿಮ್ಮಲ್ಲಿ ಎನ್ನ ಭಾವಲೇಪ, ಎನ್ನಯ್ಯ ಪ್ರಿಯ ಇಮ್ಮಡಿ ನಿಃಕಳಂಕಮಲ್ಲಿ ಕಾರ್ಜುನನಲ್ಲಿಯೆ”

೪೯೪. “............ಎನ್ನ ಶಕ್ತಿ ಜಾತಿಲಕ್ಷಣ ನಿಮ್ಮ ಭಕ್ತಿಸೂತ್ರದಿಂದ. ಎನ್ನ ಸ್ತ್ರೀಜಾತಿ ನಿಮ್ಮ ಶ್ರೀಪಾದದಲ್ಲಿ ಅಡಗಿತ್ತು. ಎನಗೆ ಭಿನ್ನದ ಮಾತಿಲ್ಲ. ಎನ್ನಯ್ಯ ಪ್ರಿಯ ಇಮ್ಮಡಿ ನಿಃಕಳಂಕ ಮಲ್ಲಿಕಾರ್ಜುನನೆಂಬವರು ನೀವೆ”

ಎಂಬ ವಚನಗಳನ್ನು ಉಭಯಾರ್ಥವಾಗುವಂತೆ ಹೇಳಿದಳು. ಆಗ ಮೋಳಿಗೆ ಮಾರಯ್ಯ “ನಿನ್ನ ಭಕ್ತಿಯ ಬೆಳೆಯೆ ಎನಗೆ ಸತ್ಯದ ಹಾದಿ”,

೪೯೫. “ಎನ್ನ ಭಕ್ತಿಗೆ ನೀ ಶಕ್ತಿಯಾದ ಕಾರಣ ಎನ್ನ ಸತ್ಯಕ್ಕೆ ನೀ ಸತಿಯಾದ ಕಾರಣ, ಎನ್ನ ಸುಖ ದುಃಖ ನಿನ್ನ ಸುಖ ದುಃಖ, ಅನ್ಯವಿಲ್ಲ. ಇದಕ್ಕೆ ಭಿನ್ನ ಭೇದವೇನು ಹೇಳಾ”

ತಿಳಿವಳಿಕೆಯನ್ನು ಕೊಡು, ಜ್ಞಾನಿ ನೀನಾದ್ದರಿಂದ ಸ್ತ್ರೀಯೆಂದು ಕಡೆಗಣಿಸಬಾರದು ಎಂದನು. ಆಗ ಮಹಾದೇವಿಯಮ್ಮ

---

೪೯೩–೪. ಶೂ. ಸಂ. ಪುಟ ೨೪೪. ೨೪೫.

೪೯೫. ಶೂ. ಸಂ. ಪುಟ ೨೪೫.

೪೯೫. ಇಷ್ಟದಲ್ಲಿ ನೋಟ ಜ್ಞಾನದಲ್ಲಿ ಕೂಟ ಏಕಾರ್ಥವಾದಲ್ಲಿ, ಕಾಯವೆಂಬ ಕದಳಿಯ ಬಿಟ್ಟುದು, ಭಾವವೆಂಬ ಕುರುಹ ಮರೆದುದು. ಇಂತೀ ಉಭಯ ನಿರ್ಭಾವವಾದಲ್ಲಿ, ಇಹಪರವೆಂಬ ಹೊಲಬುಗೆಟ್ಟಿತ್ತು ಎನ್ನಯ್ಯ ಪ್ರಿಯ ಇಮ್ಮಡಿ ನಿಃಕಳಂಕ ಮಲ್ಲಿಕಾರ್ಜುನನು ಒಂದೆಂದಲ್ಲಿ''

೪೯೬. "..........ಅನಲನಲ್ಲಿ ಅರತ ದ್ರವ್ಯದಂತೆ ಅದು ಅಮೂರ್ತಿಭಾವ"

ಎಂದು ತಿಳಿಯ ಹೇಳಿದಳು.

ಆಯದಕ್ಕಿ ಮಾರಯ್ಯನೆಂಬ ಶಿವಶರಣನು ತಂಡುಲವನಾರಿಸುವ ಕಾಯಕದಿಂದ ಜೀವಿಸುತ್ತಿದ್ದನು. ಒಂದು ದಿನ ಆತನು ಎಂದಿನಂತೆ ತರುವ ನೊತ್ತಕ್ಕಿಂತ ಇಮ್ಮಡಿಯಾಗಿ ಆಯ್ದು ತರಲು, ಆತನ ಸತಿ ಲಕ್ಕಮ್ಮ ಪತಿಯ ದುರಾಸೆಯನ್ನು ನೋಡಿ,

೪೯೭. "ಎಂದಿನಂದವೆ ಸಾಕು, ಮತ್ತೆ ಕೊಂಡು ಹೋಗಿ ಅಲ್ಲಿಯೆ ಸುರಿ. ಮಾರಯ್ಯ ಪ್ರಿಯ ಅಮಲೇಶ್ವರ ಲಿಂಗ ಕೊಟ್ಟ ಕಾಯಕವೇ ಸಾಕು ಮಾರಯ್ಯ''

೪೯೮. "ಆಸೆ ಎಂಬುದು ಅರಸಿಂಗಲ್ಲದೆ ಶಿವಭಕ್ತರಿಗುಂಟೆ ಎಲೆ ಅಯ್ಯ? ರೋಷವೆಂಬುದು ಯಮದೂತರಿಗಲ್ಲದೆ ಅಜಾತರಿಗುಂಟೆ ಎಲೆ ಅಯ್ಯ? ಈಸಕ್ಕಿಯ ಆಸೆ ನಿಮಗೇಕೆ? ಈಶ್ವರನೊಪ್ಪ''

೪೯೯. "ಭಕ್ತರು ಕಾಯಕವೆಂದು ದಾಯಗಾರಿಕೆಯಲ್ಲಿಪ್ಪುದು ದಾಸೋಹವ ಮಾಡಬಹುದೆ? ಒಮ್ಮನವ ತಂದು ಒಮ್ಮನದಲ್ಲಿಯೇ ಮಾಡಿ, ಇಮ್ಮನವಾಗದ ಮುನ್ನವೆ ಮಾರಯ್ಯ ಪ್ರಿಯ ಅಮಲೇಶ್ವರ ಲಿಂಗಕ್ಕೆ ಸಲ್ಲಬೇಕು ಮಾರಯ್ಯ"

ಎಂದು ತಿಳಿವಳಿಕೆಯನ್ನು ನೀಡಿದಳು. ಹೆಚ್ಚಾಗಿ ತಂದದ್ದನ್ನು ಕೊಂಡು ಹೋಗಿ ಅಲ್ಲಿಯೇ ಸುರಿಯುವುದಲ್ಲದೆ, ಪ್ರಭುದೇವ ಬಸವಣ್ಣಾದಿ ಅಸಂಖ್ಯಾತ ಗಣಗಳಿಗೆ ಇಲ್ಲಿ ಆರೋಗಣೆಗೆ ಬಿಜಯ ಮಾಡಬೇಕೆಂದು ವಿಭೂತಿಯನ್ನು ಕೊಟ್ಟುಬನ್ನಿ ಎಂದು ಆಕೆ ಗಂಡನಿಗೆ ಹೇಳಿದಳು. ನಾವು ನಿರ್ಧನಿಕರು, ಅವರು ಮಹಾವ್ರತಶೀಲಸಂಪನ್ನರು, ಕರೆದು ಬಂದ ಮೇಲೆ ಭಕ್ತಿಗೆ ಮೋಸವಾದೀತು, ಎಂದು ಮಾರಯ್ಯ ಭಯದಿಂದ ನುಡಿದನು. ಪತಿಗೆ ಇನ್ನೂ ಪರಮಾತ್ಮನ ವಿಚಾರದಲ್ಲಿ, ಭಕ್ತಿಯ ವಿಚಾರದಲ್ಲಿ, ಶಂಕೆಯಿರುವುದಲ್ಲಾ ಎಂದು ಆಕೆ ಚಿಂತಿಸಿದಳು. ಬಳಿಕ ಪತಿಯ ಕೈಹಿಡಿದು

---

೪೯೫–೬. ಶೂ. ಸಂ. ಪುಟ ೨೪೬.  ೪೯೭–೯. ಶೂ. ಸಂ. ಪುಟ ೨೨೬.

೪೦೦. "ಅಂಗಕ್ಕೆ ಬಡತನವಲ್ಲದೆ ಮನಕ್ಕೆ ಬಡತನ ಉಂಟೆ? ಬೆಟ್ಟ ಬಲ್ಲಿತ್ತೆಂಡಡೆ ಉಳಿಯ ಮೊನೆಯಲ್ಲಿ ಬಡತನ ಉಳ್ಳರೆ ಒಡೆಯದೆ? ಘನ ಶಿವಭಕ್ತರಿಗೆ ಬಡತನವಿಲ್ಲ, ಸತ್ಯರಿಗೆ ದುಃಕರ್ಮವಿಲ್ಲ"

೪೦೧. "ಮನ ಶುದ್ಧವಿಲ್ಲದವರಿಗೆ ದ್ರವ್ಯದ ಬಡತನವಲ್ಲದೆ, ಚಿತ್ತ ಶುದ್ಧದಲ್ಲಿ ಕಾಯಕವ ಮಾಡುವಲ್ಲಿ ಸದ್ಭಕ್ತಂಗೆ ಎತ್ತ ನೋಡಿದಡತ್ತ ಲಕ್ಷ್ಮಿ ತಾನಾಗಿಪ್ಪಳು ಮಾರಯ್ಯಪ್ರಿಯ ಅಮಲೇಶ್ವರ ಲಿಂಗದ ಸೇವೆಯುಳ್ಳನ್ನಕ್ಕ"

ಎಂದು ಧೈರ್ಯಹೇಳಿ ಪತಿಯನ್ನು ಕಳುಹಿಸಿ ಕೊಟ್ಟಳು.

ಶಿವಶರಣೆಯರಲ್ಲಿ ಮುಕ್ತಾಯಕ್ಕ ಬಹಳ ದಿಟ್ಟತನದ ಸಾಧಕಳು. ಆಕೆ ಆತ್ಮಸಾಧನೆಯಲ್ಲಿ ಆತ್ಮವಿಶ್ವಾಸವುಳ್ಳವಳು; ಮಹದೇವಿಯಕ್ಕನಂತೆ ವಿನೀತಳೂ ಶಾಂತಳೂ ಅಲ್ಲ. ಮಹದೇವಿ ಮುಕ್ತಾಯಿ—ಇಬ್ಬರೂ ಕಷ್ಟದುಃಖಗಳಿಗೆ ಸಿಕ್ಕಿದವರು. ಒಬ್ಬಳದು ವಿರಸಸಂಸಾರದ ದುಃಖ, ಮತ್ತೊಬ್ಬಳದು ಗುರುವಾಗಿದ್ದ ಸಹೋದರನ ವಿಯೋಗದುಃಖ. ಆದರೆ ಮಹದೇವಿ ಶರಣ ಸತಿ ಲಿಂಗ ಪತಿ ಭಾವದವಳು, ಆತ್ಮಾರ್ಪಣಾಪರಳು. ಮುಕ್ತಾಯಿ ಕೇವಲ ವಿಚಾರವಾದಿ, ಜ್ಞಾನಮಾರ್ಗದವಳು. ಮಹದೇವಿ ಭಕ್ತಿಯಲ್ಲಿ ಬಸವಣ್ಣನವರ ಅಚ್ಚು; ಮುಕ್ತಾಯಿ ಜ್ಞಾನದಲ್ಲಿ ಚೆನ್ನಬಸವಣ್ಣನ ಅಚ್ಚು. ಇಬ್ಬರೂ ಅಲ್ಲಮಪ್ರಭುವಿನ ಅಚ್ಚುಮೆಚ್ಚು.

ಸಹೋದರನಾದ ಅಜಗಣ್ಣ ಲಿಂಗೈಕ್ಯನಾದುದನ್ನು ಕುರಿತು ಮುಕ್ತಾಯಕ್ಕ ಪ್ರಲಾಪಿಸುತ್ತ, ಕಣ್ಣೀರು ಹರಿಸುತ್ತ, ಮರಣದ ತೊಡಕನ್ನು ಬಿಡಿಸಲಾರದೆ ಲೌಕಿಕದ ಸತ್ಯವನ್ನೂ ಪರಮಾರ್ಥದ ಅಸತ್ಯವನ್ನೂ ಕಂಡು ಕೊಂಡಂತೆ ದುಃಖಿಸುತ್ತಿರಲು, ಅಲ್ಲಮಪ್ರಭು ಮನಕರಗಿದವನಾಗಿ, ಆಕೆಗೆ ಕಾಣಿಸಿಕೊಂಡು

೪೦೨. "ಅಂಗೈಯೊಳಗೊಂದು ಅರಳ್ದ ತಲೆಯ ಹಿಡಿದುಕೊಂಡು ಕಂಗಳ ಮುತ್ತು ಪವಣಿಸುವಾಕೆ ನೀನಾರು ಹೇಳಾ? ಸಂದ ಸಂಪಗೆಯರಳ್ಗೆ ತುಂಬಿ ಬಂದುಂಬ ಭೇದವನರಿಯದೆ ಹಂಬಲಿಸುವ ಪರಿತಾಪವೇನು ಹೇಳಾ? ಒಂದೆಂಬೆನೆ? ಎರಡಾಗಿದೆ, ಎರಡೆಂಬೆನೆ? ಒಂದಾಗಿದೆ, ಅರಿವಿನೊಳಗಣ ಮರಹಿದೇನು ಹೇಳಾ? ದುಃಖವಿಲ್ಲದುದಕ್ಕೆ ಅಕ್ಕೆ ಇಲ್ಲದನುತಾಪ ನಮ್ಮ ಗುಹೇಶ್ವರ ಲಿಂಗದಲ್ಲಿ ತೋರುತ್ತಿದೆ. ನೀನಾರು ಹೇಳಾ ಎಲೆ ಅವ್ವಾ"

---

೪೦೦-೧. ಶೂ. ಸಂ. ಪುಟ ೨೨೬. ೪೦೨. ಶೂ. ಸಂ. ಪುಟ ೨೩.

ಎಂದು ಕೇಳಿದನು. ಆಕೆ ಎದ್ದು ನಮಸ್ಕಾರಮಾಡಿ ತನ್ನ ದುಃಖವನ್ನು ಹೇಳಿಕೊಂಡಳು. ಆಗ ಪ್ರಭು ಸಾಮಾನ್ಯರಿಗೆ ದುಸ್ಸಾಧ್ಯವಾದ ಮುಕ್ತಿಯನ್ನು ಅಜಗಣ್ಣ ಪಡೆದಿದ್ದಾನೆ. ಒಂದಾಗಿದ್ದ ಪರವಸ್ತುವೇ ಅಂಗ ಲಿಂಗಗಳೆಂದು ಎರಡಾಯಿತು. ಎರಡಾಗಿದ್ದುದು ಈಗ ಒಂದಾಯಿತು. ದುಃಖಪಡಬಾರದುದಕ್ಕೆ ಏಕೆ ದುಃಖಿಸುವೆ? ಜ್ಞಾನಿಯಾದ ನಿನಗೆ ಈ ಮರಹು ಏಕೆ ಬಂದಿತು? ಎಂದು ವಿವೇಕವನ್ನೂ ಸಮಾಧಾನವನ್ನೂ ಹೇಳಿದನು. ಕರುಳು ಮೊರೆಯಿಡುತ್ತಿತ್ತು ವೇದಾಂತ ಮರೆಯಾಗಿತ್ತು. ಮುಕ್ತಾಯಕ್ಕನಿಗೆ ದುಃಖವೊಂದು ಕಡೆ; ಒಡಲುವಿಡಿದಿದ್ದ ಲಿಂಗರೂಪು ನಷ್ಟವಾದ ಪರಿಯೆಂತು? ಎಂಬ ತೊಡಕಿನ ಪ್ರಶ್ನೆ ಮತ್ತೊಂದು ಕಡೆ. ಅಲ್ಲಮಪ್ರಭು ಅದಕ್ಕೆ ಸಮಾಧಾನ ಹೇಳಿದನು. ದೇಹವನ್ನು ಧರಿಸಿದ ಮೇಲೆ, ಸಾಕ್ಷಾತ್ ಪರಮೇಶ್ವರನಾದರೂ ದೇಹವನ್ನು ಬಿಡಬೇಕಾದುದೇ. ದೇಹ ಅನಿತ್ಯ, ಆತ್ಮ ನಿತ್ಯ. ಶರಣನಾದ ಅಜಗಣ್ಣ ನಿತ್ಯನು. ಹಿಂದೆ ಇಲ್ಲದವನಲ್ಲ, ಹೊಸದಾಗಿ ಬಂದವನಲ್ಲ, ಈಗ ನಷ್ಟವಾದವನಲ್ಲ. ಅವನಂತೆ ನೀನೂ ಶಿವನಾಗಿರುವೆ, ದುಃಖಪಡಬೇಕಾದ ಕಾರಣವಿಲ್ಲ ಎಂದನು. ಆಕೆ ತತ್ತ್ವವಿಚಾರಗಳನ್ನು ಬಲ್ಲವಳು, ಆದ್ದರಿಂದ ವಾದಕ್ಕೆ ಆರಂಭಿಸಿದಳು.

೪೦೩. "ದೇಹೇಂದ್ರಿಯ ಮನಃ ಪ್ರಾಣಾದಿ ಸೂತಕಂಗಳು ಹಿಂಗದನ್ನಕ್ಕ, ಉತ್ಪತ್ತಿ ಸ್ಥಿತಿಲಯಂಗಳ ಭೇದವ ತಿಳಿಯದನ್ನಕ್ಕ, ಲಿಂಗದಲ್ಲಿ ಇದಿರಿಟ್ಟು ಮಾಡುವ ಕ್ರಿಯಾಸೂತಕ ಹಿಂಗದನ್ನಕ್ಕ ತಾನು ಶಿವನಾಗಬಾರದು"

ಎಂದು ಹೇಳಿದಳು. ಅದಕ್ಕೆ ಅಲ್ಲಮನು, ನೀನು ತಾನು ಎಂದರೇನು? ನಿನ್ನ ದೇಹೇಂದ್ರಿಯಾದಿಗಳು ಎಂಬುದೆಲ್ಲ ಬರಿಯ ಭ್ರಮೆ. ನೀನು ಲಿಂಗವೇ ಆಗಿರುವಾಗ ಇದಿರಿಟ್ಟು ಮಾಡಲೇಕೆ?

೪೦೪. "ಇಲ್ಲದ ಶಂಕೆಯನುಂಟೆಂದು ಭಾವಿಸಿ, ಅದು ಕಣ್ಣು ಮುಂದೆ ರೂಪಾಗಿ ಕಾಡುತ್ತಿಪ್ಪುದು. ಇಲ್ಲದ ತನುವನುಂಟೆಂಬನ್ನಕ್ಕ ಅದೇ ಮಾಯೆಯಾಗಿ ಕಾಡುತ್ತಿಪ್ಪುದು. ಸಃಕ್ರಿಯಾ ಲಿಂಗಕ್ಕೆ ಕ್ರಿಯಾಂತಲ್ಲದೆ ಆಗದೆಂಬುವರ ಸಂದು ಸಂಶಯ ಮುಂದುಗೆಡಿಸುತ್ತಿಪ್ಪುದು ಕೇಳಾ. ಮನವ ಮನೆಮಾಡಿಕೊಂಡಿಪ್ಪ ಲಿಂಗದ ಅನುವರಿಯಬಲ್ಲಡೆ, ಗುಹೇಶ್ವರನೆಂಬ ಲಿಂಗ ದೂರವಿಲ್ಲ ಕೇಳಾ ಮರುಳೆ"

---

೪೦೩. ಶೂ. ಸಂ. ಪುಟ ೨೭. ೪೦೪. ಶೂ. ಸಂ. ಪುಟ ೨೭.

ಲಿಂಗತನು, ಲಿಂಗಮನ, ಲಿಂಗಪ್ರಾಣ, ಎಂದರಿಯದೆ ಭಿನ್ನಭಾವದಿಂದ ನೋಡಬಾರದು ಎಂದು ಹೇಳಿದನು. ಮನವನ್ನು ಮನೆ ಮಾಡಿಕೊಂಡಿರುವ ಲಿಂಗವನ್ನು ತೋರುವ ಗುರು ಕಣ್ಮರೆಯಾದನು. ಅದಕ್ಕಾಗಿ ದುಃಖಿಸುತ್ತೇನೆ ಎಂದು ಮುಕ್ತಾಯಕ್ಕ ಉತ್ತರಕೊಟ್ಟಳು. ಆ ಜ್ಞಾನ ನಿನ್ನಲ್ಲಿಯೇ ಹುಟ್ಟು ವುದು, ಬೇರೊಬ್ಬರು ಕೊಡತಕ್ಕದ್ದು ಏನೂ ಇಲ್ಲ. ಸ್ವಯಂ ಲಿಂಗವೆಂದು ಅನುಭವಜ್ಞಾನದಿಂದ ತಿಳಿಯುವುದು, ಎಂದು ಪ್ರಭು ಹೇಳಿದನು. ಮುಕ್ತಾ ಯಕ್ಕ ಒಪ್ಪದೆ ಗುರುವಿಲ್ಲದೆ ಜ್ಞಾನೋದಯವಾಗುವುದೆಂದರೇನು? ಇದು ಸರಿಯಲ್ಲ. "ತನ್ನಲ್ಲಿ ತಾನೆ ಸನ್ನಿಹಿತನಾದನೆಂದರೆ ಗುರುವಿಲ್ಲದೆ ಆಗದು ಕೇಳಾ. ಎನ್ನ ಅಜಗಣ್ಣನೆಂಬ ಗುರುವಿಲ್ಲದೆ ಆರೂಢಿಯ ಕೂಟ ಸಮನಿ ಸದು ಕೇಳಾ" ಎಂದು ಹೇಳಿದಳು. ಪ್ರಭು

೪೦೫. "........ಆದಿ ಅನಾದಿಯಿಂದತ್ತತ್ತ ಮುನ್ನ ಪರತತ್ತ್ವಮಂ ತಿಳಿದು ನೋಡಲು ನೀನೇ ಸ್ವಯಂ ಜ್ಯೋತಿ ಪ್ರಕಾಶನೆಂದರಿಯಲು, ನಿನಗೆ ನೀನೇ ಗುರುವಲ್ಲದೆ ನಿನ್ನಿಂದ ಅಧಿಕವಪ್ಪ ಗುರು ಉಂಟೇ? ಇದು ಕಾರಣ ಗುಹೇಶ್ವರಲಿಂಗ ತಾನೇ ಎಂಬುದನ್ನು ನಿನ್ನಿಂದರಿಯಬೇಕು ನೋಡಾ"

೪೦೬. "........ಸಹಜ ಸಂಬಂಧಕ್ಕೆ ಗುರುವಲ್ಲದೆ ಸಹಜಕ್ಕೆ ಗುರು ಉಂಟೆ? ಗುಹೇ ಶ್ವರ ಲಿಂಗದಲ್ಲಿ ಪರವೆಂದಲ್ಲಿ ಗುರು ಉಂಟಲ್ಲದೆ ಸ್ವಯವೆಂದಲ್ಲಿ ನುಡಿಯಲಿಲ್ಲ"

ಆದುದರಿಂದ ಬೇರೆ ಗುರುವುಂಟೆಂದು ಭ್ರಮಿಸಿ ದುಃಖಿಸಲೇಕೆ? ಆ ಪರವಸ್ತು "ತನ್ನ ವಿನೋದಕ್ಕೆ ತಾನೇ ಗುರುವಾದ, ತಾನೇ ಶಿಷ್ಯನಾದ, ತಾನೇ ಲಿಂಗವಾದ, ತಾನೇ ಮಂತ್ರವಾದ". ಎರಡೆಂಬುದಿಲ್ಲ. ಇವೆಲ್ಲ ನಿನ್ನಲ್ಲಿಯೇ ತಿಳಿಯುವುದು, ಅನ್ಯರಿಂದಲ್ಲ ಎಂದನು. ಆದರೆ ಮುಕ್ತಾಯಕ್ಕ ಅದ್ವೈತವನ್ನು ಸಾಧಿಸಿದ ಅಜಗಣ್ಣ ಮಾತಿನ ಮಾಲೆಯನ್ನು ಕಟ್ಟಿದವನಲ್ಲ. ಇದಿರಿಟ್ಟು ನುಡಿಯುತ್ತಿರುವವರಿಗೆ ಅದ್ವೈತವೆಂತು ಸಿದ್ಧಿಯಾಗಿರುವುದು? ಎಂದು ಆಲೋಚಿಸಿ ಅಲ್ಲಮನನ್ನು ತೀವ್ರವಾಗಿ ಟೀಕಿಸಿದಳು.

೪೦೭. "ಅದ್ವೈತವ ನೆಲೆಗೊಳಿಸಿ ಎರಡಳಿದೆನೆಂಬುದು ಶಿಶು ಕಂಡ ಕನಸಿನಂತಿರ ಬೇಕಲ್ಲದೆ, ನುಡಿದು ಹೇಳುವನ್ನಕ್ಕ ಭಿನ್ನವಲ್ಲವೇ ಹೇಳಾ? ಅರಿವರತು, ಮರಹು ನಷ್ಟವಾಗಿ, ಗುರುವ ತೋರಿದೆನೆಂಬವರು ಇದಿರಿಂಗೆ ಕರುಳ ತಲೆಯ ಆರುಹುವ

---

೪೦೫. ಶೂ. ಸಂ. ಪುಟ ೨೯. ೪೦೬-೭. ಶೂ. ಸಂ. ಪುಟ ೩೦.

ಪರಿ ಎಂತು ಹೇಳಾ? ಮನದ ಕೊನೆಯ ಮೊನೆಯ ಮೇಲಣ ಅರುಹಿನ ಕಣ್ಣು ಮುಂದೆ ಸ್ವಯಂ ಪ್ರಕಾಶ ತೋರುತ್ತಿರ್ದಡೆ ತಾನಾಗಬಲ್ಲನೆ? ನೆರೆಯರಿತು ಮರೆಯ ಬಲ್ಲರೆ, ಎನ್ನ ಅಜಗಣ್ಣನಂತೆ ಶಬ್ದಮುಗ್ಧವಾಗಿರಬೇಕಲ್ಲದೆ, ಶಬ್ದ ಸಂದಣಿಯ ಮಾತು ಸಮಯವಲ್ಲ ನೋಡಾ ಪ್ರಭುವೇ"

ಆದುದರಿಂದ ಮಾತುಳಿದು ಮೌನವಾಗಿರಬೇಕಲ್ಲದೆ ಉಪದೇಶ ಮಾಡ ಹೊರಟವನು ದ್ವೈತಿಯಲ್ಲದೆ ಅದ್ವೈತಿಯಲ್ಲ. ಹೀಗೆ ನಡೆಯೊಂದು ಪರಿ ನುಡಿಯೊಂದು ಪರಿ ಆಗಿರುವ ನೀನು ನನಗೆ ಉಪದೇಶಮಾಡತಕ್ಕದ್ದು ಏನೂ ಇಲ್ಲ. ನೀನು ನಿನ್ನ ದಾರಿ ಹಿಡಿದುಕೊಂಡು ಹೋಗು ಎಂದು ದಿಟ್ಟತನದಿಂದ ಮುಕ್ತಾಯಕ್ಕ ಹೇಳಿದಳು. ಆಕೆ ಎಷ್ಟರಮಟ್ಟಿಗೆ ತಿಳಿವಳಿಕೆ ಪಡೆದಿದ್ದಾಳೆ ಎಂಬುದನ್ನು ಕಂಡು ಅಲ್ಲಮನಿಗೆ ಸಂತೋಷವಾಯಿತು. ಅದ್ವೈತಾನುಭವ ನಿರ್ವಿಕಲ್ಪಸಮಾಧಿಯಲ್ಲಿ ಇರುವುದಲ್ಲದೆ ಯಾವಾಗಲೂ ಇರ ತಕ್ಕದ್ದಲ್ಲ. ಬಹಿರ್ಮುಖನಾದಾಗ ಲೌಕಿಕ ಪ್ರಪಂಚದಲ್ಲಿ ತಾನೂ ಒಬ್ಬನಾಗಿ, ಆದರೆ ವಿಲಕ್ಷಣ ರೀತಿಯಲ್ಲಿ ಆ ಒಬ್ಬನಾಗಿ, ನುಡಿದು ಸೂತಕಿಯಲ್ಲದ್ವೆ, ನಡೆದು ಸಂಸಾರಿಯಲ್ಲದೆ, ಇತರರ ಕೈಹಿಡಿದು ನಡಸುವ ಗುರುವಾಗಿ ತಾನಿರುವನು. ಯಾವಾಗಲೂ ಮೌನವನ್ನವಲಂಬಿಸುವುದಿಲ್ಲ. ಇದನ್ನು ಮುಕ್ತಾಯಕ್ಕನಿಗೆ ಅಲ್ಲಮ ಪ್ರಭು ಹೀಗೆ ತಿಳಿಸಿದನು:

೪೦೮. "ತನ್ನ ತಾನರಿದಡೆ ನುಡಿಯೆಲ್ಲ ಪರತತ್ತ್ವ ನೋಡಾ! ತನ್ನ ತಾ ಮರೆದಡೆ ನುಡಿ ಎಲ್ಲ ಮಾಯೆ ನೋಡಾ! ಅರಿದು ಮರೆದ ಶಿವಯೋಗಿಯ ಶಬುದವೆಲ್ಲವು ಉಪದೇಶವಲ್ಲದೆ ಭಿನ್ನ ಉಂಟೆ? ನಿನ್ನ ಮನದ ಕಳವಳವ ತಿಳುಹಲೆಂದು ಮಾತನಾಡಿಸಿ ನೋಡಿದಡೆ ಎನ್ನ ಮನದೊಳಗೆ ಕಂದು ಕಲೆ ಎಂಬುದಿಲ್ಲ ನೋಡಾ. ನಮ್ಮ ಗುಹೇಶ್ವರ ಲಿಂಗಕ್ಕೆ ನೀನು ಕರುಣದ ಶಿಶುವಾದ ಕಾರಣ ಬಾಯ್ದೆರೆದೆನಲ್ಲದೆ ಭಿನ್ನ ಉಂಟೆ ಹೇಳಾ ಮರುಳೆ?"

ಕಡೆಗೆ ಮುಕ್ತಾಯಕ್ಕನಿಗೆ ಅಲ್ಲಮಪ್ರಭುವಿನ ಮಹತ್ವ ಅರಿವಾಯಿತು. ಆತನ ಉಪದೇಶ ಬಲದಿಂದ ನಿರ್ವಯಲ ಸಮಾಧಿಯನ್ನು ಪಡೆದು ಅದ್ವೈತ ವನ್ನು ಸಾಧಿಸಿದಳು. ಪ್ರಭು ತನ್ನ ಜೀವಮಾನದಲ್ಲಿ ಬಸವಣ್ಣಾದಿ ಹಲವು ಸಾಧಕರನ್ನು ಸಂಧಿಸಿ, ಅವರ ಲೋಪ ದೋಷಗಳನ್ನು ತೋರಿಸಿ,

೪೦೮. ಶೂ. ಸಂ. ಪುಟ ೩೧.

ಸರಿಯಾದ ಮಾರ್ಗವನ್ನು ಉಪದೇಶಿಸಿದನಷ್ಟೆ. ಆ ಸಂದರ್ಭಗಳಲ್ಲೆಲ್ಲ ಗುರುವಿನಿಂದ ಶಿಷ್ಯರ ಪರೀಕ್ಷೆಯಾಯಿತು. ಮುಕ್ತಾಯಕ್ಕನನ್ನು ಸಂಧಿಸಿದಾಗ ಶಿಷ್ಯೆಯಿಂದ ಗುರುವಿನ ಪರೀಕ್ಷೆಯಾಯಿತು! ಗುರು ಆ ಪರೀಕ್ಷೆಯಲ್ಲಿ ತೇರ್ಗಡೆಯಾದುದರಿಂದ ಶಿಷ್ಯೆ ಉಪದೇಶವನ್ನು ಕೈಕೊಂಡಳು. ಹಿಂದೆ ಗಾರ್ಗಿ ಯಾಜ್ಞ್ಯವಲ್ಕ್ಯರಿಗೆ ಎಲ್ಲ ಪ್ರಶ್ನೆಗಳನ್ನೂ ಹಾಕಿ ಉತ್ತರ ಪಡೆದ ಮೇಲೆ "ಯಾರೂ ಈತನನ್ನು ಸೋಲಿಸಲಾರಿರಿ. ಈತನು ಅಜೇಯನು" ಎಂದು ಪ್ರಶಸ್ತಿಯನ್ನು ಕೊಟ್ಟಳು. ಹಾಗೆಯೇ ಪ್ರಭು ಅಜೇಯನೆಂದು ಮುಕ್ತಾಯಕ್ಕ ತನ್ನ ಪ್ರಸಂಗದಲ್ಲಿ ತೋರಿಸಿದ್ದಾಳೆ.

ಹೀಗೆಯೇ ಹಲವರು ಶಿವಶರಣೆಯರು ಮಹಾಜ್ಞಾನಿಗಳಾಗಿ ಧರ್ಮದ ಸಾರವನ್ನು ಲೋಕಕ್ಕೆ ಕೊಟ್ಟಿರುತ್ತಾರೆ. ಸ್ತ್ರೀಯರಿಗೂ ದೀಕ್ಷೆ ಮತ್ತು ಷಟ್ಸ್ಥಲ ಸಾಧನ ಮಾರ್ಗಗಳು ಉಂಟೆಂದು ಸಮಾನವಾದ ಅವಕಾಶವನ್ನು ಕೊಟ್ಟುದರ ಫಲವನ್ನು ಇಲ್ಲಿ ಕಾಣಬಹುದಾಗಿದೆ. ಹೆಂಗಸರು ಮಾಯೆಯೆಂದಾಗಲಿ, ಅವರು ಕೀಳೆಂದಾಗಲಿ, ಕೇವಲ ಗೃಹಕೃತ್ಯ ನಿರ್ವಹಣದ ತೊತ್ತೆಂದಾಗಲಿ, ಪುರುಷನ ಭೋಗಸಾಮಗ್ರಿಯೆಂದಾಗಲಿ ಭಾವಿಸದೆ, ಅವರೂ ಜ್ಞಾನವನ್ನು ಉಪದೇಶಿಸಬಲ್ಲ ಮಹಾನುಭಾವಿಗಳೆಂದು ವಚನಧರ್ಮ ಗೌರವಿಸಿರುತ್ತದೆ.

ವಚನಧರ್ಮದಲ್ಲಿ ಸ್ತ್ರೀಯರಿಗೆ ಮತ್ತೊಂದು ಸ್ವಾತಂತ್ರ್ಯವೂ ಇದೆ. ಭಕ್ತನನ್ನು ಕೈಹಿಡಿದ ಶರಣೆಯಾದರೆ ಏನೊಂದು ಆಲೋಚನೆಯೂ ಇಲ್ಲ. ಒಂದು ವೇಳೆ ಪತಿ ಭಕ್ತನಲ್ಲದಿದ್ದರೆ ಏನು ಮಾಡುವುದು? ಇಂಥ ಸಂದರ್ಭಗಳು ವೀರಶೈವ ಸಮಾಜದಲ್ಲಿ ಅಪೂರ್ವ; ಇಲ್ಲವೆಂದೇ ಹೇಳಬೇಕು. ಆದರೂ ವೀರಶೈವಧರ್ಮ ತಲೆಯೆತ್ತಿದ ಕಾಲದಲ್ಲಿ, ಸಮಾಜ ವ್ಯವಸ್ಥೆಗಳು ಹೊಸದಕ್ಕೆ ಹೊಂದಿಕೊಳ್ಳಬೇಕಾಗಿದ್ದ ಸಂಧಿ ಸಮಯದಲ್ಲಿ, ಇಂಥ ಉದಾಹರಣೆಗಳು ಇದ್ದಿರಬೇಕು. ಆ ಶರಣೆ ಭವಿಯನ್ನು ಭಕ್ತನನ್ನಾಗಿ ಮಾಡಲು ಪ್ರಯತ್ನ ಪಡಬೇಕು ಮತ್ತು ತನ್ನ ಪೂಜಾಕಾರ್ಯಗಳಿಗೆ ಅಡ್ಡಿಯಿಲ್ಲದಂತೆ ನೋಡಿಕೊಳ್ಳಬೇಕು. ಒಂದು ವೇಳೆ ಅವು ಸಾಧ್ಯವಾಗದಿದ್ದರೆ ಪತಿಯನ್ನು ಬಿಟ್ಟು ಆತ್ಮಸಾರ್ಥಕ್ಯವನ್ನು ಸಾಧಿಸಿಕೊಳ್ಳಬೇಕು.

ಲಿಂಗದೇವನೇ ಪತಿ ಎಂದು ನಂಬಿ ಬೇರೆಯಾಗಬೇಕಲ್ಲದೆ, ತಾನು ವ್ರತ ಭ್ರಷ್ಟಳಾಗಬಾರದು. ಬೇಕಾಗಿದ್ದರೆ, ವಿವಾಹವಾಗದೆಯೇ ಶರಣ ಸತಿ ಲಿಂಗ ಪತಿ ಎಂಬ ಭಾವದಿಂದ ಇರಬಹುದು. ಸ್ತ್ರೀಯಾಗಿ ಹುಟ್ಟಿದ ಪಾಪಕ್ಕೆ ಯಾವ ಗಂಡಸನ್ನಾದರೂ ಮದುವೆಯಾಗಲೇಬೇಕೆಂಬ ನಿರ್ಬಂಧವಿಲ್ಲ.

ಸಮರಸ ಸಂಸಾರ ಸ್ವರ್ಗ. ವಿರಸ ಸಂಸಾರ ನರಕ. ಸಂಸಾರದಲ್ಲಿ ಗಂಡಹೆಂಡಿರು ಅನ್ಯೋನ್ಯವಾಗಿದ್ದರೆ, ಅಂಥವರ ಭಕ್ತಿ ಶಿವನಿಗೆ ಮೆಚ್ಚು.

೪೦೯. "ಸತಿಪತಿಗಳೊಂದಾದ ಭಕ್ತಿ ಹಿತವಾಗಿಪ್ಪುದು ಶಿವಂಗೆ. ಸತಿಪತಿಗಳೊಂದಾಗದವರ ಭಕ್ತಿ ಅಮೃತದೊಳು ವಿಷವ ಬೆರಸಿದಂತೆ ಕಾಣಾ ರಾಮನಾಥಾ".

೪೧೦. "ಉಭಯ ದೃಷ್ಟಿಯಿಂದ ದೃಷ್ಟವ ಕಾಂಬಂತೆ, ದಂಪತಿ ಏಕಭಾವವಾಗಿ ನಿಂದಲ್ಲಿ ಗುಹೇಶ್ವರಲಿಂಗಕ್ಕೆ ಅರ್ಪಿತವಾಯಿತ್ತು"

ಆದುದರಿಂದ ಸಂಸಾರವನ್ನು ನಡೆಸುವುದರಲ್ಲೂ, ಭಕ್ತಿಯನ್ನು ಮಾಡುವುದರಲ್ಲೂ, ಗಂಡ ಹೆಂಡತಿ ಒಂದೇ ಮನಸ್ಸಿನಿಂದ ಮಾಡಿದರೆ ದೇವರಿಗೆ ತೃಪ್ತಿಯಾಗುತ್ತದೆ ಎಂದು ಹೇಳಿ, ಈ ಅನ್ಯೋನ್ಯತೆಗೆ ಪರಮಾರ್ಥದ ಸ್ವರೂಪವನ್ನು ವಚನಕಾರರು ಕೊಟ್ಟಿರುತ್ತಾರೆ.

ಗಂಡು ಹೆಚ್ಚು, ಹೆಣ್ಣು ಕಡಮೆ ಎಂದು ತಿಳಿಯಬಾರದು. ದೇಹೋಪಾಧಿಯಿಂದ ಗಂಡು ಹೆಣ್ಣುಗಳ ಭೇದವೇ ಹೊರತು ಆತ್ಮ ಗಂಡೂ ಅಲ್ಲ ಹೆಣ್ಣೂ ಅಲ್ಲ. ಆತ್ಮನಿಗೆ ಅಂಟಿಕೊಂಡಿರುವ ಮಲತ್ರಯಗಳು ಕಳಚಿ ಬಿದ್ದರೆ ಸ್ವಸ್ವರೂಪಜ್ಞಾನವುಂಟಾಗುವುದರಿಂದ, ಸ್ತ್ರೀದೇಹಧಾರಿಗೂ ಮೋಕ್ಷವುಂಟು, ಲಿಂಗೈಕ್ಯವುಂಟು, ಎಂದು ವಚನಧರ್ಮ ಹೇಳುತ್ತದೆ. ಮಹಾದೇವಿಯಕ್ಕ, ಮುಕ್ತಾಯಕ್ಕ, ಮೊದಲಾದವರೆಲ್ಲ ಹೀಗೆ ಮುಕ್ತಿಯನ್ನು ಪಡೆದಿದ್ದಾರೆ.

---

೪೦೯. ವ. ಶಾ. ಸಾ. ಭಾಗ ೧. (ಪೂ.) ಪುಟ ೧೬೬.

೪೧೦. ಶೂ. ಸಂ. ಪುಟ ೨೩೨.

೪೧೧. "ತನುವಿನೊಳಗಿದ್ದು ತನುವ ಗೆದ್ದಳು, ಮನದೊಳಗಿದ್ದು ಮನವ ಗೆದ್ದಳು, ವಿಷಯದೊಳಗಿದ್ದು ವಿಷಯಂಗಳ ಗೆದ್ದಳು. ಅಂಗಸಂಗವ ತೊರೆದು ಭವವ ಗೆದ್ದಳು. ಕೂಡಲ ಚೆನ್ನ ಸಂಗಯ್ಯನ ಹೃದಯ ಕಮಲವ ಬಗಿದು ಹೊಕ್ಕು ನಿಜಪದವನೈದಿದ ಮಹಾದೇವಿಯಕ್ಕನ ಶ್ರೀಪಾದಕ್ಕೆ ನಮೋ ನಮೋ"

೪೧೨. "ತನುಗುಣ ನಾಸ್ತಿಯಾಗಿ ಲಿಂಗಸಂಗಿಯಾದಳು. ಮನಗುಣ ನಾಸ್ತಿಯಾಗಿ ಅರಿವುಸಂಗಿಯಾದಳು. ಭಾವಗುಣ ನಾಸ್ತಿಯಾಗಿ ಮಹಾ ಪ್ರಭೆ ತಾನಾದಳು. ತಾನು ಇದಿರು ಎಂಬ ಎರಡಳಿದು ನಮ್ಮ ಗುಹೇಶ್ವರಲಿಂಗದಲ್ಲಿ ಸ್ವಯಲಿಂಗವಾದ ಮಹಾದೇವಿಯಕ್ಕಗಳ ನಿಲವಿಂಗೆ ಶರಣೆನುತಿರ್ದೆನು"

ಎಂದು ಹೆಂಗುಸನ್ನು ಪ್ರಭುದೇವಾದಿಗಳು ಹೊಗಳುವಂತೆ ಮಾಡಿರುವುದು ವಚನಧರ್ಮ. ಆದುದರಿಂದ ಪರವಸ್ತುವಿನಲ್ಲಿ ಅವಿನಾಭಾವದಿಂದಿರುವ ಶಕ್ತಿ ರೂಪ ತಾಳಿದರೆ, ರೂಪವನ್ನು ನೋಡಿ ಜರೆಯಲಾಗದು.

೪೧೩. "ತಾ ಮಾಡಿದ ಹೆಣ್ಣು ತನ್ನ ತಲೆಯನೇರಿತ್ತು. ತಾ ಮಾಡಿದ ಹೆಣ್ಣು ತೊಡೆಯನೇರಿತ್ತು. ತಾ ಮಾಡಿದ ಹೆಣ್ಣು ಬ್ರಹ್ಮನ ನಾಲಗೆಯನೇರಿತ್ತು. ತಾ ಮಾಡಿದ ಹೆಣ್ಣು ನಾರಾಯಣನ ಎದೆಯನೇರಿತ್ತು. ಅದು ಕಾರಣ ಹೆಣ್ಣು ಹೆಣ್ಣಲ್ಲ, ಹೆಣ್ಣು ರಾಕ್ಷಸಿಯಲ್ಲ, ಹೆಣ್ಣು ಪ್ರತ್ಯಕ್ಷ ಕಪಿಲಸಿದ್ಧ ಮಲ್ಲಿಕಾರ್ಜುನ ನೋಡಾ"

ತಾಯಿ ದೇವರೆಂದು ವೇದ ಹೇಳಿತು. ಹೆಣ್ಣೇ ದೇವರೆಂದು ವಚನ ಧರ್ಮ ಸಾರಿತು.

---

೪೧೧-೨. ಶೂ. ಸಂ. ಪುಟ ೨೯೯,೩೯೦.

೪೧೩. ವ. ಶಾ. ಸಾ. ಭಾಗ ೧ (ಪೂ.) ಪುಟ ೧೬೬.

## ೧೫ನೆಯ ಪ್ರಕರಣ

# ವಚನಧರ್ಮವೂ ಸಮಾಜರಚನೆಯೂ

ವಚನಧರ್ಮಾನುಸಾರ ಸಮಾಜದಲ್ಲಿ ಎರಡು ಪಂಗಡಗಳಾಗುತ್ತವೆ: ಒಂದು ಭವಿಗಳ ಪಂಗಡ, ಎರಡನೆಯದು ಭಕ್ತರ ಪಂಗಡ. ಲಿಂಗಧಾರಿಗಳಾಗಿ ಭಕ್ತರಾದವರು ಭವಿಗಳಿಗಿಂತ ಮೇಲೆಂದು ವಚನಕಾರರು ಹೇಳುತ್ತಾರೆ. 'ಭವಿ' ಎಂದರೆ ಹುಟ್ಟು ಸಾವುಗಳುಳ್ಳವನು, ಆದ್ದರಿಂದ ಮುಕ್ತಿಗೆ ಅಯೋಗ್ಯನು ಎಂದು ಅಭಿಪ್ರಾಯ. ವಚನಕಾರರ ಅಭಿಪ್ರಾಯದಂತೆ ವೀರಶೈವ ದೀಕ್ಷೆಯನ್ನು ಪಡೆಯದೆ, ಷಟ್ಸ್ಥಲ ಸಾಧನೆಯನ್ನು ಮಾಡದೆ, ನಿಜಮುಕ್ತಿ ದೊರೆಯದಾದ್ದರಿಂದ, ಲಿಂಗಧಾರಣ ಮಾಡಿಕೊಳ್ಳದವರೆಲ್ಲ ಭವಿಗಳೇ ಆಗಿರುತ್ತಾರೆ. ಜಗತ್ತಿನಲ್ಲಿ ಹಲವು ಮತಗಳಿವೆ. ಭರತ ಖಂಡದಲ್ಲಿಯೇ ಹಲವರು ಮಹಾತ್ಮರೂ ಆಚಾರ್ಯರೂ ಅವತಾರಮಾಡಿ ಮತ ಪ್ರಚಾರ ಮಾಡಿದ್ದಾರೆ. ತಂತಮ್ಮ ಪಂಥದ ಮೇಲ್ಮೆಯನ್ನು ಸಾರುವುದಕ್ಕಾಗಿ ಅದಕ್ಕೆ ಒಂದು ವಿಶೇಷವಾದ ಗೌರವಸ್ಥಾನವನ್ನು ಕೊಟ್ಟುಕೊಂಡು ಅನ್ಯಧರ್ಮಗಳ ವಿಚಾರದಲ್ಲಿ ಕನಿಷ್ಠಭಾವವನ್ನು ಸೂಚಿಸಿರುತ್ತಾರೆ. ಎಲ್ಲ ನಾಗರಿಕ ಧರ್ಮಗಳ ಮತ್ತು ಮತಗಳ ತಳಹದಿಯೂ ಒಂದೇ, ಗುರಿಯೂ ಒಂದೇ, ಸಾಧನ ಮಾರ್ಗಗಳೂ ಹೆಚ್ಚು ಕಡಮೆ ಒಂದೇ, ಎಂಬುದು ಆಯಾ ಮತದ ಆಚಾರ್ಯರ, ಸಾಧು ಸಂತರ, ಜೀವನಚರಿತ್ರೆಗಳಿಂದ ತಿಳಿಯುತ್ತದೆ. ಆಚಾರ ಸಂಪ್ರದಾಯ ಮತಕರ್ಮಗಳಲ್ಲಿ ಭೇದಗಳಿರಬಹುದು. ಆದರೂ ಹಲವು ಧರ್ಮಗಳ ಪರೀಕ್ಷೆ ಮಾಡುವುದಕ್ಕೋಸ್ಕರ ಮತಾಂತರವನ್ನು ಹೊಂದುತ್ತಲೇ ಇರಬೇಕೆಂದು ಯಾರೂ ಹೇಳುವುದಿಲ್ಲ. ಕೈಹಿಡಿದ ಧರ್ಮದಲ್ಲಿಯೇ ಶ್ರದ್ಧಾಭಕ್ತಿಗಳನ್ನಿಟ್ಟು ತನ್ಮೂಲಕ ಸದ್ಗತಿಯನ್ನು ಪಡೆಯಬಹುದಾಗಿದೆ. "ಸ್ವಧರ್ಮೇ ನಿಧನಂ ಶ್ರೇಯಃ ಪರಧರ್ಮೋ ಭಯಾವಹಃ" ಎಂಬ ಗೀತೋಕ್ತಿಯೂ ಇದನ್ನೇ ಹೇಳುವುದೆಂದು ತೋರುತ್ತದೆ.

ಸಾಧಕನಾದವನು ಏಕಲಿಂಗ ನಿಷ್ಠಾಪರನಾಗಿರಬೇಕೆಂಬುದೂ ಅನ್ಯ ಮಾರ್ಗಾಚರಣೆಗಳ ಮೋಹದಿಂದ ಚಪಲಚಿತ್ತನಾಗಬಾರದೆಂಬುದೂ ಈ ಭವಿ ಭಕ್ತರೆಂಬ ಭೇದದ ಮುಖ್ಯಾಶಯವೆಂದು ಗ್ರಹಿಸಿದರೆ ಸಾಕಾಗಿರುತ್ತದೆ.

೪೧೪. "ಹಲವು ಕೊಂಬೆಗೆ ಹಾಯಲುಬೇಡ. ಬರು ಕಾಯಕೆ ನೀಡಬೇಡ. ಲೋಗರಿಗೆ ಕೊಟ್ಟು ಭ್ರಮಿತನಾಗಬೇಡ. ಆಚಾರವೆಂಬುದೊಂದು ಹಾವಸೆಗಲ್ಲು. ಭಾವತಪ್ಪಿದ ಬಳಿಕ ಏಗೈದಡಾಗದು. ಅಂಜದಿರು, ಅಳುಕದಿರು, ಪರದೈವಕ್ಕೆರಗದಿರು. ಕೂಡಲ ಸಂಗಮ ದೇವರ ಕಯ್ಯಲ್ಲಿ ಇರಿಸುವುದೆನ್ನ ಭಾರ"

(೪೫) "ದೇವನೊಬ್ಬ, ನಾಮ ಹಲವು ಪರಮಪತಿವ್ರತೆಗೆ ಗಂಡನೊಬ್ಬ. ಮತ್ತೊಂದಕ್ಕೆರಗಿದಡೆ ಕಿವಿ ಮೂಗು ಕೊಯ್ಯುವನು. ಹಲವು ದೈವದ ಎಂಜಲ ತಿಂಬವರ ನೇನೆಂಬೆನಯ್ಯ ಕೂಡಲ ಸಂಗಮ ದೇವಾ"

ಭವಿ ಎಂಬುದನ್ನು ವಿಪರೀತಾರ್ಥಮಾಡಿಕೊಳ್ಳುವ ಸ್ವಮತೀಯರಿಗೆ ಅಲ್ಲಮಪ್ರಭು, ಮಹದೇವಿಯಕ್ಕ, ಮೊದಲಾದ ಜ್ಞಾನಿಗಳು ಹೇಗೆ ತಿಳಿವಳಿಕೆಯನ್ನು ನೀಡಿದ್ದಾರೆಂಬುದನ್ನು ಹಿಂದೆಯೇ ನೋಡಿದ್ದೇವೆ.

'ಜ್ಞಾನಿಯಾದಡೆ ಮತಾಭಿಮಾನವ ತೋರಬಾರದು' ಎಂದು ಸಿದ್ಧರಾಮನು ಹೇಳಿರುವುದು ಅಲ್ಲಮಪ್ರಭುವಿನ

(೧೭೬) "ಕಾಮವ ಸುಟ್ಟು, ಹೋಮವನುರುಹಿ ತ್ರಿಪುರ ಸಂಹಾರದ ಕೀಲನರಿಯ ಬಲ್ಲಡೆ ಯೋಗಿಯಾದಡೇನು? ಭೋಗಿಯಾದಡೇನು? ಶೈವನಾದಡೇನು? ಸಂನ್ಯಾಸಿಯಾದಡೇನು? ಅಶನವ ತೊರೆದಾತ, ವ್ಯಸನವ ಮರೆದಾತ, ಗುಹೇಶ್ವರ ಲಿಂಗದಲ್ಲಿ ಅವರ ಹಿರಿಯರೆಂಬೆನು"

ಎಂಬ ಅಭಿಪ್ರಾಯವನ್ನು ಪುಷ್ಟಿಗೊಳಿಸುತ್ತದೆ.

ಸಮಾಜದ ಭದ್ರತೆಗೆ ತಳಹದಿಯಾಗಿ ಯಾವ ನೀತಿಗಳನ್ನು ವಚನಕಾರರು ಉಪದೇಶಿಸಿದ್ದಾರೆಂಬುದನ್ನು ಹಿಂದೆ ಒಂದು ಪ್ರಕರಣದಲ್ಲಿ ನೋಡಿದ್ದೇವೆ. ಅವು ನಿರಾಕ್ಷೇಪಣೀಯವಾಗಿವೆ. ವ್ಯಕ್ತಿಯ ಕ್ಷೇಮಕ್ಕೂ ಸಮಾಜದ ಕ್ಷೇಮಕ್ಕೂ ದೇಶದ ಕ್ಷೇಮಕ್ಕೂ ಅವು ವಜ್ರಕವಚಗಳಂತಿವೆ. ವಚನ

---

೪೧೪. ಬ. ವ. ಪುಟ ೯೪.

ಕಾರರು ಏರ್ಪಡಿಸುವ ಸಮಾಜದಲ್ಲಿ ಸ್ವಾತಂತ್ರ್ಯ, ಸರ್ವಸಮಾನತೆ, ಪರಸ್ಪರ ಭ್ರಾತೃಭಾವ, ಮೂಲಸ್ತಂಭಗಳಾಗಿವೆ. ಆದರೆ ಅವುಗಳನ್ನು ಸ್ಥಾಪಿಸುವುದು ವಚನಕಾರರಿಗೆ ಸುಲಭವಾದ ಕಾರ್ಯವೇನಾಗಿರಲಿಲ್ಲ.

ಐಕಮತ್ಯ ಸಾಧನೆಗೆ ಸಹಾಯವಾಗಿ ಮತದಲ್ಲಿ ವರ್ಣವ್ಯತ್ಯಾಸಗಳನ್ನು ತೆಗೆದುಹಾಕಿ ಭಕ್ತರೆಲ್ಲ ಒಂದೇ ಜಾತಿ, ಪರಸ್ಪರ ಸಮಾನರು, ಎಂದು ವಚನಕಾರರು ಹೇಳಿದರು. ಆದರೆ ಮೊದಲಿನಲ್ಲೇ ಸಮಾಜದಲ್ಲಿ ಭೇದ ಭಾವಗಳಿದ್ದು ವರ್ಣಗಳಿಂದಲೂ ವೃತ್ತಿಗಳಿಂದಲೂ ಹಲವು ಜಾತಿಗಳು ಏರ್ಪಟ್ಟಿರುವಾಗ, ವೀರಶೈವವನ್ನು ಕೈಹಿಡಿದ ಕೂಡಲೆ ಅವುಗಳೆಲ್ಲ ಅದೃಶ್ಯ ವಾಗುವುದುಂಟೆ? ಮನಸ್ಸು ಅದಕ್ಕೆ ಸಿದ್ಧವಾಗುವುದು ಕಷ್ಟ. ತತ್ತ್ವವನ್ನು ಒಪ್ಪಿಕೊಳ್ಳುತ್ತದೆ, ಆಚರಣೆಯಲ್ಲಿ ಹಿಂದೆ ಬೀಳುತ್ತದೆ. ಆದುದರಿಂದ ವಚನಧರ್ಮ ಪ್ರಚಾರಕ್ಕೆ ಬಂದು ಹಲವು ಪಂಗಡದವರು ಲಿಂಗಧಾರಿಗ ಳಾದಾಗ ಒಬ್ಬರೊಡನೊಬ್ಬರು ಸರಿಯಾಗಿ ವ್ಯವಹರಿಸುತ್ತಿರಲಿಲ್ಲವೆಂದು ತೋರುತ್ತದೆ. ಅದನ್ನು ಸರಿಪಡಿಸುವುದಕ್ಕಾಗಿ ಚೆನ್ನಬಸವೇಶ್ವರನು ಬಹಳವಾಗಿ ಶ್ರಮಿಸಿದನೆಂದು ಹೇಳಬೇಕು.

೪೧೩. "ದಾಸೀಪುತ್ರನಾಗಲಿ, ವೇಶ್ಯಾಪುತ್ರನಾಗಲಿ, ಶಿವದೀಕ್ಷೆಯಾದ ಬಳಿಕ ಸಾಕ್ಷಾತ್ ಶಿವನೆಂದು ವಂದಿಸಿ, ಪೂಜಿಸಿ, ಪಾದೋದಕ ಪ್ರಸಾದವ ಕೊಂಬುದೇ ಯೋಗ್ಯ. ಹೀಗಲ್ಲದೆ, ಉದಾಸೀನವ ಮಾಡಿ ಬಿಡುವವರಿಗೆ ಪಂಚಮಹಾಪಾತಕ ನರಕ ಕಾಣಾ, ಕೂಡಲ ಚೆನ್ನ ಸಂಗಮ ದೇವಾ"

ಎಂದು ಆತ ಎಲ್ಲರಿಗೂ ಎಚ್ಚರಿಕೆ ಕೊಟ್ಟಿದ್ದಾನೆ. ಎಲ್ಲರೂ ಸಮಾಜದಲ್ಲಿ ಸಮಾನರು ಎಂಬುದು ದೃಢಪಡುವುದಕ್ಕೆ ಸಹಪಂಕ್ತಿ ಭೋಜನ, ಕೊಳ್ಕೊಡೆ, ಮುಖ್ಯವಾದುವು. ಆದುದರಿಂದ ಭಕ್ತರ ವೃತ್ತಿ ಯಾವುದಾದರೂ ಆಗಿರಲಿ, ಅವರು ಲಿಂಗಧಾರಿಗಳಾಗುವ ಮೊದಲು ಯಾವ ಜಾತಿಯವರೇ ಆಗಿದ್ದಿರಲಿ, ಅವುಗಳಾವುದನ್ನೂ ಗಣಿಸಿದೆ ಅವರ ಮನೆಯಲ್ಲಿ ಊಟಮಾಡಬೇಕು, ಅವರ ಸಂಬಂಧಗಳನ್ನೂ ಬೆಳಸಬೇಕು.

---

೪೧೩. ವ. ಶಾ. ಸಾ. ಭಾಗ ೧ (ಪೂ) ಪುಟ ೩೭೩.

೪೧೬. "ಭವಿಯಲ್ಲಿ ಭವಿಯು ಹಸ್ತದಲ್ಲಿ ಭವಿಪಾಕವಲ್ಲವೆ, ಭಕ್ತರ ಮನೆಯಲ್ಲಿ ಭಕ್ತರ ಹಸ್ತದಲ್ಲಿ, ಭವಿಪಾಕ ಉಂಟೇ? ಇಲ್ಲವಯ್ಯ. ಸುಡಲಿವರ ಯುಕ್ತಿ ಎಂಥಾದ್ದೋ? ಭಕ್ತಿ ಎಂಥಾದ್ದೋ? ಮುಕ್ತಿ ಎಂಥಾದ್ದೋ? ಆ ಪರಮ ಸದ್ಭಕ್ತನ ಹಸ್ತದಿಂದೆ ಬಂದ ಸಕಲ ಪದಾರ್ಥಗಳು ಲಿಂಗ ಪ್ರಸನ್ನತ್ವದಿಂದೆ ಬಂದುದಾಗಿ ಆ ಪದಾರ್ಥವನು ಶುದ್ಧತೆಯಿಂದ ಲಿಂಗಕ್ಕೆ ಕೊಟ್ಟು ಕೊಂಬುದೇ ದೇವಭಕ್ತರ ನಡೆ. ಅವರೊಕ್ಕುದು ಮಹಾ ಪ್ರಸಾದವಯ್ಯ ಕೂಡಲ ಚೆನ್ನ ಸಂಗಮ ದೇವಾ"

ಭಕ್ತರು ಹೀಗೆ ಪರಸ್ಪರ ಭೋಜನ ವ್ಯವಹಾರವನ್ನಿಟ್ಟುಕೊಳ್ಳಬೇಕು. ಗುರು ತನ್ನ ಶಿಷ್ಯರ ವಿಚಾರದಲ್ಲೂ ಸರಿಯಾಗಿ ವರ್ತಿಸಬೇಕು. ಗುರು ಉತ್ತಮಜಾತಿಯಿಂದ ಬಂದು ಲಿಂಗಧಾರಿಯಾಗಿರಬಹುದು; ಕೀಳು ಜಾತಿಯವನಿಗೆ ದೀಕ್ಷೆಕೊಟ್ಟು ಶಿಷ್ಯನನ್ನಾಗಿ ಅವನನ್ನು ಮಾಡಿಕೊಂಡಿರಬಹುದು. ಆ ಶಿಷ್ಯನು ಭಕ್ತಿಯಿಂದ ಭೋಜನಕ್ಕೆ ಕರೆದಾಗ, ಅವನ ಮನೆಯಲ್ಲಿ ಊಟಮಾಡಲಿಷ್ಟವಿಲ್ಲದೆ, ಅಕ್ಕಿ ಬೇಳೆ ಮುಂತಾದ ಸಾಹಿತ್ಯವನ್ನು ತರಿಸಿಕೊಂಡು ತನ್ನ ಮಠದಲ್ಲಿಯೇ ಅಡಿಗೆ ಮಾಡಿಕೊಂಡು ಉಂಡ ಉದಾಹರಣೆಗಳು ಹಲವು ಇದ್ದಿರಬಹುದು. ನಡೆ ನುಡಿ ಬೇರಾದ ಇಂಥ ಸಂದರ್ಭಗಳನ್ನು ವಚನಕಾರರು ಕಟುವಾಗಿ ಟೀಕಿಸಿದ್ದಾರೆ.

೪೧೭. ಕುಲಹೀನ ಶಿಷ್ಯಂಗೆ ಅನುಗ್ರಹವ ಮಾಡಿ, ತಿರುಗಿ ಅವನ ಮನೆಯಲ್ಲಿ ಉಣಬಾರದೆಂದು, ಅಕ್ಕಿ ಕಣಕವ ತಕ್ಕೊಂಡು ಹೋಗುವ ಗುರುವನು ಕಂಡರೆ, ಕೆಡವಿಹಾಕಿ ಮೂಗನೇ ಕೊಯ್ದು, ಇಷ್ಟಂಗಿಯ ಕಲ್ಲಲೆ ತಿಕ್ಕಿ, ಸಾಸಿವೆ ಹಿಟ್ಟನೆ ತಳಿದು, ಮೇಲೆ ನಿಂಬಿಯ ಹುಳಿಯನೆ ಹಿಂಡಿ, ಪಡುವಲ ಗಾಳಿಗೆ ಹಿಡಿ ಎಂದಾತ ನಮ್ಮ ಅಂಬಿಗರ ಚೌಡಯ್ಯ"

ಇನ್ನು ಮದುವೆಯ ವಿಚಾರ. ಇದು ಬಹಳ ತೊಡಕುಳ್ಳದ್ದು. ಸಮಾಜದಲ್ಲಿ ಇದನ್ನು ಒಪ್ಪಿಸುವುದು ಬಹಳ ಕಷ್ಟ. ವಚನಕಾರರು

೪೧೮. "ಉಂಬಲ್ಲಿ ಉಡುವಲ್ಲಿ ಕುಲವಳಿಯಿತ್ತೆಂಬಿರಿ. ಕೊಂಬಲ್ಲಿ ಕೊಡುವಲ್ಲಿ ಕುಲವ ನರಸುವ ಮಾದಿಗರನೇನೆಂಬೆನಯ್ಯ? ಇವರನೆಂತು ಭಕ್ತರೆಂಬೆನಯ್ಯ? ಇವರನೆಂತು ಯುಕ್ತರೆಂಬೆನಯ್ಯ? ............ ಅವರಲ್ಲಿ ಕುಲವ ನೋಡದೆ ಆಚಾರವ ನೋಡಿ, ಅವರಿಂಗೆ ಬೇಕಾದ ಹೆಣ್ಣ ಕೊಟ್ಟು, ತಮಗೆ ಬೇಕಾದ ಹೆಣ್ಣ ತಂದುಕೊಂಬುದು. ಈ ಕ್ರಮವನರಿಯದವರ ಭಕ್ತಿ, ಹೊಲತಿ ಶುದ್ಧ ನೀರ ಮಿಂದಂತಾಯಿತ್ತು ಕೂಡಲ ಸಂಗಮ ದೇವಾ"

---

೪೧೬. ವ. ಶಾ. ಸಾ. ಭಾಗ ೧ (ಪೂ) ಪುಟ ೩೭೩.
೪೧೭–೮. ವ. ಶಾ. ಸಾ. ಭಾಗ ೧ (ಪೂ) ಪುಟ ೩೭೫, ೩೭೬.

೪೨೯. "ಉಂಬುದು ಉಡುವುದು ಶಿವಾಚಾರ, ಕೊಂಬುದು ಕೊಡುವುದು ಕುಲಾಚಾರ ಎಂಬ ಅನಾಚಾರಿಯ ಮಾತ ಕೇಳಲಾಗದು. ವಿಪ್ರ ಮೊದಲು ಅಂತ್ಯಜ ಕಡೆಯಾಗಿ ಶಿವಭಕ್ತರ ಒಂದೇ ಎಂದು ಕೊಟ್ಟು ಕೊಂಬುದು ಸದಾಚಾರ, ಉಳಿದವೆಲ್ಲ ಅನಾಚಾರ ............ಕೂಡಲ ಚೆನ್ನ ಸಂಗಮ ದೇವಯ್ಯ"

ಎಂದು ಹೇಳಿದ್ದಾರೆ. ಭಕ್ತರಲ್ಲಿ ಕುಲ ಜಾತಿ ಭೇದಗಳಿಲ್ಲವೆಂದೂ ಹೆಣ್ಣು ಕೊಟ್ಟು ತರುವುದು ಸದಾಚಾರವೆಂದೂ ವಚನಕಾರರು ಹೇಳಿದ್ದಾರೆ. ಮಧುವಯ್ಯನೆಂಬ ಪೂರ್ವಜಾತಿಯಲ್ಲಿ ಬ್ರಾಹ್ಮಣನಾಗಿದ್ದವನ ಮಗಳನ್ನು ಹರಳಯ್ಯನೆಂಬ ಪೂರ್ವಜಾತಿಯ ಹೊಲೆಯನ ಮಗನಿಗೆ ಕೊಡಿಸಿ,—ಲಿಂಗ ಧಾರಿಗಳಾದ್ದರಿಂದ ಸರ್ವಸಮಾನರೆಂಬ ತತ್ತ್ವಾನುಸಾರ—ಶರಣರು ಮದುವೆ ಯನ್ನು ಮಾಡಿಸಿದರು. ಸಮಾಜದಲ್ಲಿ ಇದು ಅಲ್ಲಕಲ್ಲೋಲವನ್ನುಂಟು ಮಾಡಿತು. ಬ್ರಾಹ್ಮಣಾದಿಗಳು ದೊರೆಯಾದ ಬಿಜ್ಜಳನಲ್ಲಿ ದೂರು ಹೇಳಿದರು. ವರ್ಣಾಶ್ರಮಧರ್ಮಪರಿಪಾಲನೆಯ ಕರ್ತವ್ಯವುಳ್ಳ ದೊರೆ ಆ ಹೊಸ ಬೀಯ ಗರನ್ನು ಕ್ರೂರವಾಗಿ ದಂಡಿಸಿದನು. ಶಿವಭಕ್ತರು ತಮ್ಮ ಮತಧರ್ಮಕ್ಕೆ ಅಡ್ಡಿಯುಂಟಾಯಿತೆಂದು ಕೋಪಗೊಂಡರು. ಕಡೆಯಲ್ಲಿ ಬಿಜ್ಜಳನ ಪ್ರಾಣಾ ಪಹರಣವೂ ಆಯಿತು ಎಂದು ಬಸವಪುರಾಣಾದಿಗಳು ಹೇಳುತ್ತವೆ.

ವಚನಧರ್ಮದಲ್ಲಿ ಕಾಯಕಕ್ಕೆ ಹೆಚ್ಚು ಪ್ರಾಶಸ್ತ್ಯವುಂಟು. ಕಾಯಕ ವೆಂದರೆ ಜೀವನೋಪಾಯಕ್ಕೆ ಕೈಕೊಂಡ ವೃತ್ತಿ. ಎಲ್ಲ ವೃತ್ತಿಗಳೂ ಗೌರವ ಯುತವಾದುವೆಂದೂ, ಅವುಗಳಲ್ಲಿ ಹೆಚ್ಚು ಕಡಮೆಗಳಿಲ್ಲವೆಂದೂ, ವೃತ್ತಿಗಳಿಂದ ಜಾತಿಗಳು ಏರ್ಪಡುವುದಿಲ್ಲವೆಂದೂ ವಚನಧರ್ಮ ಹೇಳುತ್ತದೆ.

೪೩೦.....ಕಾಸಿ ಕಮ್ಮಾರನಾದ, ಬೀಸಿ ಮಡಿವಳನಾದ, ಹಾಸನಿಕ್ಕಿ ಸಾಲಿಗನಾದ, ವೇದವ ನೋದಿ ಹಾರುವನಾದ............ಇದು ಕಾರಣ, ಕೂಡಲ ಸಂಗಮ ದೇವಾ, ಲಿಂಗ ಸಂಗವನರಿತವನೇ ಕುಲಜನು"

೪೩೧. "ವೇದ ಶಾಸ್ತ್ರಕ್ಕೆ ಹಾರುವನಾಗಿ, ವೀರ ವಿತರಣಕ್ಕೆ ಕ್ಷತ್ರಿಯನಾಗಿ, ಸರ್ವವನಾ ರೈದು ನೋಡುವಲ್ಲಿ ವೈಶ್ಯನಾಗಿ, ಕೃಷಿಯ ಮಾಡುವುದಕ್ಕೆ ಶೂದ್ರನಾಗಿ, ಇಂತೀ ಜಾತಿ ಗೋತ್ರದೊಳಗೆ ನೀಚ ಶ್ರೇಷ್ಠವೆಂಬ ಎರಡು ಕುಲವಲ್ಲದೆ, ಹೊಲೆ ಹದಿ

೪೨೯. ವ. ಶಾ. ಸಾ. ಭಾಗ ೧ (ಪೂ) ಪುಟ ೩೭೭.
೪೩೦–೧. ವ. ಶಾ. ಸಾ. ಭಾಗ ೧ (ಪೂ) ಪುಟ ೩೬೨, ೩೬೩.

ನೆಂಟು ಜಾತಿ ಎಂಬ ಕುಲವಿಲ್ಲ. ಬ್ರಹ್ಮವನರಿದಲ್ಲಿ ಬ್ರಾಹ್ಮಣ, ಸರ್ವಜೀವ ಹತ ಕರ್ಮಕ್ಕೊಳಗಾದಲ್ಲಿ ಸಮ್ಮಗಾರ. ಈ ಉಭಯವನರಿದು ಮರೆಯಲಿಲ್ಲ ಕೈಯ್ಯುಳಿ ಗತ್ತಿ ಅಡಿಗೂಂಟ ಕಡೆಯಾಗಬೇಡ ಅರಿನಿಜಾತ್ಮರಾಮ ರಾಮನಾ"

ಕಾಯಕವನ್ನು ಬಹು ಗೌರವದಿಂದಲೂ ಭಯ ಭಕ್ತಿಯಿಂದಲೂ ನೋಡತಕ್ಕದ್ದು. ಅದು ಗುರು ಲಿಂಗ ಜಂಗಮರಿಗಿಂತ ಹೆಚ್ಚು. ಕಾಯಕದಲ್ಲಿ ನಿಷ್ಠೆಯುಳ್ಳವನಿಗೆ ಮತ್ತೆ ಯಾವ ಸಾಧನೆಯೂ ಇಲ್ಲದೆ ಮುಕ್ತಿ ದೊರೆಯುತ್ತದೆ ಎಂಬುದು ವಚನಕಾರರ ಅಭಿಪ್ರಾಯ.

೪೨೨. "ಕಾಯಕದಲ್ಲಿ ನಿರತನಾದಡೆ, ಗುರುದರ್ಶನವಾದಡೂ ಮರೆಯಬೇಕು, ಲಿಂಗಪೂಜೆಯಾದಡೂ ಮರೆಯಬೇಕು, ಜಂಗಮ ಮುಂದಿದ್ದಡೂ ಹಂಗು ಹರಿಯಬೇಕು, ಕಾಯಕವೇ ಕೈಲಾಸವಾದಕಾರಣ. ಅಮಳೇಶ್ವರ ಲಿಂಗ ವಾಯಿತ್ತಾದಡೂ ಕಾಯಕದೊಳಗು"

ಮೇಲಿನ ವಚನದಲ್ಲಿ ಹೇಳಿರುವ "ಅಮಳೇಶ್ವರ ಲಿಂಗವಾಯಿತ್ತಾದಡೂ ಕಾಯಕದೊಳಗು" ಎಂಬುದು ಬಹಳ ಸ್ವಾರಸ್ಯವಾಗಿಯೂ ಮುಖ್ಯವಾಗಿಯೂ ಇದೆ. ಸಾಕ್ಷಾತ್ ಶಿವನೇ ಆದರೂ ಕಾಯಕ ಮಾಡಬೇಕು; ಸೋಮಾರಿಯಾಗಿ ಕಾಲ ಕಳೆಯ ಕೂಡದು, ಭಿಕ್ಷೆಯಿಂದ ಜೀವನ ನಡೆಯಿಸಕೂಡದು. ನುಲಿಯ ಚಂದಯ್ಯನೆಂಬ ಶಿವಭಕ್ತನು ಹಗ್ಗಗಳನ್ನು ಮಾಡುವ ಕಾಯಕವುಳ್ಳವನಾಗಿದ್ದನು. ಆತನು ಜಂಗಮದಾಸೋಹದಲ್ಲಿಯೇ ಲಿಂಗಪೂಜೆಯ ಫಲ ಉಂಟೆಂದು ತಿಳಿದಿದ್ದನು. ಆತನ ಮನಸ್ಸನ್ನು ಪರೀಕ್ಷಿಸಬೇಕೆಂದು ಒಂದು ದಿನ ಆತನ ಇಷ್ಟಲಿಂಗ ಜಾರಿ ನೀರಿನಲ್ಲಿ ಬಿದ್ದಿತಂತೆ. ಆಗ ಆ ಭಕ್ತ ಲಿಂಗವನ್ನು ಹಾಗೆಯೇ ಬಿಟ್ಟು ಜಂಗಮದಾಸೋಹಕ್ಕಾಗಿ ಹೊರಟು ಬಂದನು. ಲಿಂಗದೇವನು ಆತನ ದೃಢಮನಸ್ಸನ್ನು ನೋಡಿ, ಮೆಚ್ಚಿ, ಸಾಕಾರನಾಗಿ ಹಿಂಬಾಲಿಸಿ, 'ಚಂದಯ್ಯ! ನನ್ನನ್ನು ಸ್ವೀಕರಿಸು, ಬಿಟ್ಟು ಹೋಗಬೇಡ' ಎಂದು ಕೇಳಿಕೊಂಡನು. ಕಡೆಯಲ್ಲಿ ಒಂದು ಪಂಚಾಯತಿ ನಡೆದು, ಚಂದಯ್ಯ "ಕಣ್ಣಿಯ ಮಾಡಬಲ್ಲರೆ ಬಾರಾ" ಎಂದು ಲಿಂಗ ದೇವನಿಗೆ ಹೇಳಿದನಂತೆ. ಲಿಂಗದೇವನು ಹಗ್ಗವನ್ನು ಹೊಸೆಯುತ್ತ ಚಂದಯ್ಯನ ಮನೆಯಲ್ಲಿದ್ದನೆಂದು ಶೂನ್ಯಸಂಪಾದನೆಯಲ್ಲಿ ಹೇಳಿದೆ.

---

೪೨೨. ವ. ಶಾ. ಸಾ. ಭಾಗ ೧ (ಉ) ಪುಟ ೧೪.

೪೩೩. "ನೇಮವ ಮಾಡಿಕೊಂಡು, ಭಕ್ತರ ಭವನಂಗಳ ಹೊಕ್ಕು, ಕಾಯಕವ ಬಿಟ್ಟು, ಹೊನ್ನು ಬೇಡಿಹೆನೆಂಬುದು ಕಷ್ಟವಲ್ಲವೇ ಸದ್ಭಕ್ತಂಗೆ? ಆ ಗುಣ ಅಮಳೇಶ್ವರ ಲಿಂಗಕ್ಕೆ ದೂರ"

(೪೦೧) "ಮನ ಶುದ್ಧವಿಲ್ಲದವಂಗೆ ದ್ರವ್ಯದ ಬಡತನವಲ್ಲದೆ, ಚಿತ್ತಶುದ್ಧನಾಗಿ ಕಾಯಕವ ಮಾಡುವಲ್ಲಿ, ಸದ್ಭಕ್ತಂಗೆ ಎತ್ತ ನೋಡಿದಡತ್ತ ಲಕ್ಷ್ಮಿ ತಾನಾಗಿಪ್ಪಳು, ಮಾರಯ್ಯ ಪ್ರಿಯ ಅಮಳೇಶ್ವರ ಲಿಂಗದ ಸೇವೆಯುಳ್ಳನ್ನಕ್ಕ"

ಆದುದರಿಂದ ತನ್ನ ಜೀವನ ಸಾಗುವುದಕ್ಕಾಗಿ ಕಾಯಕವನ್ನು ಕೈಕೊಳ್ಳಬೇಕು; ಮತ್ತು ದಾಸೋಹ ಮಾಡುವುದಕ್ಕಾಗಿಯೂ ಕಾಯಕವನ್ನು ಕೈಕೊಳ್ಳಬೇಕು. ಸ್ವಂತವಾಗಿ ದುಡಿದು ಸಂಪಾದಿಸಿದ ಧನದಿಂದ ದಾಸೋಹ ಮಾಡಿದರೆ ಗುರು ಲಿಂಗ ಜಂಗಮರು ತೃಪ್ತರಾಗುವರು. ಇಲ್ಲದಿದ್ದರೆ ತೃಪ್ತರಾಗುವುದಿಲ್ಲ.

೪೩೪. "ಕೃಷಿ ಕೃತ್ಯ ಕಾಯಕದಿಂದಾದಡೇನು? ತನು ಮನ ಬಳಲಿಸಿ ತಂದು ದಾಸೋಹವ ಮಾಡುವ ಪರಮ ಸದ್ಭಕ್ತನ ಪಾದವ ತೋರಯ್ಯ ಎನಗೆ. ಅದೆಂತೆನೆ, ಆತನ ತನು ಶುದ್ಧ, ಆತನ ಮನ ಶುದ್ಧ, ಆತನ ನಡೆ ಶುದ್ಧ, ನುಡಿ ಎಲ್ಲ ಪಾವನವು. ಆತಂಗೆ ಉಪದೇಶವ ಮಾಡಿದಾತನೇ ಪರಮ ಸದ್ಗುರು. ಅಂತಪ್ಪ ಸದ್ಭಕ್ತನ ಮನೆಯ ಕೈಲಾಸವೆಂದು ಹೊಕ್ಕು ಲಿಂಗಾರ್ಚನೆಯ ಮಾಡುವ ಜಂಗಮವೇ ಜಗತ್ಪಾವನ. ಇಂತಪ್ಪವರ ನಾನು ನೆರೆನಂಬಿ, ನಮೋ ನಮೋ ಎಂಬೆನಯ್ಯ ಕೂಡಲ ಸಂಗಮ ದೇವಾ"

ಪಿತ್ರಾರ್ಜಿತವಾದ ಆಸ್ತಿಯುಂಟೆಂದು ಬಿಮ್ಮನೆ ಬೆರೆತುಗೊಂಡು, ತನು ಮನ ಬಳಲಿಸದೆ, ಕಾಯಕದಿಂದ ಸಂಪಾದಿಸದೆ ಇರುವವನ ಮನೆಯನ್ನು ಹೊಗಬಾರದು.

೪೩೫. ...."ಅವನ ಕಾಯಕವ ವಿಚಾರಿಸದೆ ಅವನ ಮನೆಯ ಹೊಕ್ಕು ಲಿಂಗಾರ್ಚನೆಯ ಮಾಡುವ ಜಂಗಮಕ್ಕೆ ಏಳನೆಯ ಪಾತಕ. ಇಂತಪ್ಪ ಗುರು ಶಿಷ್ಯ ಜಂಗಮರ ಬಾಳುವೆ, ಹುಲಿ ಕವಿಲೆಯ ತಿಂದು ಮಿಕ್ಕಿತ ನರಿ ತಿಂದಂತಾಯಿತ್ತು, ಕಾಣಾ ಕೂಡಲ ಚೆನ್ನ ಸಂಗಮ ದೇವಾ"

---

೪೩೩. ವ. ಶಾ. ಸಾ. ಭಾಗ ೧ (ಉ) ಪುಟ ೧೪.

೪೩೪. ವ.ಶಾ.ಸಾ.ಭಾಗ ೧ (ಉ) ಪುಟ ೧೮ ೪೩೫. ವ.ಶಾ.ಸಾ.ಭಾಗ ೧(ಉ) ಪುಟ ೧೯

ಕಾಯಕದಿಂದ ಲಕ್ಷ್ಮಿ ತಾನಾಗಿ ಒಲಿಯುವಳಾದರೂ ಕಾಯಕ ಮಾಡುವುದು ಹೆಚ್ಚಾಗಿ ಲಾಭ ಸಂಪಾದಿಸುವುದಕ್ಕಲ್ಲ; ನ್ಯಾಯವಾದ ಬೆಲೆಗಿಂತ ಹೆಚ್ಚಾಗಿ ತೆಗೆದುಕೊಂಡರೆ ಮಹಾ ಪಾಪ ಎಂದು ಉತ್ತಮವಾದ ವ್ಯವಹಾರಧರ್ಮವನ್ನು ವಚನಧರ್ಮ ಬೋಧಿಸುತ್ತದೆ. ನುಲಿಯ ಚಂದಯ್ಯನ ಬಳಿ ಕಾಯಕ ಮಾಡಿಕೊಂಡಿದ್ದ ಲಿಂಗದೇವನು ಆ ಹಗ್ಗವನ್ನು ಮಾರುವುದಕ್ಕೆ ಹೋಗಿ ಒಂದು ದಿನ ಸಾವಿರ ಹೊನ್ನುಗಳನ್ನು ತಂದನಂತೆ! ಅದನ್ನು ನೋಡಿ ಚಂದಯ್ಯ,

೪೩೬. "ಸತ್ಯ ಶುದ್ಧ ಕಾಯಕದಲ್ಲಿ ಬಂದ ದ್ರವ್ಯದಲ್ಲಿ ಚಿತ್ತ ನಿಶ್ಚಿಂದವಾಗದಿರಬೇಕು. ನೇಮದ ಕೂಲಿಯಿಂದಿನ ನಿತ್ಯ ನೇಮದಲ್ಲಿ ಸಂದಿರಬೇಕು. ನೇಮದ ಕೂಲಿಯ ಬಿಟ್ಟು ಹೇಮದಾಸೆಗೆ ಕಾಳಿಸಿ ದ್ರವ್ಯವ ಹಿಡಿದರೆ ತಾ ಮಾಡುವ ಸೇವೆ ನಷ್ಟವಯ್ಯ! ನಿನ್ನಾಸೆ ವೇಷದ ಪಾಶಕ್ಕೆ ನೀನೇ ಹೋಗು!...."

ಎಂದು ಹೇಳಿ ಲಿಂಗದೇವನನ್ನು ಹೊರಡಿಸಿ ಬಿಟ್ಟನಂತೆ!

೪೩೭. "....ಕಾರೆಯ ಸೊಪ್ಪಾದರೂ ಕಾಯಕದಿಂದ ಬಂದುದು ಲಿಂಗಕ್ಕರ್ಪಿತವಲ್ಲದೆ, ದುರಾಸೆಯಿಂದ ಬಂದುದು ಅನರ್ಪಿತ"

೪೩೮. "ಹಾಗದ ಕಾಯಕವ ಮಾಡಿಕೊಂಡು ಹಣವಡ್ಡವ ತಾ ಎಂಬಲ್ಲಿ ಸತ್ಯ ಕಾಯಕ ಉಂಟೆ? ಭಕ್ತರಲ್ಲಿ ಕಾಯಕಕ್ಕೆ ಕಡನೆಯಾಗಿ ತಾ ಎಂಬುದು ಅಮುಗೇಶ್ವರ ಲಿಂಗಕ್ಕೆ ಚಿತ್ತ ಶುದ್ಧ ಕಾಯಕ"

ಆದುದರಿಂದ ಲಾಭದಾಸೆ ದುರಾಸೆ ಕಾಯಕದಲ್ಲಿರಬಾರದು. ಲಿಂಗದೇವನಿಗೂ ಕಾಯಕ ತಪ್ಪದಿರುವಾಗ ಗುರುವಿಗೂ ಜಂಗಮನಿಗೂ ಅದು ತಪ್ಪಿದ್ದಲ್ಲ ಎಂಬುದು ಸ್ವತಃ ಸಿದ್ಧಿಸುತ್ತದೆ. ಅವರು ಭಿಕ್ಷೆಯನ್ನು ಬೇಡದೆ ಕಾಯಕವನ್ನು ಮಾಡತಕ್ಕದ್ದು.

೪೩೯. "ಗುರುವಾದಡೂ ಕಾಯಕದಿಂದವೇ ಜೀವನ್ಮುಕ್ತಿ. ಲಿಂಗವಾದಡೂ ಕಾಯಕದಿಂದವೇ ಶಿಲೆಯ ಕುಲ ಹರಿವುದು. ಜಂಗಮವಾದರೂ ಕಾಯಕದಿಂದ ವೇಷದ ಪಾಶ ಹರಿವುದು. ಇದು ಚೆನ್ನಬಸವಣ್ಣ ಪ್ರಿಯ ಚಂದೇಶ್ವರ ಲಿಂಗದ ಅರಿವು"

---

೪೩೬–೮. ಶೂ. ಸಂ. ಪುಟಗಳು ೨೫೩, ೨೨೩.

೪೩೯ ವ. ಶಾ. ಸಾ. ಭಾಗ ೧ (ಉ) ಪುಟ ೨೩೮.

೪೩೦. "ಬ್ರಹ್ಮಕ್ಕೆ ಬಾಯ್ದೆರೆದು ಮಾತನಾಡಿ, ಪರಬೊಮ್ಮದ ವೇಷವ ನುಡಿದು, ಒಮ್ಮನ ಅಂಬಲಿಯನಿಕ್ಕೆಂದು ಹಲುಬುತ್ತ ಹೊಲಬು ಗೆಟ್ಟವರ ಕಂಡು, ಅವರಿಗೆ ಫಲ ಪದವಿಲ್ಲೆಂದ ಅಂಬಿಗರ ಚೌಡಯ್ಯ"

ಸಮಾಜದಲ್ಲಿ ವಿವಿಧವಾದ ಕಾಯಕಗಳನ್ನು ಅನುಸರಿಸುವ ಜನರಿಗೆ ವಚನಧರ್ಮ ಇನ್ನೂ ಒಂದು ಧೈರ್ಯವನ್ನು ಹೇಳುತ್ತದೆ. ಪರಮಾತ್ಮನು ಯಾವ ವೃತ್ತಿಭೇದವನ್ನೂ ನೋಡದೆ ಒಲಿಯುತ್ತಾನೆ.

೪೩೧. "........ಬೇಡಂಗೆ ಜೇಡಂಗೆ ಡೋಹರಂಗೆ ಹೊಲೆಯಂಗೆ ರೂಢಿಗೀಶ್ವರನೊಲಿದ ಪರಿಯ ನೋಡಾ"

೪೩೨. "ದೇವ, ನಿಮ್ಮ ಪೂಜಿಸಿ ಚೆನ್ನನ ಕುಲ ಚೆನ್ನಾಯಿತ್ತು. ದೇವ ನಿಮ್ಮ ಪೂಜಿಸಿ ದಾಸನ ಕುಲ ದೇಸಿವಡೆದಿತ್ತು. ನಿಮ್ಮ ಅಡಿಯಕ್ಕೆರಗಿ ಮಡಿವಳ ಮಾಚಯ್ಯ ನಿಮ್ಮಡಿಯಾದ. ನೀನೊಲಿದ ಕುಲಕ್ಕೆ ನೀನೊಲಿದ ಹೊಲೆಗೆ ಮೇರೆಯುಂಟೇ"?

ಆದುದರಿಂದ ವೃತ್ತಿಗೂ ಜಾತಿಗೂ, ಜಾತಿಗೂ ಭಕ್ತಿಗೂ ಸಂಬಂಧವಿಲ್ಲ. ಅಷ್ಟೇ ಅಲ್ಲ. "ಚೋಳನೆತ್ತ ಚೆನ್ನನೆತ್ತ! ಚೆನ್ನ ಚೋಳನ ಮನೆಯ ಕಂಪಣಿಗನಯ್ಯ." ಅಂಥ ಚೋಳರಾಜನ ಮನೆಯಲ್ಲುಣ್ಣದೆ ಚೆನ್ನನ ಮನೆಯಲ್ಲಿ ಅಂಬಲಿಯನುಂಡ ಪರಮೇಶ್ವರ, ಎಂದು ವಚನಕಾರರು ಧೈರ್ಯವನ್ನು ಹೇಳಿದ್ದಾರೆ.

ಜೀವನದ ವಿಚಾರದಲ್ಲಿ, ಆತ್ಮೋದ್ಧಾರದ ವಿಚಾರದಲ್ಲಿ, ವಚನಧರ್ಮ ಆಶಾವಾದವನ್ನು ತುಂಬುತ್ತದೆ; ದುಃಖವಾದವನ್ನು ತುಂಬುವುದಿಲ್ಲ. ಇಹಲೋಕದ ಜೀವನವನ್ನು ತುಂಬು ಜೀವನವನ್ನಾಗಿ ಮಾಡಿಕೊಳ್ಳಬೇಕು. ಮನುಷ್ಯದೇಹವನ್ನು ಧರಿಸಿ ಹುಟ್ಟಿದುದಕ್ಕೆ ದುಃಖಪಡಬೇಕಾದುದಿಲ್ಲ. ಐಹಿಕ ಸುಖವನ್ನೂ ಪರಮಾರ್ಥದ ಆನಂದವನ್ನೂ ದೊರಕಿಸಿಕೊಳ್ಳುವವನೇ ಜಾಣ.

---

೪೩೦. ವ. ಶಾ. ಸಾ. ಭಾಗ ೧ (ಉ.) ಪುಟ ೨೪೯.

೪೩೧. ವ. ಶಾ. ಸಾ. ಭಾಗ ೧ (ಪೂ) ೩೬೬.

೪೩೨. ಬ. ವ. ಪುಟ ೯೧.

೪೩೩. "ಕಾಯದಿಂದ ಲಿಂಗದರ್ಶನ, ಕಾಯದಿಂದ ಜಂಗಮದರ್ಶನ, ಕಾಯದಿಂದ ಪ್ರಸಾದಸಂಪತ್ತು. ಕೂಡಲ ಚೆನ್ನ ಸಂಗಯ್ಯ ಈ ಕಾಯದಿಂದ ನಿಮ್ಮುವ ಕಂಡೆನಯ್ಯ"

೪೩೪. "ಅಂಗವೇ ಭೂಮಿಯಾಗಿ, ಲಿಂಗವೇ ಬೆಳೆಯಾಗಿ, ವಿಶ್ವಾಸವೆಂಬ ಬಿತ್ತ ಬಲಿದು, ಉಂಡು ಸುಖಿಯಾಗಿರಬೇಕೆಂದ ಕಾಮ ಭೀಮ ಜೀವನದೊಡೆಯ"

೪೩೫. "ಭಕ್ತನ ಮನ ಹೆಣ್ಣಿನೊಳಗಾದರೆ, ವಿವಾಹವಾಗಿ ಕೊಡುವುದು. ಭಕ್ತನ ಮನ ಮಣ್ಣಿನೊಳಗಾದರೆ, ಕೊಂಡು ಆಲಯವ ಮಾಡುವುದು. ಭಕ್ತನ ಮನ ಹೊನ್ನಿನೊಳಗಾದರೆ, ಬಳಲಿ ದೊರಕಿಸುವುದು ನೋಡಾ ಕಪಿಲ ಸಿದ್ಧಮಲ್ಲಿ ಕಾರ್ಜುನಾ"

ಎಂದು ವಚನಕಾರರು ಹೇಳಿದ್ದಾರೆ.

ಒಟ್ಟಿನಲ್ಲಿ ವಚನಧರ್ಮದ ಸಮಾಜ ಸರ್ವಸಮತಾಭಾವದಿಂದ ಕೂಡಿರುವಂಥದು. ಮುಕ್ತಿಯನ್ನು ಪಡೆಯುವುದಕ್ಕೆ ಎಲ್ಲರಿಗೂ ಹಕ್ಕುಂಟು; ದೀಕ್ಷೆಯನ್ನು ಪಡೆಯುವುದಕ್ಕೆ ಎಲ್ಲರಿಗೂ ಹಕ್ಕುಂಟು; ಷಟ್ಸ್ಥಲ ಜ್ಞಾನ ಸಾಧನೆಯನ್ನು ಯಾರು ಬೇಕಾದರೂ ಮಾಡಬಹುದು. ಗಂಡಸರಿಗೂ ಹೆಂಗಸರಿಗೂ ಲಿಂಗಭೇದವಿಲ್ಲದೆ, ಜಾತಿ ವ್ಯತ್ಯಾಸವಿಲ್ಲದೆ, ಕೈಲಾಸಕ್ಕೆ ಬಾಗಿಲು ತೆರೆದಿದೆ; ಮತ್ತು ಅವರು ಜ್ಯೋತಿ ಜ್ಯೋತಿಯ ಬೆರಸಿದಂತೆ ಘನಲಿಂಗೈಕ್ಯರಾಗಬಹುದು. ಹುಟ್ಟಿನಿಂದಲೇ ಬರುವ ಯಾವ ದೌರ್ಬಲ್ಯವೂ ವಚನಧರ್ಮದಲ್ಲಿಲ್ಲ. ಮುಕ್ತಿಗೆ ಸಮಾನವಾದ ಅವಕಾಶವಿರುವುದೊಂದೇ ಅಲ್ಲ; ಸಮಾಜದಲ್ಲಿಯೂ ಸಮಾನವಾದ ಸ್ಥಾನ ಮಾನಗಳಿವೆ. ಆತ್ಮವಿಶ್ವಾಸದಿಂದ ಎಲ್ಲರೂ ತಲೆಯೆತ್ತಿಕೊಂಡು ಸರಿಸಮಾನರಾಗಿ ನಡೆಯಬಹುದು. ಅನ್ನೋದಕ ವ್ಯವಹಾರಗಳನ್ನು ಒಟ್ಟಿಗೆ ನಡಸಬಹುದು. ವಿವಾಹ ಸಂಬಂಧಗಳನ್ನು ಧಾರಾಳವಾಗಿ ಬೆಳಸಬಹುದು. ಬಡತನ ಸಿರಿತನಗಳ ದೃಷ್ಟಿಯಿಂದ ಪಾಶ್ಚಾತ್ಯರಲ್ಲಿರುವಂತೆ ಹಲವು ತರಗತಿಗಳು ಇಲ್ಲಿಲ್ಲ. ವರ್ಣವ್ಯತ್ಯಾಸಗಳ ದೃಷ್ಟಿಯಿಂದ ವೈದಿಕ ಮತದಲ್ಲಿರುವಂತೆ ಪಂಗಡಗಳು ಇಲ್ಲಿಲ್ಲ. ವಚನಧರ್ಮ ಏರ್ಪಡಿಸುವ ಸಮಾಜ ದಿನದಿನಕ್ಕೆ ಬೆಳೆಯುವುದಕ್ಕೂ ಸಂಘಟನೆ ಹೊಂದುವುದಕ್ಕೂ

---

೪೩೩–೩೫. ವ. ಶಾ. ಸಾ. ಭಾಗ ೧ (ಉ) ಪುಟಗಳು ೬೫, ೬೯, ೬೮.

ಅವಕಾಶವಿದೆ. ಬಿಟ್ಟುಹೋದವರು ಕೊಂಬೆಗಳಂತೆ ಕಡಿದು ಹೋದವರು, ಮತ್ತೆ ಹತ್ತಿಸಲಾಗುವುದಿಲ್ಲ ಎಂದಾಗಲಿ, ಬೇರೆಯವರನ್ನು ತಮ್ಮೊಳಗೆ ಸೇರಿಸುವುದಿಲ್ಲವೆಂದಾಗಲಿ, ವಚನಧರ್ಮ ಹೇಳುವುದಿಲ್ಲ. ದೀಕ್ಷೆಯ ಮೂಲಕ ಯಾರನ್ನಾದರೂ ಭಕ್ತರನ್ನಾಗಿ ಮಾಡಿ ತನ್ನಲ್ಲಿ ಸೇರಿಸಿಕೊಳ್ಳುತ್ತದೆ. ಅವರ ನೀತಿಯ ಮಟ್ಟ ಏರುವಂತೆ ಸದಾಚಾರಗಳ ಒಂದು ಶಿಕ್ಷಣವನ್ನೂ ಮುಕ್ತಿ ದೊರೆಯುವಂತೆ ಷಟ್ಸ್ಥಲಸಾಧನೆಯ ಒಂದು ಶಿಕ್ಷಣವನ್ನೂ ಒದಗಿಸುತ್ತದೆ. ಕಾಯಕವೇ ಕೈಲಾಸ, ಪ್ರತಿಯೊಬ್ಬರೂ ಕಾಯಕವನ್ನು ಮಾಡಬೇಕು, ಎಂದು ಹೇಳಿ ಕಾಯಕಕ್ಕೆ ಮಹತ್ವವನ್ನು ಕೊಟ್ಟಿರುವುದರಿಂದ, ದುಡಿಮೆಗೆ ಗೌರವವೂ ದೊರೆತು, ಸಮಾಜದ ಆರ್ಥಿಕಸ್ಥಿತಿ ಬಲಪಡುತ್ತದೆ. ಸಮಾಜ ಯಾವುದಕ್ಕೂ ಪರಾವಲಂಬಿಯಾಗಬೇಕಾಗಿಲ್ಲ.

ವಚನಧರ್ಮದ ಸಮಾಜ ಹೀಗೆ ಒಂದು ರೀತಿಯಲ್ಲಿ ದೊಡ್ಡ ಸಹಕಾರ ಸಂಘ; ಮತ್ತೊಂದು ರೀತಿಯಲ್ಲಿ ಸಮಾತಾವಾದ ರಾಷ್ಟ್ರ; ಮಗುದೊಂದು ರೀತಿಯಲ್ಲಿ ಮುಂದುವರಿಯುವ ಪ್ರಜಾಸತ್ತಾತ್ಮಕ ರಾಷ್ಟ್ರ; ಅನ್ಯರ ಆಘಾತಗಳಿಗೆ ಕುಸಿದು ಬೀಳದಂತೆ ರಕ್ಷಣೆಯ ಕೋಟೆಗಳನ್ನು ರಚಿಸಿ ಕೊಂಡು ತಾನೇ ಆಕ್ರಮಣಕ್ಕೆ ಹೊರಡುವ ಐಕಮತ್ಯದ ಪುಷ್ಟ ಬಲಿಷ್ಠ ಯೋಧ ಜನಾಂಗ.

ಈ ಸಮಾಜವ್ಯವಸ್ಥೆಯನ್ನು ಕಾಪಾಡಿಕೊಂಡು ಬರುವುದಕ್ಕೂ, ಅದನ್ನು ತಕ್ಕ ಮಾರ್ಗಗಳಲ್ಲಿ ಮುಂದುವರಿಸುವುದಕ್ಕೂ, ವೀರಶೈವ ಮಠ ಗಳು ನೂರಾರು ದೇಶದಲ್ಲೆಲ್ಲ ಹಬ್ಬಿವೆ. ಇನ್ನಾವ ಪಂಥದವರಲ್ಲಿಯೂ ಇಷ್ಟೊಂದು ಮಠಗಳಿದ್ದಂತೆ ಕಂಡು ಬರುವುದಿಲ್ಲ. ಬಸವಣ್ಣನವರು ಶಿವಾನು ಭವಮಂಟಪವನ್ನು ಸ್ಥಾಪಿಸಿದಾಗ ಷಟ್ಸ್ಥಲಬ್ರಹ್ಮಿಗಳ ವಿಶ್ವವಿದ್ಯಾನಿಲಯ ವನ್ನು ಏರ್ಪಡಿಸಿದರೆಂದೂ ವಚನಧರ್ಮಪ್ರಚಾರಕ್ಕೆ ಜನರನ್ನೊದಗಿಸುವ ತಕ್ಕ ಸಂಸ್ಥೆಯೊಂದನ್ನು ವ್ಯವಸ್ಥೆಮಾಡಿದರೆಂದೂ ಹೇಳಬೇಕು. ಕಲ್ಯಾಣ ಪಟ್ಟಣದಲ್ಲಿ ವಿಪ್ಲವವಾದ ಮೇಲೆ ಶಿವಾನುಭವಮಂಟಪ ಭಗ್ನವಾಯಿತು. ಭಕ್ತರೂ ಜಂಗಮರೂ ದಿಕ್ಕುಪಾಲಾಗಿ ಚೆದರಿದರು. ಅವರು ಬಸವಣ್ಣ ಮೊದಲಾದ ಅವತಾರಪುರುಷರ ಪವಾಡಗಳನ್ನೂ ವಚನಗಳನ್ನೂ ಜನತೆ

ಯಲ್ಲಿ ಪ್ರಸಾರಮಾಡಿ ಅವರ ಮನಸ್ಸನ್ನು ಸೂರೆಗೊಂಡರು; ಹಲವರು ಶಿಷ್ಯರನ್ನು ಸಂಪಾದಿಸಿದರು; ಮಠಗಳನ್ನು ಕಟ್ಟಿಕೊಂಡರು. ಹೀಗೆ ಕನ್ನಡ ನಾಡಿನಲ್ಲೆಲ್ಲ ವಚನಧರ್ಮಜ್ಯೋತಿಗಳು ತಲೆದೋರಿದುವು. ವಿಜಯನಗರದ ದೊರೆಗಳ ಕಾಲದಲ್ಲಿ ಅವುಗಳ ಸಂಖ್ಯೆಯೂ ಕಾಂತಿಯೂ ಹೆಚ್ಚಿದುವು. ಹಿಂದಿನ ಶಿವಾನುಭವಮಂಟಪ ನಷ್ಟವಾದರೂ ಕನ್ನಡ ನಾಡಿನಲ್ಲಿ ಈ ಜ್ಯೋತಿಗಳು ಉಳಿದು ಕೊಂಡಿವೆ.

* " ಅವರವರ ದರುಶನಕೆ।
ಅವರವರ ವೇಷದಲಿ॥
ಅವರವರಿಗೆಲ್ಲ ಗುರು ನೀನೊಬ್ಬನೆ।
ಅವರವರ ಭಾವಕ್ಕೆ॥
ಅವರವರ ಪೂಜೆಗಂ।
ಅವರೆಲ್ಲರಿಗೆ ದೇವ ನೀನೊಬ್ಬನೆ॥

* " ಹೋರಾಟವಿಕ್ಕಿಸಲು।
ಬೇರಾದೆಯಲ್ಲದೆ॥
ಬೇರುಂಟೆ ಜಗದೊಳಗೆ ಎಲೆ ದೇವನೆ।
ಆರು ಅರಿಯರು ನೀನು॥
ಬೇರಾದ ಪರಿಗಳನು।
ಮೂರಾರಿ ಶಿವ ಷಡಕ್ಷರಿ ಲಿಂಗವೆ॥

‡ " ಹರಿಯ ಭಕ್ತರಿಗೆ ಹರಿ ಹರನ ಭಕ್ತರಿಗೆ ಹರ।
ನರರೇನು ಭಾವಿಸುವರದರಂತೆ ತೋರುವನು॥

ಎಂಬ ವಚನಕಾರರ ವಿಶಾಲ ಮನೋಭಾವವನ್ನು ಮರೆಯದೆ, ವಿಶ್ವಧರ್ಮದ ಸಾರವನ್ನು ಈ ವಚನಧರ್ಮಜ್ಯೋತಿಗಳು ಚೆನ್ನಾಗಿ ಹೀರಿಕೊಳ್ಳಲಿ! ಅವುಗಳ ಕಾಂತಿ ಪ್ರಜ್ವಲಿಸಿ ಭರತಖಂಡಕ್ಕೂ ಪ್ರಪಂಚಕ್ಕೂ ಬೆಳಕು ಕಾಣಲಿ!

---

* ಮುಪ್ಪಿನ ಷಡಕ್ಷರಿಯ ವಚನ.

‡ ಮಹಾಂತ ಶಿವಯೋಗಿಗಳ ಗೀತೆ.

## ೧೬ನೆಯ ಪ್ರಕರಣ

# ವಚನಗಳಲ್ಲಿ ಕಾವ್ಯಲಕ್ಷಣಗಳು

ವಚನಗಳು ಧರ್ಮವನ್ನು ಬೋಧಿಸುವುದರಿಂದ ಧರ್ಮಗ್ರಂಥಗಳಾಗಿವೆ, ತತ್ತ್ವವನ್ನು ಬೋಧಿಸುವುದರಿಂದ ಸಿದ್ಧಾಂತಗ್ರಂಥಗಳಾಗಿವೆ, ಕಾವ್ಯಲಕ್ಷಣಗಳನ್ನು ಒಳಗೊಂಡಿರುವುದರಿಂದ ಉತ್ತಮ ಸಾಹಿತ್ಯ ಗ್ರಂಥಗಳೂ ಆಗಿವೆ. ವಚನಗಳಲ್ಲಿ ಸಾಮಾನ್ಯವಾಗಿ ಕೆಲವು ಪ್ರಾರ್ಥನಾರೂಪವಾದವು, ಕೆಲವು ಆತ್ಮಪರಿಶೋಧನೆಯ ರೂಪವಾದವು, ಕೆಲವು ಸ್ತೋತ್ರರೂಪವಾದವು, ಕೆಲವು ತತ್ತ್ವನಿರೂಪಣೆಯವು, ಕೆಲವು ಲೋಪದೋಷಗಳ ಖಂಡನಾತ್ಮಕವಾದವು. ಇವುಗಳಲ್ಲಿ ಮೊದಲಿನ ಮೂರು ತೆರದವು ಗೀತಜಾತಿಗೆ ಸೇರಿದುವೆಂದು ಹೇಳಬೇಕು. ಈ ಗೀತಜಾತಿಗೆ ಸೇರಿದ ಹಲವು ವಚನಗಳ ಮೂಲರೂಪ ನಮಗೆ ಈಗ ತಿಳಿದಿಲ್ಲವಾದರೂ ಹರಿಹರನು,

(i) "ಬಸವರಾಜನ ಗೀತದೊಳು—ಬೇಡಿಬೇಡಿದ ಶರಣಂಗೆ ನೀಡದಿರ್ದಡೆ ತಲೆದಂಡ ಕೂಡಲಸಂಗ, ಅವಧಾರು—ಎಂಬ ಗೀತಮಂ ಪಾಡೆ",

(ii) "ಎಲೆಲೆ, ಕಾಡಿ ಕಾಡಲಮ್ಮದ ತಂದೆ, ನೀಂ ಕೇಳು. ಬೇಡಿ ಬೇಡಲಮ್ಮದ ಹಂದೆ, ನೀಂ ಕೇಳು. ಕೂಡಿ ಕೂಡಲಮ್ಮದ ಜಾತಿಯೆ, ನೀಂ ಕೇಳು—ಎಂದು ಗೀತಮಂ ಪಾಡಿ ನಿರೋಧದೊಳಿರಲು",

---

(i), (ii) ಬ. ದೇ. ರ. ೧೨ನೆಯ ಸ್ಥಲ. 'ಬಸವೇಶ್ವರನ ವಚನಗಳು' ಎಂಬ ಗ್ರಂಥದಲ್ಲಿ ಅಚ್ಚಾಗಿರುವ ಕೆಳಗಿನ ವಚನಗಳನ್ನು ಮೇಲಿನವರೊಡನೆ ಹೋಲಿಸಬಹುದು.

"ಎಂಬತ್ತುನಾಲ್ಕುಲಕ್ಷ ಮುಖದೊಳಗೊಂದೇ ಮುಖವಾಗಿ ಕಾಡಿ ನೋಡೆನ್ನನು, ಬೇಡಿ ನೋಡೆನ್ನನು. ಬೇಡದಿದ್ದರೆ, ಅಯ್ಯ ನಿಮಗೆ ಪ್ರಮಥರಾಣೆ. ನೀನಾವ ಮುಖದಲ್ಲಿ ಬಂದು ಬೇಡಿದೊಡೀವೆನು, ಕೂಡಲ ಸಂಗಮ ದೇವಾ"

"........ಓಡದಿರು, ಓಡದಿರು, ನಿಮ್ಮ ಶರಣರ ಮನೆಯ ಬಿರುದಿನ ಅಂಕಕಾರ. ಓಡದಿರು, ಓಡದಿರು, ಎಲೆ ಎಲೆ ದೇವಾ, ಎಲೆ ಎಲೆ ಸ್ವಾಮಿ, ಎಲೆ ಎಲೆ ಹಂದೇ, ಕೂಡಲ ಸಂಗಮ ದೇವಾ"

(iii) ಬಿಟ್ಟೆಪೆರ್ನೆಂದೊಡಂ ಬಿಡದು ನಿನ್ನಯ ಮಾಯೆ
ಒಟ್ಟೆಯಿಸಿ ಬಂದೊಡೊಡವಂದಪ್ಪುದೀ ಮಾಯೆ

* * *

ಜೋಗಿಗಂ ಜೋಗಿಣಿಯದಾಯ್ತು ನಿನ್ನಯ ಮಾಯೆ
ರಾಗದಿಂ ಸವಣಂಗೆ ಕಂತಿಯಾಯಿತು ಮಾಯೆ

* * *

ಗಿರಿಯನೇರಿದೊಡಿರದೆ ಗಿರಿಯನೇರಿತು ಮಾಯೆ
ಪರಿದಡವಿಯಂ ಪೊಕ್ಕೊಡೊಡನೆ ಪೊಕ್ಕದು ಮಾಯೆ
ಬೆನ್ನ ಕೈಯಂ ಬಿಡದು ಭಾಪು ಸಂಸಾರವೇ
ಎನ್ನ ನಂಬಿಸಿತು ಮಝು ಭಾಪು ಸಂಸಾರವೇ
ಕರುಣಾಕರಾ ನಿನ್ನ ಮಾಯೆಗಂಜುವೆನಯ್ಯ
ಪರಮೇಶ್ವರಾ ಮಲ್ಲಿನಾಥ ಕರುಣಿಪುದಯ್ಯ

* * *

ಎಂದು ವೈರಾಗ್ಯದಿಂದಂ ಗೀತವಂ ಪಾಡಿ

(iv) "ಆಗಳಾಗಳಿನ ಶಿವಾನುಭವಕ್ಕೆ ನವಗೀತಮಂ ಪಾಡಿ".

---

(iii) ಮ. ದೇ. ರ. ಸ್ಥಲ ೭, ಪಂಕ್ತಿ ೯೧–೧೦೭.

(iv) ಮ. ದೇ. ರ. ಸ್ಥಲ ೬, ಪಂಕ್ತಿ ೩೪.

'ಮಹಾದೇವಿಯಕ್ಕನ ವಚನಗಳು' ಎಂಬ ಗ್ರಂಥದಲ್ಲಿ ಅಚ್ಚಾಗಿರುವ ಕೆಳಗಿನ ವಚನಗಳನ್ನು ಮೇಲಿನದರೊಡನೆ ಹೋಲಿಸಬಹುದು.

"ಬಿಟ್ಟೆನೆಂದರೆ ಬಿಡದೀ ಮಾಯೆ. ಬಿಡದಿದ್ದರೆ, ಬೆಂಬತ್ತಿತ್ತು ಮಾಯೆ. ಯೋಗಿಗೆ ಯೋಗಿಣಿಯಾಯಿತ್ತು ಮಾಯೆ. ಸವಣಂಗೆ ಸವಣಿಯಾಯಿತ್ತು ಮಾಯೆ. ಯತಿಗೆ ಪರಾಕಿಯಾಯಿತ್ತು ಮಾಯೆ. ನಿನ್ನ ಮಾಯೆಗೆ ನಾನಂಜುವಳಲ್ಲ, ಚೆನ್ನ ಮಲ್ಲಿಕಾರ್ಜುನ ದೇವ ನಿಮ್ಮಾಣೆ."

"ಕಲ್ಲ ಹೊಕ್ಕರೆ ಕಲ್ಲ ಬರಿಸಿದೆ, ಗಿರಿಯ ಹೊಕ್ಕರೆ ಗಿರಿಯ ಬರಿಸಿದೆ. ಭಾಪು ಸಂಸಾರವೆ! ಬೆನ್ನಿಂದ ಬೆನ್ನಹತ್ತಿ ಬಂದೆ. ಚೆನ್ನ ಮಲ್ಲಿಕಾರ್ಜುನಯ್ಯ, ಇನ್ನೇವೆನಿನ್ನೇವೆ"

ಎಂದು ಮುಂತಾಗಿ ಹೇಳಿರುವುದನ್ನು ನೋಡಿದರೆ, ಆಯಾ ಕಾಲದಲ್ಲಿ ಚಿತ್ತವೃತ್ತಿ ಹೇಗಿರುತ್ತಿತ್ತೋ ಅದಕ್ಕನುಗುಣವಾಗಿ ಆಯಾ ವಚನಗಳು ಲಯಬದ್ಧವಾಗಿ ಸಮತೂಕವಾಗಿ ಹೊರಬೀಳುತ್ತಿದ್ದುವೆಂದು ಕಾಣುತ್ತದೆ. ಬಸವಣ್ಣನವರೇ ಹೇಳಿರುವ,

(೯೮.) "ತಾಳ ಮಾನ ಸರಸ ನಾನರಿಯೆ, ವಜಿ ಬಜಾವಣೆಯ ಲೆಕ್ಕವನರಿಯೆ, ಅಮೃತ ಗಣ ದೇವಗಣವನರಿಯೆ, ಕೂಡಲ ಸಂಗಮ ದೇವಾ, ನಿನಗೆ ಕೇಡಿಲ್ಲವಾಗಿ ಆನು ಒಲಿದಂತೆ ಹಾಡುವೆ"

ಎಂಬುದನ್ನು ನೋಡಿದರೆ ವಚನಗಳಲ್ಲಿ ಕೆಲಕೆಲವಾದರೂ * ಹಾಡುವುದಕ್ಕೆ ಬರುತ್ತಿದ್ದಿರಬೇಕು. ಕೆಲವು ‡ವಚನಗಳನ್ನು ಗಣಗಳಾಗಿ ವಿಂಗಡಿಸಲೂ ಬಹುದಾಗಿದೆ.

ವಚನಕಾರರಲ್ಲಿ ಹಲವರು ಒಳ್ಳೆಯ ಶಿವಾನುಭವಿಗಳು, ಒಳ್ಳೆಯ ಲೋಕಾನುಭವಿಗಳು. ಅಲ್ಲಮಪ್ರಭು, ಬಸವಣ್ಣನವರು, ಮಹದೇವಿಯಕ್ಕ, ಸಿದ್ಧರಾಮ ಮತ್ತು ಚೆನ್ನಬಸವ—ಇವರ ವಚನಗಳಲ್ಲಾದರೋ ಈ ಒಳಗಿನ ಮತ್ತು ಹೊರಗಿನ ಅನುಭವಗಳು ಬಹಳ ಚೆನ್ನಾಗಿ ಕಾಣುತ್ತವೆ. ಅಲ್ಲಮ

---

* 'ಸರ್ವಜ್ಞನ ವಚನಗಳು' ತ್ರಿಪದಿ ಎಂಬ ಹಾಡುಗಬ್ಬದ ಛಂದಸ್ಸಿನಲ್ಲಿರುವುದೂ 'ಮುಪ್ಪಿನ ಷಡಕ್ಷರಿಯ ವಚನಗಳು' ಶರ ಕುಸುಮ ಭೋಗ ಷಟ್ಪದಿಗಳ ಛಂದಸ್ಸಿನಲ್ಲಿರುವುದೂ ನೋಡಿದರೆ, ವಚನಗಳಲ್ಲಿ ಹಲವನ್ನು ಗೀತಗಳಂತೆ ಹಾಡುತ್ತಿದ್ದರೆಂದು ಹೇಳಬೇಕಾಗುತ್ತದೆ. ಈಚೆಗೆ ಬಸವಣ್ಣನವರ ವಚನಗಳನ್ನು ಸಂಗೀತಕ್ಕೆ ಹೊಂದಿಸಿಕೊಂಡು ಹಾಡುವುದು ರೂಢಿಗೆ ಬಂದಿದೆ. ಅಷ್ಟೊಂದು ಸಂಗೀತ ಆ ವಚನಗಳಿಗೆ ಬೇಕೇ? ಎಂಬುದು ಒಂದು ದೊಡ್ಡ ಪ್ರಶ್ನೆ.

‡ ಸುತ್ತಿ। ಸುತ್ತಿ। ಬಂದ। ಡಿಲ್ಲ।  
ಲಕ್ಷ। ಗಂಗೆಯ। ಮಿಂದ। ಡಿಲ್ಲ।  
ತುಟ್ಟ। ತುದಿಯ। ಮೇರು। ಗಿರಿಯ। ಮೆಟ್ಟ। ಕೂಗಿದ। ಡಿಲ್ಲ।

ಪ್ರಭು ಭಕ್ತರಿಗೆ ಬೋಧೆಮಾಡುವಾಗ ಸಾಮಾನ್ಯವಾಗಿ ಅವರು ಯಾವ ವೃತ್ತಿಯನ್ನು ಅವಲಂಬಿಸಿರುವರೋ ಅಥವಾ ಯಾವ ಕೆಲಸವನ್ನು ಆಗ ಮಾಡುತ್ತಿರುವರೋ ಅದರ ದೃಷ್ಟಾಂತವನ್ನು ಕೊಟ್ಟು ತತ್ತ್ವಬೋಧೆ ಮಾಡುವುದು ರೂಢಿ. ಪ್ರಭು ತೋಟಗಾರನಾದ ಗೊಗ್ಗಯ್ಯನನ್ನು ಸಂಧಿಸಿದಾಗ ಈ ತೋಟದಿಂದ ಪ್ರಯೋಜನವಿಲ್ಲ, ನನ್ನಂತೆ ತೋಟವನ್ನು ಮಾಡಿದರೆ ಮುಕ್ತಿಫಲವುಂಟು ಎಂದು ಹೇಳಿದನು. ಎಲ್ಲಿ ನಿನ್ನ ತೋಟ? ಎಂದು ಗೊಗ್ಗಯ್ಯನು ಕೇಳಿದಾಗ,

೪೩೩. "ತನುವ ತೋಂಟವ ಮಾಡಿ, ಮನವ ಗುದ್ದಲಿ ಮಾಡಿ, ಅಗಿದು ಕಳೆದೆನಯ್ಯ, ಭ್ರಾಂತಿನ ಬೇರ ಒಡೆದು, ಸಂಸಾರದ ಹೆಂಟೆಯ ಬಗಿದು, ಬಿತ್ತಿದೆನಯ್ಯ ಬ್ರಹ್ಮಬೀಜವ. ಅಖಂಡಮಂಡಲವೆಂಬ ಬಾವಿ, ಪವನವೆ ರಾಟಾಳ, ಸುಷುಮ್ನ ದಿಂದುದಕವ ತಿದ್ದಿ, ಬಸವಗಳೈವರು ಹಸಗೆಡಿಸಿಹವೆಂದು, ಸಮತೆ ಸೈರಣೆ ಎಂಬ ಬೇಲಿಯನಿಕ್ಕಿ ಆವಾಗಳು ಈ ತೋಂಟದಲಿ ಜಾಗರನಿದ್ದು ಸಸಿಯ ಸಲಹಿದೆನು ಕಾಣಾ ಗುಹೇಶ್ವರಾ".

ಎಂದು ಹೇಳಿದನು. ದೇಹವೇ ತೋಟ, ಮನಸ್ಸನ್ನು ಸ್ವಾಧೀನದಲ್ಲಿಟ್ಟುಕೊಂಡು ಭ್ರಾಂತಿ, ಸಂಸಾರ, ಎಂಬುದನ್ನು ಕಳೆದು ಬ್ರಹ್ಮಬೀಜವನ್ನು ಬಿತ್ತಿದ್ದೇನೆ. ಬ್ರಹ್ಮರಂಧ್ರಸ್ಥಾನದಿಂದ ಅಮೃತವನ್ನು ಸುಷುಮ್ನಾನಾಳದ ಮೂಲಕ ಹರಿಯಿಸುತ್ತಿದ್ದೇನೆ. ಹೊರಗಾಡುವ ವಾಯುವನ್ನು ಬಂಧಿಸಿ ಒಳಗಾಡುವಂತೆ ಮಾಡಿ, ಈ ಅಮೃತವನ್ನು ಹರಿಯಿಸುತ್ತಿದೇನೆ. ಪಂಚೇಂದ್ರಿಯಗಳು ತೋಟದಲ್ಲಿ ನುಗ್ಗಿ ಸಸಿಯನ್ನು ತುಳಿಯದಂತೆ ಸಮತೆ ಸೈರಣೆಗಳೆಂಬ ಬೇಲಿಗಳನ್ನು ಹಾಕಿದ್ದೇನೆ. ಇಷ್ಟೇ ಅಲ್ಲ. ಯಾವಾಗಲೂ ಎಚ್ಚರವಿದ್ದು ಸ್ವಸ್ವರೂಪಜ್ಞಾನಯುಕ್ತನಾಗಿ ಸಸಿಯನ್ನು ಬೆಳಸುತ್ತಿದೇನೆ ಎಂದು ಹೇಳಿರುವ ರೀತಿ ಬುದ್ಧದೇವನು ಭಾರದ್ವಾಜನೆಂಬ ಬ್ರಾಹ್ಮಣನು ವ್ಯವಸಾಯ ಮಾಡುತ್ತಿದ್ದಾಗ ಅವನಿಗೆ ಹೇಳಿದ ಪೂರ್ಣೋಪಮೆಯನ್ನು ಜ್ಞಾಪಕಕ್ಕೆ ತರುತ್ತದೆ. ಅಲ್ಲಮಪ್ರಭು ಸೊನ್ನಲಾಪುರಕ್ಕೆ ಹೋದಾಗ ಸಿದ್ಧರಾಮನು ಕೆರೆಯನ್ನು ಕಟ್ಟಿಸುತ್ತಿದ್ದನು. ಆತನನ್ನು ನೋಡಿ,

---

೪೩೩. ಶೂ. ಸಂ. ಪುಟ ೧೦.

(೧೮೫) "ತನುವೆಂಬ ಏರಿಗೆ ಮನವೆಂಬ ಕಟ್ಟೆ ಆಚಾರವೆಂಬ ಸೋಪಾನ, ಪರಮಾನಂದವೆಂಬ ಜಲವ ತುಂಬಿ ಕೆರೆಯ ಕಟ್ಟಬಲ್ಲವರನಾರನೂ ಕಾಣೆ. ನಾ ಕಟ್ಟಿದ ಕೆರೆ ಸ್ಥಿರವಾಯಿತ್ತು ಗುಹೇಶ್ವರಾ"

ಎಂದು ಅಲ್ಲಮಪ್ರಭು ಅಣಕವಾಡಿದನು.

ವಚನಕಾರರಲ್ಲಿ ಹಲವರು ವಿವಿಧ ವೃತ್ತಿಗಳನ್ನಾಚರಿಸುತ್ತಿದ್ದರೆಂಬುದು ಅವರ ಹೆಸರುಗಳಿಂದಲೇ ತಿಳಿಯುತ್ತದೆ. ಅವರು ತಮ್ಮ ಕಾಯಕದಲ್ಲಿಯೂ ವೇದಾಂತದ ಅರ್ಥವನ್ನು ಹುಡುಕಿ ವರ್ಣಿಸಿರುವುದು ಬಹಳ ಸ್ವಾರಸ್ಯವಾಗಿದೆ. * ದೇವರದಾಸಿಮಯ್ಯ ನೆಯ್ಗೆಯ ಕಾಯಕದವನು. ಅವನು,

೪೩೭. "ಉಂಕೆಯ ಸಿಗುಚಿ, ಸರಿಗೆಯ ಸಮಗೊಳಿಸಿ, ಸಮಗಾಲಸಿಕ್ಕಿ, ಅಣಿಯೊಳು ಮೆಟ್ಟಿದೆ. ಹಿಡಿದ ಲಾಳಿಯ ಮುಳ್ಳು ಕಂಡಿಕೆಯ ನುಂಗಿತ್ತು. ಈ ಸೀರೆಯ ನೆಯ್ದವ ನಾನೋ ನೀನೋ ರಾಮನಾಥಾ"

ಎಂದು ಹೇಳಿದ್ದಾನೆ. ಹೆಂಡದ ಮಾರಯ್ಯ ಅವನ ಹೆಸರು ಸೂಚಿಸುವಂತೆ ಹೆಂಡವನ್ನು ಮಾಡುವ ಕಾಯಕದವನಾಗಿದ್ದನು. ಅವನು,

೪೩೮. "ಮದ್ದಿನ ಸುರೆಯ ತೊಗಲ ತಿತ್ತಿಯಲ್ಲಿ ತುಂಬಿ ಒಪ್ಪದಲ್ಲಿ ನಿಲನಿಲುಕದು. ತನ್ನ ಉತ್ಪಾತದಿಂದ ತಿತ್ತಿ ಹಾರಿ ನೆಲಕ್ಕಪ್ಪಳಿಸಿ ಬೀಳುವುದ ಕಂಡೆ. ದೃಷ್ಟವ ಕೇಳಲೇತಕ್ಕೆ? ಕಾಯದ ತಿತ್ತಿಯಲ್ಲಿ ಜೀವ ಹೊಕ್ಕು, ತ್ರಿವಿಧ ಮಲವ ಕಚ್ಚಿ, ನಡೆವುದಕ್ಕೆ ಕಾಲಿಲ್ಲದೆ, ನುಡಿವುದಕ್ಕೆ ಬಾಯಿಲ್ಲದೆ, ನೋಡುವುದಕ್ಕೆ ಕಣ್ಣಾಲಿ ಮರೆಯಾಗಿತ್ತು. ಬೊಂಬೆ ಹೋಯಿತ್ತು. ದೃಷ್ಟಾಂತದ ಬೊಂಬೆ ಕೆಟ್ಟಲ್ಲಿ ಮಣ್ಣಿಗೆ ಕಾದಿ, ಹೊನ್ನಿಗೆ ಹೋರಿ, ಹೆಣ್ಣಿಗೆ ನಾಣುಗೆಟ್ಟ, ಈ ಕುನ್ನಿ ಮನಕಿನ್ನೇವೆ ಧರ್ಮೇಶ್ವರಾ"

ಮತ್ತನ್ನುಂಟುಮಾಡುವ ನೊರೆಗೂಡಿದ ಸುರೆ ತಿತ್ತಿಯನ್ನು ಉತ್ಪಾತದಿಂದ ನೆಲಕ್ಕೆ ಕೆಡವಿ ಎಲ್ಲವೂ ಹೋದಂತೆ, ದೇಹದಲ್ಲಿ ಜೀವ ಹೊಕ್ಕು ಆಣವಮಲ ಮಾಯಾಮಲ ಮತ್ತು ಕಾರ್ಮಿಕಮಲಗಳನ್ನು ಒಳಗೊಂಡು ಆತ್ಮನಾಶವನ್ನು ಮಾಡುವುದಾಯಿತು; ಹೀಗೆ ಮಾಡಿದ ಮತ್ತಿನ ಮನಸ್ಸು

* ಜೇಡರ ದಾಸಿಯೆಂದೂ ಹೆಸರುಂಟು. ೪೩೭. ವ. ಶಾ. ಸಾ. ಭಾಗ ೧ (ಉ) ಪುಟ ೩೧೬

೪೩೮. ಪ್ರ. ಕರ್ಣಾಟಕ ಸಂಪುಟ ೧೯, ಸಂ. ೪, ಪುಟ ೫೦.

ಹೊನ್ನು ಹೆಣ್ಣು ಮಣ್ಣುಗಳನ್ನು ಆಶಿಸುತ್ತ ಕಾಲಕಳೆಯುತ್ತಿದ್ದೆ, ಎಂದು ಸೊಗಸಾದ ಅನುಭವದ ನುಡಿಯನ್ನು ಹೆಂಡದ ಮಾರಯ್ಯ ಹೇಳಿದ್ದಾನೆ. ಮಾದಾರ ದೂಳಯ್ಯ ಚಮ್ಮಾರ. ಅವನು ತನ್ನ ವೃತ್ತಿಗನುಗುಣವಾಗಿ,

೪೫೯. "ಕಟ್ಟಿದೆ ಘಟದಟ್ಟೆಯ ಹೊಲಿದು. ಇಕ್ಕಿದೆ ಚತುರ್ವಿಧದ ನಾಲ್ಕುಂಗುಟವ, ಬಲಿದುಂಗುಟದ ದಾರದಲ್ಲಿ ಸಂಚದ ಬಾರ ತೆಗೆದು ತೊಡಕು ಬಂಧವನಿಕ್ಕಿ ಅಡಿಯ ಬಿಡದಂತೆ, ಹಿಂದಣ ನುಡ ಮುಂದಣ ಉಂಗುಷ್ಟಕ್ಕೆ ಒಂದನೊಂದು ಜಾರದಂತೆ ಬಂಧಿಸಿ, ಸಕಲೇಂದ್ರಿಯವೆಂಬ ಉಭಯವ ಸಂಧಿಸಿ ಕುಣಿಕೆಯನಿಕ್ಕಿ, ಕಾಮದ ಒಡಲ ಮಾದೆಗ ಬಂದ. ಘಟತೊಕುಳ ತೊಗಲು ಹದ ಬಂದಿತ್ತು, ಹೊತ್ತು ಹೋದೀತಣ್ಣ, ಮೆಟ್ಟಡಿಯ ಕೊಂಡ ರೊಕ್ಕವ ಕೊಡಿ. ಒಪ್ಪಿದರಿರಲಿ, ಒಪ್ಪದಿರ್ದಡೆ ಮರು ಮುಖದಪ್ಪದೆ ಕೊಟ್ಟಹೆ. ತಪ್ಪಡಿಯ ಮೆಟ್ಟಿ ಹೋಗುತ್ತಿದೇನೆ ಚೆನ್ನಯ್ಯಪ್ರಿಯ ದೂಳನ ದೂಳಿಗೊಳಗಾಗಿ"

ಎಂದು ಹೇಳಿದ್ದಾನೆ. ಕನ್ನಡಿಕಾಯಕದ ಅಮ್ಮಿದೇವಯ್ಯ ಕ್ಷೌರ ಮಾಡುವವನು. ಅವನು ಹೇಳಿರುವ ವಚನಗಳು ಹೀಗಿವೆ:

೪೬೦. "ಎನ್ನ ಕನ್ನಡಿ ಒಳ ಹೊರಗಿಲ್ಲ. ಎನ್ನಗಳಿಯ ಮುಟ್ಟನೊಳಗಿಲ್ಲ. ಕೊಂಪ ಚೀರ ಹಡಪಕಳವಲ್ಲ. ಕತ್ತಿಯ ಬಸವಣ್ಣ ಕೊಟ್ಟ. ಕತ್ತರಿಯ ಚೆನ್ನಬಸವಣ್ಣ ಕೊಟ್ಟ. ಕಿತ್ತುಹಾಕುವ ಚಿಮ್ಮುಟವ ಪ್ರಭುರಾಯ ಕೊಟ್ಟ. ಮಿಕ್ಕಾದ ಎನ್ನಯ ಮುಟ್ಟ ಸತ್ಯ ಶರಣರು ಕೊಟ್ಟರು. ದೃಷ್ಟವ ತೋರಿ ಅಡಗುವ ಮುಕುರವ ಕೊಟ್ಟವರ ಹೇಳುವೆನು. ದೃಷ್ಟ ಪ್ರಸಿದ್ಧ ಅಪ್ರತಿಮ ಪ್ರಸನ್ನ ಚೆನ್ನಬಸವಣ್ಣ ಪ್ರಿಯ ಕಮಳೇಶ್ವರ ಲಿಂಗವೆನಗೆ ದೃಷ್ಟವ ಕೊಟ್ಟು, ತಾ ಬೆಳಗಿನೊಳಗಾದ"

೪೬೧. "ಹಿಡಿಯಿಲ್ಲದ ಶಸ್ತ್ರ, ಕೀಲಿಲ್ಲದ ಕತ್ತರಿ, ಉಭಯವನೊಡಗೂಡದ ಚಿಮ್ಮುಟ, ರೂಹಿಲ್ಲದ ಚಣ, ಹಲ್ಲಿಲ್ಲದ ಹಣಿಗೆ, ಮಲವಿಲ್ಲದ ಬೆಳಗಿನ ಮುಕುರವ ಹಿಡಿದು ಶರಣರೆಲ್ಲರಡಿವಿಡಿದಾಡ ಬಂದೆ. ಚೆನ್ನಬಸವಣ್ಣಂಗೆ ಭೃತ್ಯನಾಗಿ, ಶರಣ ತತಿಗೆ ಲೆಂಕನಾಗಿ, ಸತ್ಯಗುರುಚರದ ಕರ್ತೃಸ್ವರೂಪಕ್ಕೆ ಡಿಂಗರಿಗ, ಉಭಯ ಡಿಂಗರಿಗರ (ಕಂದ)ನೆಂದು ಪ್ರತಿಪಾದಿಸಿಕೊ ಚೆನ್ನಬಸವಣ್ಣ ಪ್ರಿಯ ಕಮಳೇಶ್ವರ ಲಿಂಗ"

ಕದಿರೆ ರೆಮ್ಮವ್ವೆ ಎಂಬ ಶಿವಶರಣೆ ರಾಟೆಯಿಂದ ನೂಲು ತೆಗೆಯುವವಳಾಗಿದ್ದಳು. ಆಕೆ ಕೂಡ,

---

೪೫೯—೪೬೧. ಪ್ರ. ಕರ್ನಾಟಕ ಸಂಪುಟ ೧೯, ಸಂ. ೪, ಪುಟಗಳು ೫೨, ೬೨

೪೪೨. "ನಾ ತಿರುಹುವ ರಾಟೆಯ ಕುಲ ಜಾತಿಯ ಕೇಳಿರಣ್ಣಾ. ಅಡಿಯಣಿ ಹಲಗೆ ಬ್ರಹ್ಮ, ತೋರಣ ವಿಷ್ಣು, ನಿಂದ ಬೊಂಬೆ ಮಹಾ ರುದ್ರ. ರುದ್ರನ ಬೆಂಬಳಿಯ ವೆರಡು ಸೂತ್ರದ ಕರ್ಣ, ಅರಿವೆಂಬ ಕದಿರು. ಭಕ್ತಿ ಎಂಬ ಕಯ್ಯಲ್ಲಿ ತಿರುಹ ಲಾಗಿ, ಸುತ್ತಿತ್ತು ನೂಲು, ಕದಿರು ತುಂಬಿತ್ತು. ರಾಟೆಯ ತಿರುಹಲಾರೆ, ಎನ್ನ ಗಂಡ ಕುಟ್ಟಿಹ, ಇನ್ನೇವೆ ಕದಿರ ರೆಮ್ಮೆಯೊಡೆಯ ಗುಮ್ಮೇಶ್ವರಾ?"

ಬ್ರಹ್ಮ ವಿಷ್ಣು ರುದ್ರರನ್ನು ಕ್ರಮವಾಗಿ ಇಷ್ಟಲಿಂಗ ಪ್ರಾಣಲಿಂಗ ಭಾವಲಿಂಗಗಳೆಂದೂ, ಕ್ರಿಯೆ ಮತ್ತು ಜ್ಞಾನ ಇವುಗಳೆರಡನ್ನೂ ಹೊಂದಿಸಿ ಕೊಂಡು ಅಭಿನ್ನಭಾವದಿಂದ ಚರಿಸಲು ಜ್ಞಾನಪೂರ್ವಕವಾಗಿ ಪರಮಸುಖ ದೊರೆಕೊಳ್ಳುವುದೆಂದೂ ಆಕೆ ನುಡಿದಿದ್ದಾಳೆ.

ಹೀಗೆ ವಚನಕಾರರು ಸೊಗಸಾದ ವಚನಗಳನ್ನು ಕಾಯಕಗಳಿಗೆ ಹೋಲಿಸಿಕೊಂಡು ಪರಮಾರ್ಥವನ್ನು ವಿವರಿಸಿದ್ದಾರೆ. ಇದಲ್ಲದೆ ಕನ್ನಡ ನುಡಿಯ ಸೊಬಗನ್ನು, ಅದರ ಜೀವಾಳವನ್ನು, ಗ್ರಹಿಸಿ ವ್ಯಕ್ತಪಡಿಸಿದ್ದಾರೆ. ಇಂಥ ವಚನಗಳಲ್ಲಿ ಅರ್ಥಗಾಂಭೀರ್ಯವಿರುವುದಲ್ಲದೆ ಶಬ್ದಾಲಂಕಾರದ ಬೆಡಗೂ ಕಂಡು ಬರುತ್ತದೆ. ಇದಕ್ಕೆ ಉದಾಹರಣೆಯಾಗಿ ಕೆಲವನ್ನು ಮುಂದೆ ಕೊಟ್ಟಿದೆ. ಅಲ್ಲಮಪ್ರಭು ಬಾಹ್ಯ ಪೂಜೆಯ ನಿಷ್ಫಲತೆಯನ್ನು,

೪೪೩. "ಹಿಡಿವ ಕಯ್ಯ ಮೇಲೆ ಕತ್ತಲೆಯಯ್ಯಾ, ನೋಡುವ ಕಂಗಳ ಮೇಲೆ ಕತ್ತಲೆ ಯಯ್ಯಾ! ನೆನೆವ ಮನದ ಮೇಲೆ ಕತ್ತಲೆಯಯ್ಯಾ! ಕತ್ತಲೆ ಎಂಬುದು ಇತ್ತಲೆಯಯ್ಯಾ, ಗುಹೇಶ್ವರನೆಂಬುದು ಅತ್ತಲೆಯಯ್ಯಾ!"

ಎಂದು ವರ್ಣಿಸಿದ್ದಾನೆ. ಪರಮಾತ್ಮನು ತನ್ನನ್ನು ಹಲವು ಜನ್ಮಗಳಿಗೆ ತಂದದ್ದನ್ನೂ ದೇವತ್ವಕ್ಕೆ ಏರಿಸಿದ್ದನ್ನೂ 'ತಂದೆ' ಎಂಬ ಪದದ ಭಾವ ಹಿಡಿದು,

೪೪೪. "ಸಕಲ ಭುವನಾದಿ ಭುವನಂಗಳಿಗೆ ತಂದೆ, ಸಕಲ ದೇವಾದಿ ದೇವರ್ಕಳಿಗೆ ತಂದೆ, ಭವಭವದಲ್ಲಿ ನೀನೆನ್ನ ತಂದೆ, ಗುಹೇಶ್ವರಲಿಂಗ ನಿರಾಳದಲ್ಲಿ ನೀನೆನ್ನ ತಂದೆ"

---

೪೪೨. ವ. ಶಾ. ಸಾ. ಭಾಗ ೧ (ಉ.) ಪುಟ ೧೯೯.

೪೪೩–೪. ಪ್ರ. ದೇ. ವ. ಪುಟಗಳು ೧೦೯, ೧೯೨.

ಎಂದು ಚಮತ್ಕಾರವಾಗಿ ತಿಳಿಸಿದ್ದಾನೆ. ಹೀಗೆಯೇ ಸುಮ್ಮನೆ ಮುಂಡೆ ಬೋಳಾದರೇನು, ಹುಟ್ಟು ಸಾವುಗಳು ಬೋಳಾಗಬೇಕು ಎಂಬರ್ಥಕ್ಕೆ,

೪೪೫. "ಕುರುಹು ಮುಟ್ಟದೆ ಕೂದಲು ಹರಿಯದೆ ಬೋಳಾಗಬೇಕು. ಕಾಯ ಬೋಳೋ ಕಪಾಳ ಬೋಳೋ ಹುಟ್ಟುವುದು ಬೋಳೋ ಹುಟ್ಟದೇ ಹೋಹುದು ಬೋಳೋ ಗುಹೇಶ್ವರಾ''

ಎಂಬ ವಚನವನ್ನು ಹೇಳಿದ್ದಾನೆ. ಬಸವಣ್ಣನವರು ಕೂಡ ಹೀಗೆ ಮಾತುಗಳಲ್ಲಿ ಆಟಕಟ್ಟಿದ್ದಾರೆ:

೪೪೬. "ಮೇಲಾಗಲೊಲ್ಲೆನು ಕೀಳಾಗಲಲ್ಲದೆ. ಕೀಳಿಂಗಲ್ಲದೆ ಹಯನು ಕರೆವುದೇ? ಮೇಲಾಗಿ ನರಕದಲೋಲಾಡಲಾರೆನು. ನಿಮ್ಮ ಶರಣರ ಪಾದಕ್ಕೆ ಕೀಳಾಗಿರಿಸು, ಮಹಾದಾನಿ ಕೂಡಲ ಸಂಗಮ ದೇವಾ''

೪೪೭. "ಐದು ಮಾನವ ಕುಟ್ಟಿ, ಒಂದು ಮಾನವ ಮಾಡು ಕಂಡ್ಯಾ. ಮದವಳಿಗೆ ಇದು ನಮ್ಮ ಬಾಳುವೆ, ಮದವಳಿಗೆ ಇದು ನಮ್ಮ ವಿಸ್ತಾರ. ಮದವಳಿಗೆ ಮದವಳಿದು ನಿಜವುಳಿದ ಬಳಿಕ, ಅದು ಸತ್ಯ ಕಾಣಾ ಕೂಡಲ ಸಂಗಮ ದೇವಾ''

ಎಂಥ ಸೊಗಸಾದ ವಚನ! ಪಂಚೇಂದ್ರಿಯಗಳಲ್ಲಿ ಹರಿಯುವ ಮನಸ್ಸನ್ನು ಲಿಂಗದಲ್ಲಿ ಏಕೋಭಾವವುಳ್ಳದ್ದನ್ನಾಗಿಮಾಡಿ ಮದವಳಿದು ನಿಜವುಳಿದ ಬಳಿಕ—'ನಾನು' ಎಂಬ ಅಹಂ ಮರೆಯಾಗಿ, ಆತ್ಮಕ್ಕೆ ಸ್ವರೂಪ ಜ್ಞಾನವುಂಟಾಗಿ ಲಿಂಗದೊಡನೆ ಏಕಾರ್ಥವಾಗಲು—ಅದು ಸತ್ಯ ಕಾಣಾ ಕೂಡಲ ಸಂಗಮದೇವಾ ಎಂದು ಹೇಳಿದ್ದಾರೆ. ಶರಣ ಸತಿ ಲಿಂಗ ಪತಿಯ ಸಂಸಾರ ಹೀಗೆ ನಡೆಯಬೇಕಂತೆ! ಬಸವಣ್ಣನವರನ್ನು ಯಾರು ಹಾರುವರಾಗಿದ್ದರು ಎಂದು ಆಡಿದರೋ ಗೊತ್ತಿಲ್ಲ. ಬಸವಣ್ಣನವರು,

೪೪೮. "ಹಾರುವ ಹಾರುವನಪ್ಪೆ ನಾನು ಸದ್ಭಕ್ತರೆನ್ನವರೆನ್ನವರೆಂದು. ಹಾರುವೆ ಹಾರುವೆನವ್ವಾ ನಾನು ಶರಣರು ಎನ್ನವರೆನ್ನವರೆಂದು, ಕೂಡಲ ಸಂಗನ ಶರಣರು ಒಕ್ಕುದನಿಕ್ಕಿ ಸಲಹುವರೆಂದು''

---

೪೪೫. ಪ್ರ. ದೇ. ವ. ಪುಟ ,೨೫೪.

೪೪೬–೭. ಬ. ವ. ಪುಟಗಳು ೫೩,೧೩೩. ೪೪೮. ಬ. ವ. ಪುಟ ೬೮.

ಎಂಬದಾಗಿ 'ಹಾರುವ' ಪದವನ್ನು ಹಾರಾಡಿಸಿದ್ದಾರೆ. ಆದರೆ ಬಸವಣ್ಣನವರು ಭಕ್ತಿರಸಾವೇಶವುಳ್ಳವರು, ಭಾವಾವೇಶವುಳ್ಳವರು. ಸಹಜವಾಗಿ ಹೊಳೆದುದನ್ನು ತಮಗೆ ತೋರಿದಂತೆ ಹೇಳಿದ್ದಾರೆ. ಬೆಡಗು ತೋರುವುದಕ್ಕಾಗಿ ವಚನಗಳನ್ನು ಹೇಳಿಲ್ಲ.

ಸಿದ್ಧರಾಮ ಮತ್ತು ಚೆನ್ನಬಸವ—ಇವರುಗಳ * ವಚನಗಳಲ್ಲಿ ಈ ಶಬ್ದಾಲಂಕಾರದ ಬೆಡಗು ಹೆಚ್ಚಾಗಿ ಕಂಡು ಬರುತ್ತದೆ.

೪೪೯. "ತಿಳಿ ನೀರೆಂಬಿ, ತಿಳಿ ನೀರೆಂಬಿ. ತಿಳಿ ನೀಯೆಂದು ಒಂದು ದಿನ ಅಂದಿಲ್ಲ. ಎಲೆ ಮಾನವಾ, ಕ್ಷಣಕ್ಕೆ ಕ್ಷಣಕ್ಕೆ ತಿಳಿ ನೀ ಎಂದರೆ, ತಳುವದೆ ತನ್ನ ನಿಜವ ಕೊಡನೆ ಕಪಿಲ ಸಿದ್ಧ ಮಲ್ಲೇಂದ್ರ"

೪೫೦. "ಅಯ್ಯಗಳನುಭವಕ್ಕಲ್ಲದೆ ನಿನ್ನ ಪಾಪಕ್ಕೆ ಅವರು ಅಯ್ಯಗಳೆ? ಅಯ್ಯಗಳನುಭಾವ ನಿನ್ನ ಮನೋಭಾವ ಏಕವಾದರೆ ಅಯ್ಯತನವೇರಿತ್ತಯ್ಯ ಕಪಿಲ ಸಿದ್ಧ ಮಲ್ಲಿಕಾರ್ಜುನಾ"

೪೫೧. "ತಿಳಿದ ಮಹೇಶ ತಿಳಿ ನೀರಿಂತಿಪ್ಪವ ನೋಡಾ. ಎಲ್ಲರಲ್ಲಿ ತಿಳಿಯ ನೋಡಾ. ತಿಳಿ ಜ್ಞಾನ ತಿಳಿದವ ತಿಳಿಗೊಳನೇನೋ, ತಿಂಗಳ ಸೂಡಿದ ಹಳೆ ಮಲ್ಲಿಕಾರ್ಜುನನ ಮತವೇನೋ?"

೪೫೨. "ಆಡಂಬರದಯ್ಯಗಳ ಕಂಡರೆ ಆಡಬೇಡ. ಅವರ ಪಾದೋದಕ ಪ್ರಸಾದ ಸ್ವೀಕಾರದಲ್ಲಿ ಆಡು. ಆಡುವವರ ಕುಲ ಛಲ ಶೀಲ ಜ್ಞಾನನಿಡಿದಾಡಿ ಆಡದೆ ಆಡಿದರೆ, ಆಡಿಸುವೆ ಭವದ ಕುಳಿಯಲ್ಲಿ ಕಡು ಜಾಣ ಕಪಿಲ ಸಿದ್ಧ ಮಲ್ಲಿಕಾರ್ಜುನಾ"

೪೫೩. "ಹುಟ್ಟಿ ಹುಟ್ಟಿ ಹೋಗುವದದು ಬಹು ಕಷ್ಟವಯ್ಯ. ಕೆಟ್ಟು ಕೆಟ್ಟು ಹೋಗುವದದು ಬೆಟ್ಟದ ಸಾಮರ್ಥ್ಯವಯ್ಯ. ಹುಟ್ಟಿ ಹೋದವರು ಕೋಟಾನುಕೋಟಿ, ಕೆಟ್ಟುಹೋದವರು ಒಬ್ಬರೂ ಇಲ್ಲ ಕಪಿಲ ಸಿದ್ಧ ಮಲ್ಲಿಕಾರ್ಜುನಾ"

---

* ಶಬ್ದಾಲಂಕಾರದ ಬೆಡಗು ತೋರುವ, ಇವರ ವಚನಗಳೆಂದು ಅಂಕಿತಗಳಿಂದ ಊಹಿಸುವುಗಳಲ್ಲಿ ಹಲವು, ಅವರದಲ್ಲವೆಂದೂ ತೋಂಟದಾರ್ಯರ ಕಾಲದಲ್ಲಿ ಇಂಥವನ್ನೂ ಇನ್ನೂ ಅನೇಕವನ್ನೂ ಇತರರು ಸೇರಿಸಿದರೆಂದೂ ನಾವು ಅಭಿಪ್ರಾಯಪಡುತ್ತೇವೆ.

೪೪೯—೪೫೩. ಸಿ. ರಾ. ವ. ಪುಟಗಳು, ೧೦, ೬೨, ೭೨, ೮೩, ೭೫.

೪೫೪. "ಮುಳ್ಳು ಮೊರರ ಮೇಲೆ ಕಳ್ಳ ಮೂರುತಿ ತಿರುಗುತ್ತಿಹ ನೋಡಾ. ಒಳ್ಳೆ ಗುಣಗಳ್ಳರಿಗೆ ತನ್ನ ತಳ್ಳಿ ತೋರಿಸುವ ನೋಡಾ. ಜಳ್ಳು ಜೀವಗಳ್ಳರಿಗೆ ಸಾಧ್ಯವದು ಎಳ್ಳೆನಿತಿಲ್ಲ ನೋಡಾ ಕಪಿಲ ಸಿದ್ಧ ಮಲ್ಲಿಕಾರ್ಜುನಾ"

ಇಂಥ ವಚನಗಳ ಹಲವು ಉದಾಹರಣೆಗಳು ಸಿದ್ಧರಾಮನಲ್ಲಿ ದೊರೆಯುತ್ತವೆ. ಚೆನ್ನಬಸವೇಶನ ವಚನಗಳಲ್ಲಿ ಕೆಲವನ್ನು ಇಲ್ಲಿ ಕೊಡುತ್ತೇವೆ:

೪೫೫. "ಕಂದದ ಹೂವ ಕೊಯ್ದು ನೊಂದದಾರತಿಯ ಬೆಳಗಿ ಅಂದವಳಿಯದ, ಬಿಂದು ತುಳುಕದೆ, ನಂದಿ ಮುಂದುಗೆಡದ ಮುನ್ನವೆ, ಕಂದದ ಹೂವಿನ ಪೂಜೆಯ ಲಿಂಗ ಮಧ್ಯವ ತಿಳಿದು ನೋಡಿ, ಮೇಲುಗಿರಿಯ ಮೇಲಿಹ ಆಕಳದ ಕ್ಷೀರದಲ್ಲಿ ಅಡಿಗೆಯನೆ ಮಾಡಿ, ನಮ್ಮ ಕೂಡಲ ಚೆನ್ನ ಸಂಗಯ್ಯನೆಂಬ ಲಿಂಗಕ್ಕೆ ಆರೋಗಣೆಯ ಸಮಯಾ"

೪೫೬. "ಕಾಣಬಹ ಲಿಂಗಕ್ಕೆ ಅಗ್ಗವಣಿಯ ಕೊಟ್ಟು ವೇಳೆಯಾಯಿತ್ತೆಂಬಿರಿ ಲೋಕಕ್ಕೆಲ್ಲ. ನಿರಾಳಲಿಂಗಕ್ಕೆ ಕೊಡಲರಿಯರು ನೋಡಾ. ಕಂಡವರ ಕಂಡು ಕಂಡೆವೆಂಬಂತೆ, ಉಂಡವರ ಕಂಡು ಉಂಡೆವೆಂಬಂತೆ, ಇದ ಕಂಡು ನಾಚಿತ್ತೆನ್ನ ಮನವು ಕೂಡಲ ಚೆನ್ನ ಸಂಗನು ದೇವಾ"

೪೫೭. "ತ್ರಿವಿಧಕ್ಕೆ ರತಿಯಾಗಿ, ತ್ರಿವಿಧದ ನಿಜವ ತಿಳಿದು, ತ್ರಿವಿಧವನವಗ್ರಹಿಸಿ, ತ್ರಿವಿಧ ಪದವ ಮೀರಿ, ತ್ರಿವಿಧ ನಿರ್ಣಯದಲ್ಲಿ ನಿಷ್ಪತ್ತಿಯಾದ ಕೂಡಲ ಚೆನ್ನ ಸಂಗ ನಿಮ್ಮ ಶರಣ"

೪೫೮. "ಓಲೆಯನಿಕ್ಕಿದ ಬಾಲೆಯ ಓಲೆಯ ಕಳೆಯದಿನ್ನೆಂತೋ? ಓಲೆಯಿರ್ದು ಯೋಗ ವ್ಯರ್ಥವಾಯಿತ್ತೆಲ್ಲರಿಗು. ಓಲೆಯೂ ಹೋಯಿತ್ತು ಬಾಲೆಯೂ ಹೋಯಿತ್ತು. ಓಲೆಯ ಬಾಲೆಯ ಕೀಲ ಬಲ್ಲವರ ನಮ್ಮ ಕೂಡಲ ಚೆನ್ನ ಸಂಗಯ್ಯನೆಂಬೆನು"

ವಚನಕಾರರು ತಮ್ಮ ಅನುಭವದ ವಚನಗಳ ಅರ್ಥ ಜನರಿಗೆ ಮನದಟ್ಟಾಗಬೇಕೆಂದು ಜೀವನದ ಕ್ಷೇತ್ರದಿಂದ ಹಲವು ಉಪಮಾನಗಳನ್ನೂ ದೃಷ್ಟಾಂತಗಳನ್ನೂ ಎತ್ತಿಕೊಟ್ಟಿದ್ದಾರೆ. 'ಉಪಮಾ ಕಾಳಿದಾಸಸ್ಯ' ಎಂದು ಸಂಸ್ಕೃತಸಾಹಿತ್ಯ ವಿಮರ್ಶಕರು ಹೇಳುವುದುಂಟಷ್ಟೆ. ಈ ಉಪಮಾಲಂಕಾರದ ಪ್ರಯೋಗಕ್ಕೆ ಕನ್ನಡ ಸಾಹಿತ್ಯದಲ್ಲಿ ಬಸವಣ್ಣನವರಿಗೆ ಪ್ರಥಮಸ್ಥಾನ ದೊರೆಯಬೇಕಾಗಿದೆ. ಅವರು ಕೊಡುವ ಉಪಮಾನಗಳು ಬಹಳ ಸಹಜವಾದುವು,

---

೪೫೪. ಸಿ. ರಾ. ವ. ಪುಟ ೭೬. ೪೫೫–೮. ಚೆ. ಬ. ವ. ಪುಟಗಳು ೭೭, ೮೪, ೯೮.

ಬಹಳ ಅರ್ಥಗರ್ಭಿತವಾದುವು, ಬಹಳ ಪರಿಣಾಮಕಾರಿಯಾದುವು. ಸಂಸಾರ ಸಾಗರದಲ್ಲಿ ಮುಳುಗಿದರಂತೆ, ಸಂಸಾರ ರಾಹು ಹಿಡಿದಿದೆಯಂತೆ, ತಾವು ಸಂಸಾರವೆಂಬ ಸರ್ಪದ ನೆಳಲಿನಲ್ಲಿ ಇರುವ ಕಪ್ಪೆಯಂತೆ, ಸಂಸಾರದ ಬಲೆಯಲ್ಲಿ ಸಿಕ್ಕಿದರಂತೆ, ಸಂಸಾರವೆಂಬುದೊಂದು ಗಾಳಿಯ ಸೊಡರಂತೆ—ಹೀಗೆ ಹಲವು ಉಪಮಾನಗಳನ್ನು ಸಂದರ್ಭಾನುಸಾರ ಹೇಳಿದ್ದಾರೆ. ಚಿತ್ತ ಅತ್ತಿಯ ಹಣ್ಣು, ಮನ ಕೊಂಬೆಯ ಮೇಲಣ ಮರ್ಕಟ, ಮನ ಅಂದಣವನೇರಿದ ಸೊಣಗ. ತಾವು ಕೆಸರಲ್ಲಿ ಬಿದ್ದ ಪಶು, ಅಡವಿಯಲ್ಲಿ ಹೊಲಬುಗೆಟ್ಟ ಪಶು. ಲಿಂಗಕ್ಕಿಂತ ಜಂಗಮವೇ ಶ್ರೇಷ್ಠವಾಗಿರಲು, ತಾವು ಲಿಂಗನಿಷ್ಠೆಯನ್ನು ತೋರುತ್ತ ಜಂಗಮದ ಮಹತ್ವವನ್ನು ಅರಿಯದುದಕ್ಕೆ,—ಹೊಸತಿಲ ಪೂಜಿಸಿ ಹೊಡೆವಂಟು ಹೋದ ಒಕ್ಕಲಿತಿಯಂತಾಯಿತ್ತೆನ್ನ ಭಕ್ತಿ ಎಂದು ಹೇಳಿದ್ದಾರೆ. ಜಂಗಮಕ್ಕೆ ಮಾಡಿದರೆ ಲಿಂಗಸಂತುಷ್ಟಿಯೆಂಬುದಕ್ಕೆ—'ಮರದ ಬಾಯಿ ಬೇರು', 'ತಳಕ್ಕೆ ನೀರೆರೆದರೆ ಮೇಲೆ ಪಲ್ಲವಿಸಿತ್ತು ನೋಡಾ'. ಶರಣರ ಮಧ್ಯದಲ್ಲಿರಿಸು ಎಂಬುದಕ್ಕೆ,—ಜಲವ ತಪ್ಪಿದ ಮತ್ಸ್ಯ ಬದುಕುವುದೇ ಸೋಜಿಗ. ಶರಣರನ್ನು,—ಹೊಲಬುಗೆಟ್ಟ ಶಿಶು ತನ್ನ ತಾಯನರಸುವಂತೆ, ಬಳಿದಪ್ಪಿದ ಪಶು ತನ್ನ ಹಿಂಡನರಸುವಂತೆ—ಅರಸುತ್ತಿದ್ದರು. "ಭಕ್ತಿ ಎಂಬ ನಿಧಾನವ ಸಾಧಿಸುವರೆ ಶಿವಪ್ರೇಮವೆಂಬ ಅಂಜನವ ನೆಚ್ಚುಕೊಂಬುದು". ವ್ಯವಸಾಯಕ್ಕೆ ಸಂಬಂಧಿಸಿದ ಹಾಗೆ,

೪೫೯. "ಬೆಳೆಭೂಮಿಯಲೊಂದು ಪ್ರಳಯದ ಕಸ ಹುಟ್ಟಿ ತಿಳಿಯಲೀಯದು. ಎನ್ನವಗುಣವೆಂಬ ಕಸವ ಕಿತ್ತು ಸಲಹಯ್ಯ ಲಿಂಗ ತಂದೆ. ಸುಳಿವೆಗೆದು ಬೆಳೆವೆನು, ಕೂಡಲ ಸಂಗಮ ದೇವಾ."

ಗರುಡಿಗೆ ಸಂಬಂಧಿಸಿದ ಹಾಗೆ,

೪೬೦. "ಗರುಡಿಯ ಕಟ್ಟಿ, ಆರುವತ್ತುನಾಲ್ಕು ಕೋಲಡ ಅಭ್ಯಾಸವ ಮಾಡಿದೆನಯ್ಯ. ಇರಿವ ಗಾಯ ಖಂಡೆಯ ಭೇದವಿನ್ನು ತಿಳಿಯದು. ಪ್ರತಿ ಗರುಡಿಕಾರ ಬಿರುದ ಪಾಡಿಂಗೆ ಒದಗಲು, ವೀರಪಟ್ಟೆಯ ಕಟ್ಟಿ ತಿಗುರನೇರಿಸಿಕೊಂಬೆ. ಗುರುಕಳನನೇರಿ ಕಠಾರಿಯ ಕೊಂಡಲ್ಲಿ ಹೋಯಿತ್ತಾಗಳೆ ಎಂದಡೆ, ಎನ್ನ ನಿನ್ನಲ್ಲಿ ನೋಡು ಕೂಡಲ ಸಂಗಮ ದೇವಾ"

---

೪೫೯–೬೦. ಬ. ವ. ಪುಟಗಳು ೮, ೧೦೭.

ಅಂಗಡಿಗೆ ಸಂಬಂಧಿಸಿದ ಹಾಗೆ,

೪೬೧. "ಧರೆಯ ಮೇಲೊಂದು ಹಿರಿದಪ್ಪ ಅಂಗಡಿಯನಿಕ್ಕಿ, ಪರದ ಕುಳ್ಳಿರ್ದ ನಮ್ಮ ಮಹಾದೇವಸೆಟ್ಟಿ. ಒಮ್ಮನವಾದಡೆ ಒಡನೆ ನುಡಿವನು, ಇಮ್ಮನವಾದಡೆ ನುಡಿಯನು. ಕಾಣಿಯ ಸೋಲ, ಅರ್ಧಕಾಣಿಯ ಗೆಲ್ಲ. ಜಾಣ ನೋಡವ್ವಾ, ನಮ್ಮ ಕೂಡಲ ಸಂಗಮ ದೇವಾ"

ಎಂದು ಸಂದರ್ಭಾನುಸಾರ ವಚನಗಳನ್ನು ಹೇಳಿದ್ದಾರೆ. ಶರಣರು ಮನೆಗೆ ಬಂದು ಆದರಿಸಲು, "ಸಾಸಿವೆಯ ಮೇಲೆ ಸಾಗರ ಹರಿದಂತಾಯಿತ್ತು", ಅಷ್ಟು ಸಂತೋಷ. ಕೆಲವು ಬಾರಿ ಬಹಳ ಮರ್ಮದ ಮಾತುಗಳನ್ನು ಬಸವಣ್ಣನವರು ಸೊಗಸಾಗಿ ಹೇಳಿದ್ದಾರೆ. "ಮನದ ಕೋಪ ತನ್ನರುಹಿನ ಕೇಡು", "ಸವತಿ ಸಕ್ಕರೆ ಬೇವು ಬೆಲ್ಲ ಉಂಟೆ", "ತತ್ತ್ವವ ನರಿದಿಹೆನೆಂದು ಮೃತ್ಯುವ ಕರೆಕೊಂಡೆನಯ್ಯ", "ನಿರಿಸೋಂಕಲು ಮುನಿಯಿಲ್ಲ", "ಸಂತವಿದ್ದ ಮನೆಗೆ ಕೊಂತವ ತಂದಂತೆ", "ಮಾರಿ ಎಂಬುದೇನೋ? ಕಂಗಳು ತಪ್ಪಿ ನೋಡಿದರೆ ಮಾರಿ, ನಾಲಗೆ ತಪ್ಪಿ ನುಡಿದರೆ ಮಾರಿ, ನಮ್ಮ ಕೂಡಲ ಸಂಗಯ್ಯನ ನೆನಹ ಮರೆದರೆ ಮಾರಿ". ಇನ್ನೂ ಹಲವು ಉದಾಹರಣೆಗಳು ಅವರ ವಚನಗಳಲ್ಲಿ ದೊರೆಯುತ್ತವೆ.

ಬಸವಣ್ಣನವರಲ್ಲಿ ಕಂಡುಬರುವ ಭಕ್ತಿರಸಾವೇಶ ಪ್ರಭುವಿನಲ್ಲಿಲ್ಲ. ಆತನದು ಶಾಂತಮನಸ್ಸು. ಆತ ಜ್ಞಾನಿ, ವೈರಾಗ್ಯಮೂರ್ತಿ. ಜ್ಞಾನಪರವಾದವೂ ತತ್ತ್ವಪರವಾದವೂ ಆದ ವಚನಗಳು ಆತನಲ್ಲಿ ಹೆಚ್ಚು. ಆತನ ವಚನಗಳು ಆಧಿಕಾರಿಕ ಸ್ವರದಿಂದ ಬರುತ್ತವೆ. ಖಂಡಿತ ಮನೋಭಾವ ಕಂಡು ಬಂದರೂ ಅವುಗಳಲ್ಲಿ ಒರಟುತನ, ಅಸಂಸ್ಕೃತಿ, ಇಲ್ಲ. ದೇಹ, ಇಂದ್ರಿಯಗಳು, ಮನಸ್ಸು, ಆತ್ಮ, ಮಾಯೆ, ಮೊದಲಾದುವುಗಳಿಗೆಲ್ಲ ಸಾಂಕೇತಿಕ ಪದಗಳನ್ನು ಉಪಯೋಗಿಸಿ ಒಗಟಿಗಳಂಥ ಹಲವು ವಚನಗಳನ್ನು ಆತ ಹೇಳಿದ್ದಾನೆ. ಇವು ಬರಿ ನಾರಿಕೇಳಪಾಕವಷ್ಟೇ ಅಲ್ಲ; ಶಿಲೆಯಿಂದ ಚಿನ್ನವನ್ನು ತೆಗೆಯುವಂಥ ಶಿಲಾಪಾಕವೂ ಆಗಿರುತ್ತದೆ. ದೃಷ್ಟಾಂತಗಳೂ ಉಪಮಾನಗಳೂ ಹಲವು ಆತನ ವಚನಗಳಲ್ಲುಂಟು. ಆದರೆ ಬಸವಣ್ಣನವರ ವಚನಗಳಲ್ಲಿರುವಷ್ಟು ಇಲ್ಲ. "ಘನ ತರದ ಚಿತ್ರದ ರೂಹ ಬರೆಯಬಹು

---

೪೬೧. ಬ. ವ. ಪುಟ ೧೮.

ವಲ್ಲದೆ ಪ್ರಾಣವ ಬರೆಯಬಹುದೇ ಅಯ್ಯ", "ಹೊಟ್ಟೆಯ ಮೇಲೆ ಕಟ್ಟೋಗರದ ಮೊಟ್ಟೆಯ ಕಟ್ಟಿದೊಡೇನೊ, ಹಸಿವು ಹೋಹುದೇ", "ಬಿರುಗಾಳಿ ಬೀಸಿ ಮರ ಮುರಿವಂತೆ ಸುಳಿವು ಸುಳಿಯದೆ ತಂಗಾಳಿ ಪರಿಮಳದೊಡಗೂಡಿ ಸುಳಿವಂತೆ ಸುಳಿಯಬೇಕು", "ಮದ್ಯವಲ್ಲವೇನು ಅಷ್ಟ ಮದಂಗಳು? ಮಾಂಸವಲ್ಲವೇನು ಸಂಸಾರ ಸಂಗವು?" "ಪ್ರಣತೆಯೂ ಅದೆ, ಬತ್ತಿಯೂ ಅದೆ, ತೈಲವಿಲ್ಲದೆ ಜ್ಯೋತಿಯೆಂತಹುದೋ", "ಒತ್ತಿ ಹಣ್ಣು ಮಾಡಿದಡೆ ಅದೆತ್ತಣ ರುಚಿಯಪ್ಪದೋ? ಕಾಮಿಸಿ ಕಲ್ಪಿಸಿ ಭಾವಿಸಿದರೆ, ಅದೆ ಭಂಗ ನೋಡಾ", "ಎತ್ತಣ ಮಾಮರ ಎತ್ತಣ ಕೋಗಿಲೆ, ಬೆಟ್ಟದ ನೆಲ್ಲಿಕಾಯಿ ಸಮುದ್ರದೊಳಗಣ ಉಪ್ಪು ಎತ್ತಲಿಂದೆತ್ತ ಸಂಬಂಧ",—ಮುಂತಾದ ಉಪಮಾನಗಳೂ ದೃಷ್ಟಾಂತಗಳೂ ಅತ್ಯುತ್ತಮವಾದುವು. ಪ್ರಭುವಿನ ಪ್ರತಿಭೆ ಚೆನ್ನಾಗಿ ನುರಿತು ಹೊಳಪೇರಿ ಸೌಮ್ಯ ಪ್ರಭೆಯಿಂದ ಕಂಗೊಳಿಸುತ್ತದೆ. ಒಟ್ಟಿನಲ್ಲಿ, ಪ್ರಭುವಿನ ವಚನಗಳನ್ನು ವಿವರಿಸಿದ ಹೊರತು, ಆ ಒಗಟಿಗಳನ್ನು ಬಿಡಿಸಿದ ಹೊರತು, ಅವುಗಳ ಸ್ವಾರಸ್ಯ ತಿಳಿಯುವುದು ಕಷ್ಟ.

ಚೆನ್ನಬಸವನ ವಚನಗಳಲ್ಲಿ ಬರುವ ಉಪಮಾನಗಳೂ ದೃಷ್ಟಾಂತಗಳೂ ಸಾಮಾನ್ಯವಾಗಿ ಬಸವಣ್ಣನವರ ಮತ್ತು ಅಲ್ಲಮಪ್ರಭುವಿನ ವಚನಗಳಲ್ಲಿಯೆ ದೊರೆಯುತ್ತವೆಯೆಂದು ಹೇಳಬಹುದು. ಚೆನ್ನಬಸವನಲ್ಲಿ ಭಕ್ತಹೃದಯ ಕಾಣುವುದಿಲ್ಲ. ಕಪಟಿಗಳನ್ನೂ ಮಧ್ಯಮ ಜ್ಞಾನಿಗಳನ್ನೂ ಆತ ಕಟುವಾಗಿಯೂ ನಿಷ್ಠುರವಾಗಿಯೂ ಟೀಕಿಸುತ್ತಾನೆ. ಸಹಾನುಭೂತಿಗಿಂತ ತಿರಸ್ಕಾರಭಾವವೇ ಹೆಚ್ಚು. ಪ್ರಭುವಿನ ಗಾಂಭೀರ್ಯ ಆಧಿಕಾರಿಕ ಸ್ವರ ಇಲ್ಲಿ ಕಾಣುವುದಿಲ್ಲ. ಆದರೂ ಚೆನ್ನಬಸವೇಶ್ವರನ ಪದಪ್ರಯೋಗದಲ್ಲಿ ಸತ್ವವಿದೆ, ಕಳೆಯಿದೆ, ಒಂದು ವೈಶಿಷ್ಟ್ಯವಿದೆ. ಆತನ ಬುದ್ಧಿಶಕ್ತಿಯ ತೀಕ್ಷ್ಣತೆಯನ್ನೂ ವಾದಸಾಮರ್ಥ್ಯವನ್ನೂ ನೋಡಿ ನಾವು ಮುಗ್ಧರಾಗುತ್ತೇವೆ. "ಹೊನ್ನುಳ್ಳ ದೊರೆಯಂತೆ ಭಾವಿಸಿಕೊಂಡು ಬಿಮ್ಮನಲ್ಲಿಪ್ಪನೇ ಭಕ್ತ?", "ಪರುಷದ ಪರ್ವತದಲ್ಲಿ ಕಬ್ಬಿನ ಉಂಟೇ ಅಯ್ಯ?", "ಮಲಿನದ ಮಾರಿಯ ಮಿಂಚಿನ ಘಾತಕರಿಗೆ ಸಮಯಾಚಾರದ ಭಕ್ತಿ ಎಲ್ಲಿಹುದೋ?", "ಅಯ್ಯಾ, ಲೋಕದ ನಡತೆ ನಮಗೆ ಡೊಂಕು, ತನ್ನ

ನಡತೆ ಲೋಕಕ್ಕೆ ಡೊಂಕು", "ಹೆಗ್ಗಣವನಿಕ್ಕಿ ನೆಲಗಟ್ಟು ಕಟ್ಟಿದಂತೆ ಆಯಿತ್ತೆನ್ನ ಕಾಯ ಗುಣ, ಅಹಂಕಾರ ಪ್ರಬೋಧೆಗಳೇಕಯ್ಯ?"— ಮುಂತಾದ ಉದಾಹರಣೆಗಳು ಆತನ ಅನುಭವಜ್ಞಾನಕ್ಕೆ ನಿದರ್ಶನಗಳಾಗಿವೆ. ಆತನ ವಚನಗಳಲ್ಲಿ ಪ್ರತಿವಾದಿ ಭಯಂಕರ ಶಬ್ದ ಘೋರಣೆ ಸೊಗಸಾಗಿ ಕಾಣುತ್ತದೆ.

೪೬೨. "ಭಕ್ತರ ಮಠಕ್ಕೆ ಹೋಗಿ ಒಳ ಹೊರಗೆಂಬುದು ಶೀಲವೇ? ನಮ್ಮ ಲಿಂಗಕ್ಕೆ ಒಳ್ಳೆ ಅಗ್ಗವಣಿ ತನ್ನಿ, ಒಳ್ಳೆ ಪುಷ್ಪವ ತನ್ನಿ, ಒಳ್ಳೆ ಓಗರವ ಮಾಡಿ ಎಂಬುದು ಶೀಲವೇ? ಅಲ್ಲಲ್ಲ. ಕೇಳಿ ಭೋ. ಏಕ ವಾಕ್ಯದ ಬೀಭತ್ಸ ಶಬ್ದ, ದ್ವಿಗುಣ, ತ್ರಿಗುಣ, (ಕರಣ ಚತುಷ್ಟಯ?), ಪಂಚಭೂತ, ಅರಿಷಡ್ವರ್ಗ, ಸಪ್ತವ್ಯಸನ, ಅಷ್ಟಮದ, ನವಗ್ರಹ, ದಶವಾಯು, ದಶೇಂದ್ರಿಯ, ಇಂತಿವೆಲ್ಲವ ಕೊಂದು ತಿಂದಾತನೇ ಶೀಲವಂತ ನಮ್ಮ ಕೂಡಲ ಸಂಗನು ದೇವರಲ್ಲಿ"

ಸಿದ್ಧರಾಮನಲ್ಲಿ ಭಕ್ತಹೃದಯ ಚೆನ್ನಾಗಿ ಕಾಣುತ್ತದೆ. ಸೊನ್ನಲಾಪುರ ಪ್ರಾಂತದಲ್ಲಿ ದೊಡ್ಡ ಗುರುವಾಗಿ, ಹಾವಿನಹಾಳ ಕಲ್ಲಯ್ಯ, ಕೇದಾರ ಗುರು ಮೊದಲಾದವರಿಗೆ ಬೋಧೆಮಾಡಿದವನಾದ್ದರಿಂದ ಸುಲಭವಾದ ಉಪದೇಶದ ವಚನಗಳೂ ಆತನಲ್ಲಿ ಕಂಡುಬರುತ್ತವೆ. ಆದರೆ ಮೂರ್ತಿ ಮಹತ್ವದಲ್ಲಿ ಪ್ರಭುವಿನ ಮಟ್ಟಕ್ಕೆ ಸಿದ್ಧರಾಮ ಏರುವುದಿಲ್ಲ. ಹೃದಯವನ್ನು ಕರಗಿಸುವುದರಲ್ಲಿ ಬಸವಣ್ಣನವರ ಮಟ್ಟಕ್ಕೆ ಬರುವುದಿಲ್ಲ. ಬುದ್ಧಿ ಚಾತುರ್ಯದಲ್ಲಿ ಚೆನ್ನಬಸವೇಶ್ವರನಿಗಿಂತ ಮಟ್ಟು. ಆದರೆ ನಿಷ್ಕಪಟವಾದ ಸರಳ ಮನೋಭಾವ ಆತನದು. "ದೇವನಿಂತವನೆಂದು ನಂಬಲಾಗದಯ್ಯ. ಬಾ ಎಂದು ಹೇಳಿ ಬಯಲಾದ ದೇವನೊಳ್ಳಿದನೆ", ಎಂಬುದರೊಡನೆ ಬಸವಣ್ಣನವರ "ದೇವನೊಳ್ಳಿದನೆಂದು ಮುಯ್ಯೆಸಲು ಬೇಡ. ತರಕಟ ಕಾಡಿಹನೊಳ್ಳಿದನೆ? ಅಳಿಸುವ ನಗಿಸುವನೊಳ್ಳಿದನೆ?" ಎಂಬುದನ್ನು ಹೋಲಿಸಬಹುದು. "ನೀರನೆರೆಯಲಿಕ್ಕಾತನೇನು ಬಿಸಿಲಿಂದ ಬಳಲಿದನೆ? ಪುಷ್ಪದಿಂದ ಧರಿಸಿಲಿಕ್ಕಾತನೇನು ವಿಟರಾಜನೆ? ನಿನ್ನ ಮನವೆಂಬ ನೀರಿಂದ ಜ್ಞಾನವೆಂಬ ಪುಷ್ಪದಿಂದ ಪೂಜಿಸಬಲ್ಲರೆ ಭಕ್ತನೆಂಬೆ, ಮಹೇಶ್ವರನೆಂಬೆ", "ಭಾವ ಬಲಿದಲ್ಲಿ ಲಿಂಗವೆನಿಸಿತ್ತು, ಭಾವ ವಿಭಾವವಾದಲ್ಲಿ ಪಾಷಾಣ

೪೬೨. ಚೆ.ಬ.ವ.ಪುಟ ೯೧. [ವ.ಶಾ.ಸಾ.ಭಾಗ ೧. (ಪೂ) ಪುಟ ೩೧೭ರಲ್ಲಿ ಪಾಠ ಭೇದವಿದೆ]

ವೆನಿಸಿತ್ತು", "ವಿದ್ಯೆಯನರಿದವ ಗುದ್ದಾಟಕ್ಕೊಳಗಾದ, ಅವಿದ್ಯೆಯ ನರಿಯದವ ಪ್ರಪಂಚವ ಒದ್ದುಬಿಟ್ಟ ನೋಡಾ", "ಜಪವೆಂಬುದು ಪಾಪಕ್ಕೆ ಬಹುತಾಪ ನೋಡಯ್ಯ. ಜಪವೆಂಬುದು ಪುಣ್ಯದ ನಾಣ್ಯ ನೋಡಯ್ಯ"—ಎಂಬ ಮುಂತಾದ ಭಾವಗಳು ಸಿದ್ಧರಾಮನ ವಚನಗಳಲ್ಲಿ ದೊರೆಯುತ್ತವೆ. ಮಾತುಗಳನ್ನು ಹೊಂದಿಸುವುದರಲ್ಲಿ, ಪ್ರಾಸಾನುಪ್ರಾಸ ಗಳಂತೆ ಶಬ್ದ ವೈಚಿತ್ರ್ಯವನ್ನು ತೋರುವುದರಲ್ಲಿ, ಸಿದ್ಧರಾಮ ಉಳಿದವರಿ ಗಿಂತ ಹೆಚ್ಚು ಚಮತ್ಕಾರವನ್ನೂ ಪಾಂಡಿತ್ಯವನ್ನೂ ಪ್ರದರ್ಶಿಸುತ್ತಾನೆ.

ಅಪೂರ್ವವಾದ ಮತ್ತು ರಸವತ್ತಾದ ಶೈಲಿ ದೇವರದಾಸಿಮಯ್ಯನ ವಚನಗಳಲ್ಲಿ ನಮಗೆ ದೊರೆಯುತ್ತದೆ. ಆತನಲ್ಲಿ ಆವೇಶವಿಲ್ಲ, ರಸೋ ದ್ರೇಕವಿಲ್ಲ. ಆದರೆ,

೪೬೩. "ಇಂದಿಂಗೆಂದು ನಾಳಿಂಗೆಂದು ಚಿಂತಿಸಲೇಕೊ? ತಂದಿಕ್ಕುವ ಶಿವಂಗೆ ಬಡತನವೇ ರಾಮನಾಥಾ"

ಎಂಬ, ವಯಸ್ಸಿನಿಂದ ಬಂದ ಒಂದು ಅನುಭವ, ಸ್ಥೈರ್ಯ, ಜ್ಞಾನ— ಇನ್ನೆಲ್ಲ ಆತನಲ್ಲಿವೆ. ಎರಡನೆಯದಾಗಿ, ಆತನಿಗೆ ಸ್ತ್ರೀಯರ ವಿಚಾರದಲ್ಲಿ ಗೌರವ ಹೆಚ್ಚಾಗಿದೆ. ಗಾದೆಗಳಂತೆ ಮಾತುಗಳನ್ನು ಹೊಂದಿಸಿ ಅರ್ಥಗರ್ಭಿತ ವಾಗಿಯೂ ಸೂತ್ರಪ್ರಾಯವಾಗಿಯೂ ದೇವರ ದಾಸಿಮಯ್ಯ ವಚನಗಳನ್ನು ಹೇಳಿದ್ದಾನೆ. "ಜ್ವರವಿಡಿದ ಬಾಯಿಗೆ ನೊರೆವಾಲು ಒಲಿವುದೆ? ನರಕದಲ್ಲಿ ಬೀಳುವ ಮನುಜರಿಗೆ ಶಿವಭಕ್ತಿ ಎಂಬುದು ಕರಗಹಿ", "ಅನುಭಾವವಿಲ್ಲ ದವನ ಭಕ್ತಿ ತಲೆಕೆಳಗಪ್ಪುದಯ್ಯಾ! ಅನುಭಾವವೇ ಭಕ್ತಿಗಾಧಾರ. ಅನು ಭಾವವೇ ಭಕ್ತಿಗೆ ನೆಲೆಮನೆ"—ಮೊದಲಾದ ಉದಾಹರಣೆಗಳು ಹಲವು ಆತನಲ್ಲಿ ದೊರೆಯುತ್ತವೆ. ಸೊಗಸಾದ ದೃಷ್ಟಾಂತಗಳನ್ನು ಕೊಡುವುದರಲ್ಲಿ ಬಸವಣ್ಣನವರಿಗೆ ಸಮಗ್ರೈ. ಜತೆಗೆ ತಿಳಿಯಾದ ಹಾಸ್ಯವೂ ಉಂಟು.

೪೬೪. "ಪರಿದ ಗೋಣಿಯಲೊಬ್ಬ ಕಳವೆಯ ತುಂಬಿದ. ಇರುಳೆಲ್ಲಾ ನಡೆದನಾ ಸುಂಕಕ್ಕಂಜಿ. ಕಳವೆ ಎಲ್ಲ ಹೋಗಿ ಬರಿಯ ಗೋಣಿ ಉಳಿಯಿತ್ತು. ಅಳಿ ಮನದವನ ಭಕ್ತಿ ಇಂತಾಯಿತ್ತು ರಾಮನಾಥಾ"

೪೬೫. "ವಿಷಯದ ಪಿತ್ತ ತಲೆಗೇರಿದಲ್ಲಿ, ವಿವೇಕವೆಂಬ ದೃಷ್ಟಿ ನಷ್ಟವಾಗಿ ಪಶುಪತಿಯ ನೆನಪು ಕೆಟ್ಟು, ಮತಿ ಮಂದವಾದಲ್ಲಿ, ಮಂತ್ರದ ನೆನಪುಂಟೇ ಹೇಳಾ ರಾಮನಾಥಾ"

೪೬೩–೫. ದೇ. ದಾ. ವ. ಪುಟಗಳು, ೪೬, ೨೬, ೨೯.

ಬಸವಣ್ಣನವರು, ಅಲ್ಲಮಪ್ರಭು, ಚೆನ್ನಬಸವೇಶ್ವರ—ಇವರ ವಚನಗಳಲ್ಲಿ ದೊರೆಯುವ ಎಲ್ಲ ಲಕ್ಷಣಗಳಿಗೂ ಮೂಲಸ್ಥಾನ ದೇವರ ದಾಸಿಮಯ್ಯ.

ಮಹದೇವಿಯಕ್ಕ ಹೆಂಗಸಾದರೂ ಆಕೆಯಲ್ಲಿ ಲೋಕಾನುಭವಜ್ಞಾನ ಅಂತರಂಗದ ಅನುಭವಜ್ಞಾನ ಬಹಳ ಸೊಗಸಾಗಿ ಮಿಳಿತವಾಗಿವೆ. ಬಸವಣ್ಣಾದಿಗಳಲ್ಲಿ ಕೂಡ ಕಂಡುಬಾರದ ಅಪೂರ್ವಭಾವಗಳು ಕೆಲವು ಆಕೆಯ ಪ್ರತಿಭೆಯಲ್ಲಿ ಮಿಂಚುವುವು. "ಯತಿಗೆ ಪರಾಕಿಯಾಯಿತ್ತು ಮಾಯೆ", "ಬಲ್ಲಿದನ ಹಗೆ ತೆಗೆವನ್ನಬರ ಬಡವನ ಹರಣ ಹೋದ ತೆರನಂತಾಯಿತ್ತು", "ಅರಸಿ ತೊಳಲಿದರಿಲ್ಲ, ಬಯಸಿ ಹೊಕ್ಕರಿಲ್ಲ, ತಪಸ್ಸು ಮಾಡಿದರಿಲ್ಲ, ಅದು ತನ್ನ ಬಹ ಕಾಲಕ್ಕಲ್ಲದೆ ಸಾಧ್ಯವಾಗದು. ಶಿವ ನೊಲಿದಲ್ಲದೆ ಕೈಗೂಡದು", "ಕಿಚ್ಚಿಲ್ಲದ ಬೇಗೆಯಲಿ ಬೆಂದೆನವ್ವಾ! ಏರಿಲ್ಲದ ಗಾಯದಲ್ಲಿ ನೊಂದೆನವ್ವಾ", "ಲೋಕದ ಚೇಷ್ಟೆಗೆ ರವಿ ಬೀಜವಾದಂತೆ ಕರಣಂಗಳ ಚೇಷ್ಟೆಗೆ ಮನವೇ ಬೀಜ", "ಹಾವಿನ ಹಲ್ಲ ಕಳೆದು ಹಾವ ನಾಡಿಸಬಲ್ಲಡೆ ಹಾವಿನ ಸಂಗವೇ ಲೇಸು ಕಂಡಯ್ಯ", "ಕೂಡಿ ಕೂಡುವ ಸುಖದಿಂದ ಒಪ್ಪಚ್ಚಿ ಅಗಲಿ ಕೂಡುವ ಸುಖ ಲೇಸು ಕೆಳದಿ"—ಎಂಬ ಬಹಳ ಸೊಗಸಾದ ಭಾವಗಳು ಆಕೆಯ ವಚನಗಳಲ್ಲಿ ದೊರೆಯುತ್ತವೆ. ಆಕೆ ಚೆನ್ನಮಲ್ಲಿಕಾರ್ಜುನನಿಗಾಗಿ ಹಂಬಲಿಸುವುದೂ "ಆಲಿಸೆನ್ನ ಬಿನ್ನಪವ, ಲಾಲಿಸೆನ್ನ ಬಿನ್ನಪವ, ಪಾಲಿಸೆನ್ನ ಬಿನ್ನಪವ, ಏಕೆನ್ನ ಮೊರೆಯ ನೋಡೆ ಎನ್ನ ದುಃಖವ ಚೆನ್ನಮಲ್ಲಿಕಾರ್ಜುನಯ್ಯ" ಎಂದು ಮೊರೆಯಿಡುವುದೂ ಬಸವಣ್ಣನವರ ಹೃದಯವಿದ್ರಾವಕವಾದ ವಚನಗಳನ್ನು ಜ್ಞಾಪಕಕ್ಕೆ ತರುತ್ತವೆ.

ಹೀಗೆ ವಚನಗಳಲ್ಲಿ ರಸ ಭಾವ ಅಲಂಕಾರಗಳೂ, ಉದಾತ್ತಧ್ಯೇಯವೂ ಇರುವುದರಿಂದ ಅವು ಉತ್ತಮ ಸಾಹಿತ್ಯವೆಂದು ಧಾರಾಳವಾಗಿ ಹೇಳಬಹುದು. ವಚನಗಳು ನಮ್ಮ ಕನ್ನಡ ಸಾಹಿತ್ಯದ ಉಪನಿಷತ್ತುಗಳು. ಆ ಕವಿಗಳು ನಮ್ಮ ಕನ್ನಡನಾಡಿನ ರಸಋಷಿಗಳು. ಆ ರಸಋಷಿಗಳ ಉಪದೇಶ ಸಾರ: ಸಾಹಿತ್ಯವೇ ದರ್ಶನ, ದರ್ಶನವೇ ಸಾಹಿತ್ಯ! ಸತ್ಯವೇ ಸೌಂದರ್ಯ, ಸೌಂದರ್ಯವೇ ಸತ್ಯ!

---

## (i) ಪರಮಾತ್ಮ, ಆತ್ಮ.

೧. ಸ್ವಾಮಿ ನೀನು, ಶಾಶ್ವತ ನೀನು. ಎತ್ತಿದೆ ಬಿರುದು ಜಗವೆಲ್ಲವರಿಯಲು. ಮಹಾದೇವ, ಮಹಾದೇವ. ಇಲ್ಲಿಂದ ಮೇಲೆ ಶಬ್ದವಿಲ್ಲ. ಪಶುಪತಿ ಜಗಕ್ಕೆ ಏಕೋದೇವ. ಸ್ವರ್ಗ ಮರ್ತ್ಯ ಪಾತಾಳದೊಳಗೆ ಒಬ್ಬನೇ ದೇವ ಕೂಡಲ ಸಂಗಮ ದೇವ.

೨. ವಿಶ್ವದೊಳಗೆಲ್ಲ ನೀನೇ ದೇವಾ. ವಿಶ್ವಭರಿತನು ನೀನೇ ದೇವಾ. ವಿಶ್ವರೂಪನು ನೀನೇ ದೇವಾ. ವಿಶ್ವಪತಿ ನೀನೇ ದೇವಾ. ವಿಶ್ವಾತೀತನು ನೀನೇ ದೇವಾ ಅಖಂಡೇಶ್ವರಾ.

೩. ಎತ್ತನೇರಿದ ಕರ್ತನೊಬ್ಬನೇ ಜಗಕ್ಕೆಲ್ಲ. ಎತ್ತು ಬೆಳೆದ ಧಾನ್ಯವನುಂಬ ದೇವರ್ಕಳಿಲ್ಲ ನಿಮ್ಮ ತೊತ್ತಿನ ಮಕ್ಕಳು ರಾಮನಾಥಾ.

೪. ಅನಂತಕೋಟಿ ದೇವರೆಲ್ಲರು ತಂಡ ತಂಡದಲ್ಲಿ ಪ್ರಣಾಮಂಗೈಯ್ಯಲು ಅವರ ಮಕುಟಸಂಘಟ್ಟರಜ ಉದುರಲಿಕ್ಕೆ ಅಲ್ಲಿ ರಜತ ಗಿರಿಗಳಾದುವು, ಕಪಿಲ ಸಿದ್ಧ ಮಲ್ಲಿಕಾರ್ಜುನ ದೇವಾ ನಿಮ್ಮ ಮುಂದೆ.

೫. ಈಳೆ ನಿಂಬೆ ಮಾವು ಮಾದಲಕ್ಕೆ ಹುಳಿ ನೀರೆನೆರದವರಾರಯ್ಯಾ ಕಬ್ಬು ಬಾಳೆ ಹಲಸು ನಾರಿವಾಳಕ್ಕೆ ಸಿಹಿ ನೀರನೆರೆದವರಾರಯ್ಯಾ! ಕಳವೆ ಶಾಲಿಗೆ ಓಗರದ ಉದಕವನೆರವವರಾರಯ್ಯಾ! ಮರುಗ ಮಲ್ಲಿಗೆ ಪಚ್ಚೆಗೆ ಪರಿಮಳದುದಕವನೆರೆದವರಾರಯ್ಯಾ! ಇಂತೀ ಜಲವು ಒಂದೇ, ನೆಲವು ಒಂದೇ, ಆಕಾಶವು ಒಂದೇ. ಒಂದೇ ಜಲವು ಹಲವು ದ್ರವ್ಯಂಗಳ ಕೂಡಿ ತನ್ನ ಪರಿ ಬೇರಾದ ಹಾಗೆ, ಎನ್ನ ದೇವ ಚೆನ್ನಮಲ್ಲಿಕಾರ್ಜುನಯ್ಯನು ಹಲವು ಜಗಂಗಳ ಕೂಡಿ ಕೊಂಡಿರ್ದರೇನು, ತನ್ನ ಪರಿ ಬೇರೆ.

೬. ಶಿವಲೋಕಕ್ಕೆ ಸರಿ ಬೇರೆ ಲೋಕವಿಲ್ಲ. ಶಿವಮಂತ್ರಕ್ಕೆ ಸರಿ ಬೇರೆ ಮಂತ್ರವಿಲ್ಲ. ಜಗಕ್ಕೆ ಇಕ್ಕಿದೆ ಮುಂಡಿಗೆಯನೆತ್ತಿಕೊಳ್ಳಿ ಕೂಡಲ ಸಂಗಯ್ಯನೊಬ್ಬನೇ ದೈವವೆಂದು.

೭. ಎನ್ನ ನಾನರಿಯದಂದು ಮುನ್ನ ನೀನೆಲ್ಲಿರ್ದೆ ಹೇಳಯ್ಯ! ಚಿನ್ನದೊಳಗಣ ಬಣ್ಣದಂತೆ ಎನ್ನೊಳಗಿರ್ದೆಯಯ್ಯ! ಎನ್ನೊಳಗೆ ಇರ್ದು ಮೈದೋರದ ಭೇದವ ನಿಮ್ಮಲ್ಲಿ ಕಂಡೆನು ಕಾಣಾ ಚೆನ್ನಮಲ್ಲಿಕಾರ್ಜುನಾ.

೮. ಹಾಲು ತುಪ್ಪವ ನುಂಗಿ ಬೇರಾಗಬಲ್ಲುದೆ? ಸೂರ್ಯಕಾಂತಿಯಲ್ಲಿದ್ದಗ್ನಿಯನಾರು ಭೇದಿಸಬಲ್ಲರು? ಅಪಾರ ಮಹಿಮ ಚೆನ್ನಮಲ್ಲಿಕಾರ್ಜುನ, ನೀನೆನ್ನೊಳಡಗಿರ್ದ ಪರಿಯ ಬೇರಿಲ್ಲದೆ ಕಂಡು ಕಣ್ದೆರೆದೆನು.

೯. ಉದಕದೊಳಗೆ ಬೈಚಿಟ್ಟ ಬಯಕೆಯ ಕಿಚ್ಚಿನಂತಿದ್ದಿತ್ತು. ಶಶಿಯೊಳಗಣ ರಸದ ರುಚಿಯಂತೆ ಇದ್ದಿತ್ತು. ನನೆಯೊಳಗಣ ಪರಿಮಳದಂತೆ ಇದ್ದಿತ್ತು. ಕೂಡಲ ಸಂಗಮ ದೇವರ ನಿಲವು ಕನ್ನೆಯ ಸ್ನೇಹದಂತಿದ್ದಿತ್ತು.

೧೦. ನೆಲದ ಮರೆಯ ನಿಧಾನದಂತೆ, ಫಲದ ಮರೆಯ ರುಚಿಯಂತೆ, ಶಿಲೆಯ ಮರೆಯ ಹೇಮದಂತೆ, ತಿಲದ ಮರೆಯ ತೈಲದಂತೆ, ಭಾವದ ಮರೆಯ ಬ್ರಹ್ಮವಾಗಿಪ್ಪ ಚೆನ್ನಮಲ್ಲಿಕಾರ್ಜುನನ ನಿಲವನಾರು ಅರಿಯಬಾರದು.

೧೧. ಮನದಲ್ಲಿ ಭೇದ, ವಸ್ತುವಿನಲ್ಲಿ ಭೇದವಿಲ್ಲವಯ್ಯ. ಕ್ರಿಯೆ ಕ್ರಿಯೆಯಲ್ಲಿ ಭೇದವಲ್ಲದೆ ಜ್ಞಾನದಲ್ಲಿ ಭೇದವಿಲ್ಲವಯ್ಯ. ರೂಪ ರೂಪದಲ್ಲಿ ಭೇದವಲ್ಲದೆ ಚೈತನ್ಯವಲ್ಲಿ ಭೇದವಿಲ್ಲ ನೋಡಾ ಕಪಿಲಸಿದ್ಧ ಮಲ್ಲಿಕಾರ್ಜುನಾ.

೧೨. ಒಂದೇ ವಸ್ತು ತನ್ನ ವಿಚಿತ್ರ ಮಹಿಮೆಯ ಕೇಳುವಲ್ಲಿ ಕರ್ಣವಾಗಿ, ನೋಡುವಲ್ಲಿ ನೇತ್ರವಾಗಿ, ರುಚಿಸುವಲ್ಲಿ ರಸನೆಯಾಗಿ, ಪರಿಮಳಿಸುವಲ್ಲಿ ಘ್ರಾಣವಾಗಿ, ಸ್ಪರ್ಶಿಸುವಲ್ಲಿ ತ್ವಕ್ಕಾಗಿ, ನಿಂದೆ ನೀ ನೋಡಯ್ಯ, ಕಪಿಲ ಸಿದ್ಧ ಮಲ್ಲಿಕಾರ್ಜುನಾ.

೧೩. ಬೆಳಗಿನೊಳಗೆ ಮಹಾ ಬೆಳಗು. ಶಿವಶಿವ ಪರಮಾಶ್ರಯವೇ ತಾನಾಗಿ ಶತಪತ್ರ ಕಮಲ ಕರ್ಣಿಕಾಮಧ್ಯದಲ್ಲಿ ಸ್ವತಃ ಸಿದ್ಧನಾಗಿಪ್ಪ ನಮ್ಮ ಕೂಡಲ ಸಂಗಮ ದೇವ.

೧೪. ನೆಲನೊಂದೇ ಹೊಲಗೇರಿ ಶಿವಾಲಯಕ್ಕೆ. ಜಲವೊಂದೇ ಶೌಚಾಚಮನಕ್ಕೆ. ಕುಲವೊಂದೇ ತನ್ನ ತಾನರಿದಂಗೆ. ಫಲವೊಂದೇ ಷಡುದರ್ಶನ ಮುಕ್ತಿಗೆ. ನಿಲವು ಒಂದೇ ಕೂಡಲ ಸಂಗಮ ದೇವಾ ನಿಮ್ಮನರಿದಂಗೆ.

೧೫. ಉಪದೇಶ ಮಾಡಿದಲ್ಲಿ ಗುರುವೆನಿಸಿದನು. ಕಾಮಿತಫಲಂಗಳ ಕೊಟ್ಟಲ್ಲಿ ಲಿಂಗಮೂರ್ತಿ ಎನಿಸಿದನು. ನಿತ್ಯ ನಿರ್ವಾಣದ ಸಕೀಲವ ತೋರಿದಲ್ಲಿ ಜಂಗಮವೆನಿಸಿದನಯ್ಯ, ಕಪಿಲ· ಸಿದ್ಧ ಮಲ್ಲಿಕಾರ್ಜುನ.

೧೬. ಎತ್ತಣ ಮಾಮರ ಎತ್ತಣ ಕೋಗಿಲೆ? ಎತ್ತಣಿಂದೆತ್ತ ಸಂಬಂಧವಯ್ಯಾ! ಬೆಟ್ಟದ ನೆಲ್ಲಿಕಾಯಿ ಸಮುದ್ರದೊಳಗಣ ಉಪ್ಪು ಎತ್ತಣಿಂದೆತ್ತ ಸಂಬಂಧ! ಗುಹೇಶ್ವರ ಲಿಂಗಕ್ಕೆಯೂ ಎನಗೆಯೂ ಎತ್ತಣಿಂದೆತ್ತ ಸಂಬಂಧವಯ್ಯಾ!

೧೭. ಮಾಯೆಯ ಬಲೆಯಲ್ಲಿ ಸಿಲುಕಿದ ಮರುಳ ನಾನೆಂದರಿದ ಪರಿಯ ನೋಡಾ. ಲಿಂಗವೆಂದರಿದ ಪರಿಯ ನೋಡಾ. ತನ್ನ ವಿನೋದಕ್ಕೆ ಬಂದು ನಿಶ್ಚಿಂತ ನಿರಾಳ ಗುಹೇಶ್ವರನೆಂದರಿದ ಪರಿಯ ನೋಡಾ.

೧೮. ಊರೊಳಗಣ ಬಯಲು, ಊರ ಹೊರಗಣ ಬಯಲು ಎಂದುಂಟೇ? ಊರೊಳಗಣ ಬ್ರಾಹ್ಮಣಬಯಲು, ಊರ ಹೊರಗೆ ಹೊಲೆಬಯಲು ಎಂದುಂಟೇ? ಎಲ್ಲಿ ನೋಡಿದಡೆ ಬಯಲೊಂದೆ. ಭಿತ್ತಿಯಿಂದ ಒಳ ಹೊರಗೆಂಬ ನಾಮವೈಸೆ. ಎಲ್ಲಿ ನೋಡಿದಡೆ, ಕರೆದಡೆ, ‘ಓ’ ಎಂಬಾತನೇ ಬಿಡಾಡಿ.

೧೯. ಎನಗೊಂದು ಲಿಂಗ, ನಿನಗೊಂದು ಲಿಂಗ, ಮನೆಗೊಂದು ಲಿಂಗವಾಯಿತ್ತು. ಹೋಯಿತ್ತಲ್ಲಾ ಭಕ್ತಿ ಜಲವ ಕೂಡಿ. ಉಳಿ ಮುಟ್ಟದ ಲಿಂಗವ ಮನ ಮುಟ್ಟಬಲ್ಲುದೇ ಗುಹೇಶ್ವರಾ?

೨೦. ಅಡವಿಯೊಳಗರಸುವಡೆ ಸಿಡಿಗಂಟೆ ತಾನಲ್ಲ. ಮಡುವಿನೊಳಗರಸುವಡೆ ಮತ್ಸ್ಯ ಮಂಡೂಕನಲ್ಲ. ಒಡಲ ದಂಡಿಸುವಡೆ ಕೊಡುವ ಸಾಲಿಗನಲ್ಲ ಅಷ್ಟತನುವಿನೊಳಗೆ ಹುದುಗಿರ್ಪ ಲಿಂಗವ ನಿಲುಕಿ ನೋಡಿಯೇ ಕಂಡನಂಬಿಗರ ಚೌಡಯ್ಯ.

೨೧. ಓದಿ ಬೋಧಿಸಿ ಇದಿರಿಂಗೆ ಹೇಳುವನ್ನಬರ ಚದುರತೆಯಲ್ಲವೇ? ತಾ ತನ್ನನರಿದಲ್ಲಿ ಅರಿಕೆ, ಇದಿರಿಗೆ ತೋರಿದಲ್ಲಿ ಅದೇ ದೇವತ್ವವೆಂದನಂಬಿಗರ ಚೌಡಯ್ಯ.

## (ii) ಮೊರೆ

೨೨. ಒಲೆ ಹತ್ತಿ ಉರಿದಡೆ ನಿಲ್ಲಬಹುದಲ್ಲದೆ, ಧರೆ ಹತ್ತಿ ಉರಿದಡೆ ನಿಲ್ಲಬಹುದೆ? ಏರಿ ನೀರುಂಬಡೆ, ಬೇಲಿ ಕೆಯಿ ಮೇವಡೆ, ನಾರಿ ತನ್ನ ಮನೆಯಲ್ಲಿ ಕಳುವಡೆ, ತಾಯಮೊಲೆವಾಲು ನಂಜಾಗಿ ಕೊಲುವಡೆ, ಇನ್ನಾರಿಗೆ ದೂರುವೆ ಕೂಡಲ ಸಂಗಮ ದೇವಾ.

೨೩. ತುಪ್ಪದ ಸವಿಗೆ ಅಲಗ ನೆಕ್ಕುವ ಸೊಣಗನಂತೆ ಎನ್ನ ಬಾಳುವೆ. ಸಂಸಾರ ಸಂಗವ ಬಿಡದು ನೋಡೆನ್ನ ಮನವು. ಈ ನಾಯಿತನವ ಮಾಣಿಸು ಕೂಡಲ ಸಂಗಮ ದೇವ ನಿಮ್ಮ ಧರ್ಮ.

೨೪. ಅಡವಿಯೊಳಗೆ ಹೊಲಬುಗೆಟ್ಟ ಪಶುವಿನಂತೆ ಅಂಬಾ, ಅಂಬಾ, ಎಂದು ಕರೆವುತ್ತಲಿದ್ದೇನೆ; ಅಂಬಾ, ಅಂಬಾ, ಎಂದು ಒರಲುತ್ತಲಿದ್ದೇನೆ, ಕೂಡಲ ಸಂಗಮ ದೇವ ಬಾಳು ಬಾಳೆಂಬನ್ನಕ್ಕ.

೨೫. ನೀನು ಹುಟ್ಟಿಸಿದಲ್ಲಿ ಹುಟ್ಟಿ, ನೀ ಕೊಂದಲ್ಲಿ ಸಾಯದೆ ಎನ್ನ ವಶವೇ ಅಯ್ಯಾ! ಆಕಟಕಟಾ, ಎನ್ನವನೆನ್ನವನೆನ್ನಯ್ಯಾ ಕೂಡಲ ಸಂಗಮದೇವಾ.

೨೬. ನರವಿಂಧ್ಯದೊಳಗೆನ್ನ ಹುಲುಗಿಳಿಯಮಾಡಿ ಸಲಹುತ್ತ "ಶಿವಾ" ಎಂದೋದಿಸಯ್ಯ. ಭಕ್ತಿ ಎಂಬ ಪಂಜರದೊಳಗಿಕ್ಕಿ ಸಲಹು ಕೂಡಲ ಸಂಗಮ ದೇವಾ.

೨೭. ಸಟೆಯಿಲ್ಲದಂತೆ, ಪ್ರಪಂಚವಿಲ್ಲದಂತೆ, ವೈಶಿಕವಿಲ್ಲದಂತೆ, ನಡಸಯ್ಯಾ ಲಿಂಗ ತಂಡೆ. ಒಂದು ನಿಮಿಷವಾದರೆಯೂ ನಿಮ್ಮ ಶರಣರ ಸಂಗದಲ್ಲಿರಿಸಯ್ಯಾ. ಬೇರೆ ಮತ್ತೆ ಅನ್ಯವ ತೋರದಿರಯ್ಯಾ! ಹೊಲಬುಗೆಟ್ಟೆನಯ್ಯಾ ಕೂಡಲ ಸಂಗಮ ದೇವ.

೨೮. ಎನಿಸು ಕಾಲ ಕಲ್ಲು ನೀರೊಳಗಿದ್ದರೇನು, ನೆನೆದು ಮೃದುವಾಗ ಬಲ್ಲುದೇ? ಎನಿಸು ಕಾಲ ನಿಮ್ಮ ಪೂಜಿಸಿ ಏವೆನಯ್ಯಾ ಮನದಲ್ಲಿ ದೃಢವಿಲ್ಲದನ್ನಕ್ಕ? ನಿಧಾನವ ಕಾಯ್ದಿದ್ದ ಬೆಂತರನಂತೆ. ಆವರ ವಿಧಿ ಎನಗಾಯಿತ್ತು ಕೂಡಲ ಸಂಗಮ ದೇವಾ.

೨೯. ಕರಗಿಸಿ ಎನ್ನ ಮನದ ಕಾಳಿಕೆಯ ಕಳೆಯಯ್ಯಾ! ಒರೆಗೆ ಬಣ್ಣಕ್ಕೆ ತಂದೆನ್ನ ಪುಟವಿಕ್ಕಿ ನೋಡಯ್ಯಾ! ಕಡಿಹಕ್ಕೆ ಬಡಿಹಕ್ಕೆ ತಂದೆನ್ನ ಕಡಿಯಾಣಿಯ ಮಾಡಿ ನಿಮ್ಮ ಶರಣರ ಪಾದಕ್ಕೆ ತೊಡಿಗೆಯ ಮಾಡಿ ಸಲಹು ಕೂಡಲ ಸಂಗಮ ದೇವಾ.

೩೦. ಕುಧರವನೇಸು ತೊಳೆದರೆಯೂ ಕೆಸರು ಮಾಬುದೆ? ಎನ್ನ ಕಾಯದಲುಳ್ಳ ಅವಗುಣಂಗಳ ಕಳೆದು ಕೃಪೆಯ ಮಾಡಯ್ಯ! ಕಂಬಳಿಯಲ್ಲಿ ಕಣಕವ ನಾದಿದಂತೆ ಕಾಣಿರೆ ಎನ್ನ ಮನ. ಕೂಡಲ ಸಂಗಮದೇವ, ನಿಮಗೆ ಶರಣೆಂದು ಶುದ್ಧ ಕಾಣಯ್ಯ.

೩೧. ಅರಸಿನವನೆ ಮಿಂದು ಹೊಂದೊಡಿಗೆಯನೆ ತೊಟ್ಟು ಪುರುಷನ ಒಲವಿಲ್ಲದ ಲಲನೆಯಂತೆ ಆಗಿದ್ದೆನಯ್ಯಾ! ವಿಭೂತಿಯನೆ ಹೂಸಿ ರುದ್ರಾಕ್ಷಿಯನೆ ಕಟ್ಟಿ, ಶಿವ, ನಿಮ್ಮ ಒಲವಿಲ್ಲದಂತೆ ಆಗಿದ್ದೆನಯ್ಯಾ! ಕೆಟ್ಟು ಬಾಳುವರಿಲ್ಲ ಎಮ್ಮವರ ಕುಲದಲ್ಲಿ. ನೀನೊಲಿದಂತೆ ಸಲಹಯ್ಯ ಕೂಡಲ ಸಂಗಮ ದೇವಾ.

೩೨. ಬೆಲ್ಲವ ತಿಂದ ಕೋಡಗನಂತೆ ಸಿಹಿಯ ನೆನೆಯದಿರಾ ಮನವೇ. ಕಬ್ಬು ತಿಂದ ನರಿಯಂತೆ ಹಿಂದಕ್ಕೆಳಸದಿರಾ ಮನವೇ. ಗಗನವ ನಡರಿದ ಕಾಗೆಯಂತೆ ದೆಸೆದೆಸೆಗೆ ಹಂಬಲಿಸದಿರಾ ಮನವೇ. ಕೂಡಲ ಸಂಗನ ಶರಣರ ಕಂಡು ಲಿಂಗವೆಂದು ನಂಬು ಮನವೇ.

೩೩. ಲೋಕೋಪಚಾರಕ್ಕೆ ಮಜ್ಜನಕ್ಕೆರೆವೆನಯ್ಯಾ! ಮನದ ತಾಮಸ ಬಿಡದು, ಮನದ ಕಪಟ ಬಿಡದು. 'ಶಿವ ಶರಣು' ಎಂಬುದು ಅಳವಡದಯ್ಯಾ! ಎನ್ನ ಮನದಲ್ಲಿ ಎರಡುಳ್ಳನ್ನಕ್ಕ ಕೂಡಲ ಸಂಗಮ ದೇವನೊಂತೊಲಿವ ?

೩೪. ಕಾಣಿಯ ಲೋಭ ಕೋಟಿಯ ಲಾಭವ ಕೆಡಸಿದುದ ನಾನರಿಯೆನಯ್ಯಾ! ಭಕ್ತಿಯ ಕುಳವ ನರಿಯದೆ ಮತಿಗೆಟ್ಟ ಪರಿಯ ನಾನರಿಯೆನಯ್ಯಾ! ಕೂಡಲ ಸಂಗನ ಶರಣರ ಸಂಗದಿಂದರಿದರೆ ನಾನು ಬದುಕುವೆನಯ್ಯಾ.

೩೫. ಹೇಡಿ ಬಿರುದ ಕಟ್ಟದಂತಾಯಿತ್ತೆನ್ನ ವೇಷ. ಕಾದಬೇಕು, ಕಾದುವಠೆ ಮನವಿಲ್ಲ. ಆಗಳೇ ಹೋಯಿತ್ತು ಬಿರುದು. ಹಗರಣ ನಗೆಗೆಡೆಯಾಯಿತ್ತು. ಮಾರಾಂತಕ ಜಂಗಮ ಮನೆಗೆ ಬಂದರೆ ಕಾಣದಂತಡ್ಡ ಮುಸುಡಿಟ್ಟರೆ ಕೂಡಲ ಸಂಗಮ ದೇವ ಜಾಣ ಮೂಗುಕೊಯ್ವ ಹಲ್ಲುದೋರಿ.

೩೬. ಹೊರಿಸಿಕೊಂಡು ಹೋದ ನಾಯಿ ಮೊಲನೇನ ಹಿಡಿವುದಯ್ಯಾ? ಇರಿಯದ ವೀರ ಇಲ್ಲದ ಸೊಬಗುವ ಹೇಳುವುದೇ ನಾಚಿಕೆ. ಆನು ಭಕ್ತನೆಂತೆಂಬೆನಯ್ಯ ಕೂಡಲ ಸಂಗಮ ದೇವಾ.

೩೭. ತತ್ತ್ವವನರಿದಿಹೆನೆಂದು ಮೃತ್ಯುವ ಕರೆಕೊಂಡೆನಯ್ಯಾ. ನಾನೆತ್ತ ಬಲ್ಲೆ ನಿಮ್ಮ ಶರಣರಂತುವನು? ನಾನೆತ್ತ ಬಲ್ಲೆ ನಿಮ್ಮ ಪ್ರಮಥರಂತುವನು? ಸರ್ವಾಪರಾಧಿಯಾನು ಎನ್ನ ಮನದ ಕೊನೆಯ ಸೂತಕ ಹಿಂಗದು ಕೂಡಲ ಸಂಗಮ ದೇವಾ.

೩೮. ಚಕೋರಂಗೆ ಚಂದ್ರಮನ ಬೆಳಗಿನ ಚಿಂತೆ. ಅಂಬುಜಕ್ಕೆ ಭಾನುವಿನ ಉದಯದ ಚಿಂತೆ. ಭ್ರಮರಂಗೆ ಪರಿಮಳದ ಬಂಡುಂಬ ಚಿಂತೆ. ಎನಗೆ ನಮ್ಮ ಕೂಡಲ ಸಂಗಮ ದೇವರ ಚಿಂತೆ.

೩೯. ಹೊಲಬುಗೆಟ್ಟ ಶಿಶು ತನ್ನ ತಾಯನರಸುವಂತೆ, ಬಳಿದಪ್ಪಿದ ಪಶು ತನ್ನ ಹಿಂಡನರಸುವಂತೆ, ಬಯಸುತ್ತಿರ್ದೆನಯ್ಯಾ ನಿಮ್ಮ ಶರಣರ ಬರವನು. ಬಯಸುತ್ತಿರ್ದೆನಯ್ಯಾ ನಿಮ್ಮ ಭಕ್ತರ ಬರವನು. ದಿನಕರನುದಯಕ್ಕೆ ಕಮಳ ವಿಕಸಿತವಾದಂತೆ ಎನಗೆ ನಿಮ್ಮ ಶರಣರ ಬರವು ಕೂಡಲ ಸಂಗಮ ದೇವಾ.

೪೦. ಸೂರ್ಯನುದಯ ತಾವರೆಗೆ ಜೀವಾಳ. ಚಂದ್ರಮನುದಯ ನೈದಿಲೆಗೆ ಜೀವಾಳ. ಕೂಪರ ತಾವಿನಲ್ಲಿ ಕೂಟ ಜೀವಾಳವಯ್ಯಾ. ಒಲಿದ ತಾವಿನಲ್ಲಿ ನೋಟ ಜೀವಾಳವಯ್ಯ. ಕೂಡಲ ಸಂಗನ ಶರಣರ ಬರವೆನಗೆ ಪ್ರಾಣ ಜೀವಾಳವಯ್ಯ.

೪೧. ಎಳ್ಳಿಲ್ಲದ ಗಾಣವನಾಡಿದ ಎತ್ತಿನಂತಾಯಿತ್ತೆನ್ನ ಭಕ್ತಿ. ಉಪ್ಪು ಅಪ್ಪುವಿನಲ್ಲಿ ಅದ್ದಿ ಮೆಲಿದಂತಾಯಿತ್ತೆನ್ನಭಕ್ತಿ. ಕೂಡಲ ಸಂಗಮ ದೇವಾ ಆನು ಮಾಡಿದೆನೆಂಬ ಕಿಚ್ಚು ಸಾಲದೇ?

೪೨. ಎನ್ನ ಆಪತ್ತು ಸುಖದುಃಖವನಿನ್ನಾರಿಗೆ ಹೇಳುವೆ? ಶರಣ ಸ್ಥಲದವರಿಗೆ ಹೇಳಿದರೆ ಮಚ್ಚರ. ಸವತಿ ಸಕ್ಕರೆ ಬೇವು ಬೆಲ್ಲ ಉಂಟೆ? ಇನ್ನಾರಿಗೆ ಹೇಳುವೆ? ಕೂಡಲ ಸಂಗಮ ದೇವಾ ಜಂಗಮವಾಗಿ ಬಂದು ಎನ್ನ ಮನದ ಸೂತಕವ ಕಳೆಯಾ!

೪೩. ಆತ್ಮಸ್ತುತಿ ಪರನಿಂದೆಯ ಕೇಳಿಸದಿರಯ್ಯ ನಿಮ್ಮ ಧರ್ಮ, ಆನು ಭಕ್ತ, ಎನ್ನಲ್ಲಿ ಲೇಸುಂಟೆಂದು ಪರಿಣಾಮಿಸಿದರೆ, ನಿಮಗಾನು ದ್ರೋಹಿಯಯ್ಯ. ಕೂಡಲ ಸಂಗಮ ದೇವಾ, ನಿಮ್ಮ ಶರಣರ ಲೇಸೇ ಎನ್ನ ಲೇಸಯ್ಯ.

೪೪. ಕೂಪರಿಗೆ ಹೇಳುವೆನು ಕುಲಸ್ಥಲಂಗಳಿಲ್ಲವನು. ಕೂರದರಿಗೆ ಹೇಳಿ ನಾನೇವೆನು ಶಿವನೇ ? ಕರಲ ಭೂಮಿಯಲ್ಲಿ ಕರೆದ ವೃಷ್ಟಿಯ ತೆರನಂತೆ. ಅವರೆತ್ತ ಬಲ್ಲರೆನ್ನ ಸುಖ ದುಃಖವ ? ಅಂಗವಿಲ್ಲದ ಸಂಗ ಆಳಲಿಲ್ಲದ ಹುಯ್ಯಲಂತೆ. ಇದು ಕಾರಣ ಕೂಡಲ ಸಂಗಮ ದೇವಾ ನಿಮ್ಮ ಶರಣರಿಗಲ್ಲದೆ ಬಾಯ ತೆರೆಯನು.

೪೫. ಒಡೆದೋಡು ಎನ್ನ ಮನೆಯಲ್ಲಿಲ್ಲದಂತೆ ಮಾಡಯ್ಯ! ಕೊಡು ದೇವಾ ಎನ್ನ ಕಯ್ಯಲೊಂದು ಕರಿಕೆಯನು. ಮೃಡದೇವ ಶರಣೆಂದು ಭಿಕ್ಷಕ್ಕೆ ಹೋದರೆ, ಅಲ್ಲಿ ನಡೆ ದೇವ ಎಂದೆನಿಸೋ ಕೂಡಲ ಸಂಗಮ ದೇವಾ.

೪೬. ನಾ ನಿಮ್ಮ ನೆನೆವೆನು, ನೀವೆನ್ನನರಿಯಿರಿ. ನಾ ನಿಮ್ಮನೋಲೈಸು ವೆನು, ನೀವೆನ್ನ ಕಾಣಿರಿ. ನಾನೆಂತು ಬದುಕುವೆನು? ಎಂತು ಜೀವಿಸುವೆನಯಾ ? ಕೂಡಲ ಸಂಗಮ ದೇವಾ ಎನಗೆ ನೀವೆ ಪ್ರಾಣ ಗತಿ ಮತಿ ನೋಡಯ್ಯ.

೪೭. ವಚನದಲ್ಲಿ ನಾಮಾಮೃತ ತುಂಬಿ, ನಯನದಲ್ಲಿ ನಿಮ್ಮ ಮೂರುತಿ ತುಂಬಿ, ಮನದಲ್ಲಿ ನಿಮ್ಮ ನೆನಹು ತುಂಬಿ, ಕಿವಿಯಲ್ಲಿ ನಿಮ್ಮ ಕೀರ್ತಿ ತುಂಬಿ, ಕೂಡಲ ಸಂಗಮ ದೇವಾ ನಿಮ್ಮ ಚರಣ ಕಮಲ ದೊಳಗಾನು ತುಂಬಿ.

೪೮. ಎನಗೆ ನಿಮ್ಮ ನೆನಹಾದಾಗವೇ ಉದಯ. ಎನಗೆ ನಿಮ್ಮ ಮರಹಾದಾಗವೇ ಅಸ್ತಮಾನ. ಎನಗೆ ನಿಮ್ಮ ನೆನಹವೇ ಜೀವನ. ಎನಗೆ ನಿಮ್ಮ ನೆನಹವೇ ಪ್ರಾಣ ಕಾಣಾ ತಂದೆ, ಸ್ವಾಮಿ! ಎನ್ನ ಹೃದಯದಲ್ಲಿ ನಿಮ್ಮ ಚರಣದುಂಡಿಗೆಯನೊತ್ತಯ್ಯ! ವದನದಲ್ಲಿ ಷಡಕ್ಷರಿಯ ಬರೆಯಯ್ಯಾ ಕೂಡಲ ಸಂಗಮ ದೇವಾ.

೪೯. ದೇವರ ದೇವ ನೀನೆಂದೆನಿಸಿಕೊಂಡೆ. ಬಾಣನ ಬಾಗಿಲ ಕಾಯ್ವುದೇನಯ್ಯ? ನಿತ್ಯತೃಪ್ತ ನೀನೆನಿಸಿಕೊಂಡೆ. ಚೆನ್ನನ ಮನೆಯ ಲುಂಬುದೇನಯ್ಯಾ? ಕರುಣಾಕರ ನೀನೆನಿಸಿಕೊಂಡೆ. ಸಿರಿಯಾಳನ ಮಗನ ಬೇಡುವರೇನಯ್ಯ? ನಿಮ್ಮ ಮಹಿಮೆಯ ನೀವೇ ಬಲ್ಲಿರಿ ಎನ್ನನುದ್ಧರಿಸಯ್ಯಾ ಶಂಭು ಜಕ್ಕೇಶ್ವರಾ.

೫೦. ಮನವೆಂಬ ಮರ್ಕಟನು ತನುವೆಂಬ ವೃಕ್ಷವನೇರಿ, ಇಂದ್ರಿಯಂಗಳೆಂಬ ಶಾಖೆ ಶಾಖೆಗೆ ಹಾರಿ, ವಿಷಯಗಳೆಂಬ ಹಣ್ಣು ಫಲಂಗಳ ಗ್ರಹಿಸಿ, ಭವದತ್ತ ಮುಖವಾಗಿ ಹೋಗುತ್ತಿದೆ ನೋಡಾ. ಈ ಮನವೆಂಬ ಮರ್ಕಟನ ನಿಮ್ಮ ನೆನನೆಂಬ ಪಾಶದಲ್ಲಿ ಕಟ್ಟಿ ಎನ್ನನುಳಿಹಿಕೊಳ್ಳಾ ಅಖಂಡೇಶ್ವರಾ.

೫೧. ಅಯ್ಯಾ ನೀನೇಕೆ ಬರಲೊಲ್ಲೆ ಹೇಳಯ್ಯ? ನೀ ಬಾರದಿರಲಾನು ಕಲ್ಲು ಮರನಾಗಿಹೆನಯ್ಯ. ಕಪಿಲ ಸಿದ್ಧ ಮಲ್ಲಿನಾಥಯ್ಯ, ನೀ ಬಾರಯ್ಯ ನಿಮ್ಮ ಧರ್ಮ ಹೇಳಯ್ಯಾ.

೫೨. ಅಯ್ಯಾ, ನಿಮ್ಮ ವಿಕಳದಲ್ಲಿ ನೆನೆವುತ್ತ ಗಾಳಿಯ ಸರವೇ ನೀವೆಂದು ಬಗೆದೆ ಕಂಡಯ್ಯ. ಕಪಿಲ ಸಿದ್ಧ ಮಲ್ಲಿನಾಥಯ್ಯ, ನಿಮ್ಮ ವಿಕಳದಲ್ಲಿ ಮಹಾ ಭ್ರಾಂತಳಾಗಿಹೆನಯ್ಯಾ.

೫೩. ಪುಣ್ಯ ಪಾಪಂಗಳನರಿಯದ ಮುನ್ನ ಅನೇಕ ಭವಂಗಳಲ್ಲಿ ಬಂದು ನಿಮ್ಮ ನಿಲವನರಿಯದೆ ಕೆಟ್ಟೆನಯ್ಯ. ಇನ್ನು ನಿಮ್ಮ ಶರಣು ಪೊಕ್ಕೆನಾಗಿ ನಾ ನಿಮ್ಮವನೆಂದು ಅಗಲದಂತೆ ಮಾಡಾ ಅಯ್ಯಾ, ನಿಮ್ಮ ಧರ್ಮ, ನಿಮ್ಮ ಧರ್ಮ. ನಿಮ್ಮಲ್ಲಿ ಒಂದು ಬೇಡುವೆ. ಎನ್ನ ಕರ್ಮದ ಬಂಧನ ಬಿಡುವಂತೆ ಮಾಡಾ ಅಯ್ಯಾ ಕಪಿಲ ಸಿದ್ಧ ಮಲ್ಲಿಕಾರ್ಜುನಾ.

೫೪. ಬಂಜೆ ಬೇನೆಯನರಿಯಳು, ಬಲದಾಯಿ ಮುದ್ದು ಬಲ್ಲಳೆ? ನೊಂದ ನೋವ ನೋಯದವರೆತ್ತ ಬಲ್ಲರು? ಚೆನ್ನಮಲ್ಲಿಕಾರ್ಜುನ ಸಿರಿದಲಗು ಒಡಲಲ್ಲಿ ಮುರಿದು ಹೊರಳುವಳ ನೀವೆತ್ತ ಬಲ್ಲಿರೆ ಎಲೆ ತಾಯಿಗಳಿರಾ.

೫೫. ಅರಸಿನವನೇ ಮಿಂದು, ಹೊಂಡುಡಿಗೆಯನೆ ತೊಟ್ಟು, ದೇವಾಂಗ ವನುಟ್ಟು, ಪುರುಷ ಬಾರಾ! ನಿನ್ನ ಬರವೆನ್ನಸುವಿನ ಬರವು ಬಾರಯ್ಯ! ಚೆನ್ನಮಲ್ಲಿಕಾರ್ಜುನಯ್ಯ · ಬಂದಾನೆಂದು ಬಟ್ಟೆಗಳ ನೋಡಿ ಬಾಯಾರುತಿಹೆನು.

೫೬. ಕಲ್ಲು ಹೊಕ್ಕರೆ ಕಲ್ಲ ಬರಿಸಿದೆ, ಗಿರಿಯ ಹೊಕ್ಕರೆ ಗಿರಿಯ ಬರಿಸಿದೆ. ಭಾಪು ಸಂಸಾರವೆ! ಬೆನ್ನಿಂದ ಬೆನ್ನ ಹತ್ತಿ ಬಂದೆ. ಚೆನ್ನಮಲ್ಲಿಕಾರ್ಜುನಯ್ಯ ಇನ್ನೇವೆನಿನ್ನೇವೆ?

೫೭. ಅಕ್ಕ ಕೇಳವ್ವ, ಅಕ್ಕಯ್ಯ, ನಾನೊಂದು ಕನಸು ಕಂಡೆ. ಅಕ್ಕಿಯಡಕೆ ತೆಂಗಿನಕಾಯಿ, ಚಿಕ್ಕ ಚಿಕ್ಕ ಜಡೆಗಳ ಸುಲಿಪಲ್ಲ ಗೊರವ ಭಿಕ್ಷಕ್ಕೆ ಬಂದುದ ಕಂಡೆನವ್ವ. ಮಿಕ್ಕು ಮೀರಿ ಹೋಹನ ಬೆಂಬತ್ತಿ ಕೈವಿಡಿದೆನು. ಚೆನ್ನಮಲ್ಲಿಕಾರ್ಜುನನ ಕಂಡು ಕಣ್ದೆರೆದೆನು.

೫೮. ಒಳಗೆ ಶೋಧಿಸಿ, ಹೊರಗಳವಡಿಸಿ, ಭಾವದಿಂದ ಗುಡಿ ತೋರಣವ ಕಟ್ಟುವೆನಯ್ಯ. ಎನ್ನ ಲಿಂಗವೇ ಬಾರಯ್ಯ! ಎನ್ನ ದೇವ ಬಾರಯ್ಯ! ಎನ್ನಂತರಂಗದ ಪರಂಜ್ಯೋತಿರ್ಲಿಂಗವನಿದಿರು ಗೊಂಬೆನು, ಬಾರಯ್ಯ! ಮಹಾಲಿಂಗ ಕಲ್ಲೇಶ್ವರಾ, ನಿಮ್ಮ ಧರ್ಮ ಬಾರಯ್ಯ!

## (iii) ಭಕ್ತಿ, ನಿಷ್ಠೆ

೫೯. ಗಂಡನ ಮೇಲೆ ಸ್ನೇಹವಿಲ್ಲದ ಹೆಂಡತಿ, ಲಿಂಗದ ಮೇಲೆ ನಿಷ್ಠೆ ಯಿಲ್ಲದ ಭಕ್ತ, ಇದ್ದರೇನೋ ಶಿವ ಶಿವಾ! ಹೋದರೇನೋ ಶಿವ ಶಿವಾ! ಕೂಡಲ ಸಂಗಮ ದೇವಯ್ಯ ಊಡದ ಆವಿಂಗೆ ಉಣ್ಣದ ಕರುವ ಬಿಟ್ಟಂತೆ.

೬೦. ಅಳೆವುತ್ತಳೆವುತ್ತ ಬಳಲುವರಲ್ಲದೆ ಕೊಳಗ ಬಳಲುವುದೆ? ನಡೆವುತ್ತ ನಡೆವುತ್ತ ಬಳಲುವರಲ್ಲದೆ, ಬಟ್ಟೆ ಬಳಲುವುದೆ? ಶ್ರಮವ ಮಾಡುತ್ತ ಮಾಡುತ್ತ ಬಳಲುವರಲ್ಲದೆ, ಕೋಲು ಬಳಲುವುದೆ? ನಿಜವನರಿಯದ ಭಕ್ತ ಬಳಲುವನಲ್ಲದೆ ಲಿಂಗ ಬಳಲುವುದೆ? ಕೂಡಲ ಸಂಗಮ ದೇವ ಅರಸನರಿಯದ ಬಿಟ್ಟಿಯೋ.

೬೧. ಗಿಳಿಯೋದಿ ಫಲವೇನು? ಬೆಕ್ಕು ಬಹುದ ಹೇಳಲರಿಯದು. ಜಗವೆಲ್ಲ ಕಾಂಬ ಕಣ್ಣು ತನ್ನ ಕೊಂಬ * ಕೊಯಿಲೆಯ ಕಾಣಲರಿಯದು. ಇದಿರ ಗುಣವ ಬಲ್ಲೆವೆಂಬರು, ತಮ್ಮ ಗುಣವ ತಾವರಿಯರು ಕೂಡಲ ಸಂಗಮ ದೇವಾ.

೬೨. ಏತ ತಲೆವಾಗಿದರೇನು, ಗುರುಭಕ್ತನಾಗಬಲ್ಲುದೆ? ಇಕ್ಕುಳ ಕೈಮುಗಿದರೇನು, ಭೃತ್ಯಾಚಾರಿಯಾಗಬಲ್ಲುದೆ? ಗಿಳಿಯೋದಿದರೇನು ಲಿಂಗವೇದಿಯಾಗಬಲ್ಲುದೆ? ಕೂಡಲ ಸಂಗನ ಶರಣರು ಬಂದ ಬರವ, ನಿಂದ ನಿಲವ, ಅಂಗಸಂಗಿಗಳೆತ್ತ ಬಲ್ಲರು?

೬೩. ಹಬ್ಬಕ್ಕೆ ತಂದ ಹರಕೆಯ ಕುರಿ ತೋರಣಕ್ಕೆ ತಂದ ತಳಿರ ಮೇಯಿತ್ತು. ಕೊಂದಹರೆಂಬುದನರಿಯದೆ ಬೆಂದೊಡಲ ಹೊರೆಯುತ್ತಲಿದೆ. ಅಂದಂದೆ ಹುಟ್ಟಿತ್ತು ಅಂದಂದೆ ಹೊಂದಿತ್ತು. ಕೊಂದವರುಳಿದರೆ ಕೂಡಲ ಸಂಗಮ ದೇವಾ?

೬೪. ಹಾವಿನ ಬಾಯ ಕಪ್ಪೆ ಹಸಿದು ಹಾರುವ ನೊಣಕ್ಕೆ ಆಸೆ ಮಾಡುವಂತೆ, ಶೂಲವನೇರುವ ಕಳ್ಳ ಹಾಲು ತುಪ್ಪವ ಕುಡಿದು ಮೇಲೇಸು ಕಾಲ ಬದುಕುವನೋ? ಕೆಡೆವೊಡಲ ನೆಚ್ಚಿ, ಕಡುಹುಸಿಯನೆ ಹುಸಿದು, ಒಡಲ ಹೊರೆವವರ ಕೂಡಲ ಸಂಗಮ ದೇವಯ್ಯನೊಲ್ಲ ಕಾಣಿರಣ್ಣಾ.

೬೫. ಬಂಡಿ ತುಂಬಿದ ಪತ್ರೆಯ ತಂದು ಕಂಡ ಕಂಡಲ್ಲಿ ಮಜ್ಜನಕ್ಕೆರೆವಿರಯ್ಯ! ತಾಪತ್ರಯವ ಕಳೆದು ಪೂಜಿಸಿ. ತಾಪತ್ರಯವ ಲಿಂಗ ಬರಿಯುದಕದಲ್ಲಿ ನೆನೆವನೆ? ನೊಲ್ಲ. ಕೂಡಲ ಸಂಗಮ ದೇವ

* ಕಾಯಿಲೆ ಅಥವಾ ಕಾಯಿ ಇರಬಹುದೇ? ವಚನ ೨೩೭ ನೋಡಿ.

೬೬. ಆಡುತ್ತ ಹಾಡುತ್ತ ಭಕ್ತಿಯ ಮಾಡಬಹುದು ಲಿಂಗಕ್ಕೆ. ಕಾದು ಬೇಡದು ಬೆಸಗೊಳ್ಳದು. ತಂದೊಮ್ಮೆ ನೀಡಬಹುದು. ಕಾಡುವ ಬೇಡುವ ಜಂಗಮ ಬಂದರೆ ನೀಡಲು ಬಾರದು ಕೂಡಲ ಸಂಗಮ ದೇವಾ.

೬೭. ಮಾಡಿ ನೀಡಿ ಲಿಂಗವ ಪೂಜಿಸಿಹೆವೆಂಬವರು ನೀವೆಲ್ಲಾ ಕೇಳಿರಣ್ಣಾ ! ಹಾಗದ ಕೆರಹ ಹೊರಗೆ ಕಳೆದು ದೇಗುಲಕ್ಕೆ ಹೋಗಿ ನಮಸ್ಕಾರವ ಮಾಡುವನಂತೆ, ತನ್ನ ಕೆರಹಿನ ಧ್ಯಾನವಲ್ಲದೆ ದೇವರ ಧ್ಯಾನವಿಲ್ಲ. ಧನವನಿರಿಸದಿರಾ. ಇರಿಸಿದರೆ ಭವ ಬಪ್ಪುದು ತಪ್ಪದು. ಕೂಡಲ ಸಂಗನ ಶರಣರಿಗೆ ಸವೆಸಲೇ ಬೇಕು.

೬೮. ತನು ಮನ ಧನವ ಹಿಂದಿಕ್ಕಿಕೊಂಡು, ಮಾತಿನ ಬಣಬೆಯ ಮಳಲೊಟ್ಟಿಯ ನುಡಿವರು ನೀವೆಲ್ಲ ಕೇಳಿರೆ. ತಲೆಯಿಲ್ಲದ ಕೋಲು ಹೊಳ್ಳ ಹಾರುವುದಲ್ಲದೆ ಗುರಿಯ ತಾಕಬಲ್ಲುದೆ? ಮಾಯಾಪಾಶವ ಹಿಂಗಿ ಮನದ ಗಂಟು ಬಿಡದನ್ನಕ್ಕ ಕೂಡಲ ಸಂಗಮ ದೇವನೆಂತೊಲಿವನಯ್ಯ ?

೬೯. ಆಡಿದರೇನು ಹಾಡಿದರೇನು ಓದಿದರೇನು, ತ್ರಿವಿಧ ದಾಸೋಹವಿಲ್ಲದನ್ನಕ್ಕ? ಆಡದೇ ನವಿಲು? ಹಾಡದೇ ತಂತಿ? ಓದದೇ ಗಿಣಿ ? ಭಕ್ತಿ ಇಲ್ಲದವರನೊಲ್ಲ ಕೂಡಲ ಸಂಗಮ ದೇವ.

೭೦. ಉದಯದ ಮಾಗಿಯ ಬಿಸಿಲು ಅಂಗಕ್ಕೆ ಹಿತವಾಯಿತ್ತು. ಮಧ್ಯಾಹ್ನದ ಬಿಸಿಲು ಅಂಗಕ್ಕೆ ಕರ ಕಠಿನವಾಯಿತ್ತು. ಮೊದಲಲ್ಲಿ ಲಿಂಗ ಭಕ್ತಿ ಹಿತವಾಯಿತ್ತು. ಕಡೆಯಲ್ಲಿ ಜಂಗಮ ಭಕ್ತಿ ಕಠಿನವಾಯಿತ್ತು. ಇದುಕಾರಣ ಕೂಡಲ ಸಂಗಮ ದೇವನವರ ಬಲ್ಲನಾಗಿ ಒಲ್ಲನಯ್ಯ.

೭೧. ಮರಕ್ಕೆ ಬಾಯಿ ಬೇರೆಂದು ತಳಕ್ಕೆ ನೀರೆರೆದರೆ ಮೇಲೆ ಪಲ್ಲವಿಸಿತ್ತು ನೋಡಾ ! ಲಿಂಗದ ಬಾಯಿ ಜಂಗಮವೆಂದು ಪಡಿ ಪದಾರ್ಥವ ನೀಡಿದಡೆ ಮುಂದೆ ಸಕಳಾರ್ಥವನೀವನು. ಆ ಜಂಗಮವ ಹರನೆಂದು ಕಂಡು ನರನೆಂದು ಭಾವಿಸಿದರೆ, ನರಕ ತಪ್ಪದು ಕಾಣಾ ಕೂಡಲ ಸಂಗಮ ದೇವಾ.

೭೨. ಹೊಸತಿಲ ಪೂಜಿಸಿ ಹೊಡವಂಟು ಹೋದ ಒಕ್ಕಲಿತಿಯಂತಾಯಿತ್ತೆನ್ನ. ಭಕ್ತಿ. ಜಂಗಮವೆನ್ನೊಡೆಯರೆಂದು ಒಕ್ಕುದ ಕೊಂಡು ಉದಾಸೀನವ ಮಾಡಿದರೆ ಇಹಲೋಕಕ್ಕೆ ದೂರ, ಪರಲೋಕಕ್ಕೆ ದೂರ. ಕೂಡಲ ಸಂಗಮ ದೇವ ಅಘೋರ ನರಕದಲ್ಲಿಕ್ಕುವ.

೭೩. ಭಕ್ತಿ ಸುಭಾಷೆಯ ನುಡಿಯ ವರ್ತಿಸಿ ನುಡಿವೆ. ನುಡಿದಂತೆ ನಡೆವೆ. ನಡೆಯೊಳಗೆ ನುಡಿಯ ಪೂರೈಸುವೆ. ಮೇಲೆ ತೂಗುವ ತ್ರಾಸು ಕಟ್ಟಳೆ ನಿಮ್ಮ ಕೈಯ್ಯಲ್ಲಿ ಒಂಧು ಜವೆ ಕೊರತೆಯಾದರೆ ಎನ್ನನದ್ದಿ ನೀನೆದ್ದು ಹೋಗು ಕೂಡಲ ಸಂಗಮ ದೇವಾ.

೭೪. ಓಡುವಾತ ಲೆಂಕನಲ್ಲ, ಬೇಡುವಾತ ಭಕ್ತನಲ್ಲ. ಓಡಲಾಗದು ಲೆಂಕನು, ಬೇಡಲಾಗದು ಭಕ್ತನು. ಓಡೆನಯ್ಯಾ, ಬೇಡೆನಯ್ಯಾ, ಕೂಡಲ ಸಂಗಮ ದೇವಾ.

೭೫. ದೇವ ಸಹಿತ ಭಕ್ತ ಮನೆಗೆ ಬಂದರೆ, ಕಾಯಕವಾವುದೆಂದು ಬೆಸಗೊಂಡೆನಾದರೆ, ನಿಮ್ಮಾಣೆ ನಿಮ್ಮ ಪುರಾತನರಾಣೆ. ತಲೆದಂಡ, ತಲೆದಂಡ, ಕೂಡಲ ಸಂಗಮ ದೇವಾ ಭಕ್ತರಲ್ಲಿ ಕುಲವನರಸಿದರೆ, ನಿಮ್ಮ ರಾಣಿವಾಸದಾಣೆ.

೭೬. ತೊತ್ತಿಂಗೇಕೆ ಲಕ್ಷಣ? ಬಂಟಂಗೇಕಾಚಾರ? ಆಗಮವೇಕೆ ಡಿಂಗರಿಗಂಗೆ? ಒಕ್ಕುದನುಂಬವಂಗಯ್ಯ ಕೂಡಲ ಸಂಗಮ ದೇವಾ, ನಿಮ್ಮ ನಂಬುವುದಾಚಾರವಯ್ಯ.

೭೭. ಬಿದಿರೆಲೆಯ ಮೆಲಿದರೆ ಮೆಲಿದಂತಲ್ಲದೆ ರಸವನು ಪಡೆಯಲು ಬಾರದು. ನೀರ ಕಡೆದರೆ ಕಡೆದಂತಲ್ಲದೆ ಬೆಣ್ಣೆಯ ಹಡೆಯಲು ಬಾರದು. ಮಳಲ ಹೊಸೆದರೆ ಹೊಸೆದಂತಲ್ಲದೆ ಸರವೆಯ ಪಡೆಬಾರದು. ನಮ್ಮ ಕೂಡಲ ಸಂಗಮ ದೇವನಲ್ಲದೆ ಅನ್ಯ ದೈವಕ್ಕೆರಗಿದರೆ ಹೊಳ್ಳ ಕುಟ್ಟಿ ಕೈ ಹೊಟ್ಟಾದಂತಾಯಿತ್ತಯ್ಯ.

೭೮. ಮರದಗೊಟಿಗೆ ಬಪ್ಪ ಕಿರುಕುಳ ದೈವಕ್ಕೆ ಕುರಿಯನಿಕ್ಕಿಹೆನೆಂದು ನಲಿ ನಲಿದಾಡುವರು. ಕುರಿ ಸತ್ತು ಕಾವುದೆ ಹರ ಮುಳಿದವರ. ಕುರಿ ಬೇಡ, ಮರಿ ಬೇಡ. ಬರಿಯ ಪತ್ರೆಯ ತಂದು ಮರೆಯದೆ ಪೂಜಿಸು, ನಮ್ಮ ಕೂಡಲ ಸಂಗಮ ದೇವನ.

೭೯. ಮೀಂಗುಲಿಗನ ಹಕ್ಕಿಯಂತೆ ನೀರ ತಡಿಯಲಿರ್ದು ಮೂಗು ಹಿಡಿದು, ಧ್ಯಾನವ ಮಾಡುವರಯ್ಯ. ಬಿಟ್ಟ ಮಂಡೆವೆರಸಿ, ಬಾಯ ಮಿಡುಕಿಸುತ, ಕಣ್ಣ ಮುಚ್ಚಿ, ಬೆರಳನೆಣಿಸುವರಯ್ಯ. ನಿಮ್ಮ ಕೈಯಲ್ಲಿ ಕಟ್ಟಿದ ದರ್ಭೆಯ ಹುಲ್ಲು, ಕೂಡಲ ಸಂಗನನರಿಯದೆ ಮೊರೆ ಯಿಡುವಂತೆ.

೮೦. ನೀರ ಕಂಡಲ್ಲಿ ಮುಳಗುವರಯ್ಯ. ಮರನ ಕಂಡಲ್ಲಿ ಸುತ್ತುವರಯ್ಯ. ಬತ್ತುವ ಜಲವ ಒಣಗುವ ಮರನ ಮೆಚ್ಚಿದವರು ನಿಮ್ಮನೆತ್ತ ಬಲ್ಲರು ಕೂಡಲ ಸಂಗಮ ದೇವಾ.

೮೧. ನಿಮ್ಮನರಿಯದ ಕಾರಣ ಕೈಯಲ್ಲಿ ಹುಲ್ಲು. ನಿಮಗೆರಗದ ಕಾರಣ ಕೊರಳಲ್ಲಿ ನೇಣು. ಹಿಂಡಲೇಕೋ, ತೊಳೆಯಲೇಕೋ, ಮುಳು ಮುಳುಗಿ ಮೂಗ ಹಿಡಿಯಲೇಕೋ? ಕೂಡಲ ಸಂಗನ ಶರಣರಲ್ಲಿ ಡೋಹರ ಕಕ್ಕಯ್ಯನಾವ ತೊರೆಯಲ್ಲಿ ಮಿಂದ?

೮೨. ಕುರಿಮಿಂಡು ಕಬ್ಬಿನ ಉಲಿವ ತೋಟವ ಹೊಕ್ಕು ತೆರನನರಿಯದೆ ತನಿರಸದ ಪೊರಗಣ ಎಲೆಯನು ಮೆಲಿದವು. ನಿಮ್ಮನರಿವ ಮದ ಕರಿಯಲ್ಲದೆ, ಕುರಿ ಬಲ್ಲುದೇ ಕೂಡಲ ಸಂಗಮ ದೇವಾ?

೮೩. ಅಂಜಿದರಾಗದು, ಅಳುಕಿದರಾಗದು, ವಜ್ರ ಪಂಜರದೊಳಗಿದ್ದರೆ ಆಗದು. ತಪ್ಪದೆಲವೋ ಲಲಾಟಲಿಖಿತ. ಕಕ್ಕುಲಿತೆಬಟ್ಟರೆ ಆಗದು ನೋಡಾ. ಧೃತಿಗೆಟ್ಟು ಮನಧಾತು ಗೆಟ್ಟರೆ, ಅಪ್ಪುದು ತಪ್ಪದು ಕೂಡಲ ಸಂಗಮ ದೇವಾ.

೮೪. ಆಯುಷ್ಯ ತೀರಿದಲ್ಲದೆ ಮರಣವಿಲ್ಲ. ಭಾಷೆ ತೀರಿದಲ್ಲದೆ, ದಾರಿದ್ರ್ಯ ವಿಲ್ಲ. ಅಂಜಲೇಕೋ ಲೋಕವಿಗರ್ಭಣೆಗೆ? ಅಂಜಲೇಕೋ ಕೂಡಲ ಸಂಗಮದೇವಾ ನಿಮ್ಮಾಳಾಗಿ?

೮೫. ಸುಖ ಬಂದರೆ ಪುಣ್ಯದ ಫಲವೆನ್ನೆನು. ನೀ ಮಾಡಿದೊಡಾಯಿತ್ತೆಂದೆನ್ನೆನು. ಕರ್ಮಕ್ಕೆ ಕರ್ತುವೇ ಕಡೆ ಎಂದೆನ್ನೆನು. ಉದಾಸೀನವಿಡಿದು ಶರಣೆನ್ನೆನು. ಕೂಡಲ ಸಂಗಮ ದೇವಾ, ನೀ ಮಾಡಿದ ಉಪದೇಶ ಎನಗೀ ಪರಿಯಲಿ ಸಂಸಾರದ ಸವಿಯ ಬಳಸುವೆನು.

೮೬. ಕಾಯದ ಕಳವಳಕಂಜಿ ಕಾಯಯ್ಯ ಎನ್ನೆನು. ಜೀವನೋಪಾಯಕ್ಕಂಜಿ ಈಯಯ್ಯ ಎನ್ನೆನು. "ಯದ್ಭಾವಂ ತದ್ಭವತಿ." ಉರಿ ಬರಲಿ ಸಿರಿ ಬರಲಿ, ಬೇಕು ಬೇಡೆನ್ನೆನು. ಆನು ನಿಮ್ಮ ಹಾರೆನು, ಮಾನವರ ಬೇಡೆನು. ಆಣೆ, ನಿಮ್ಮಾಣೆ, ಕೂಡಲ ಸಂಗಮ ದೇವಾ.

೮೭. ನಾಳೆ ಬಪ್ಪುದು ನಮಗಿಂದೇ ಬರಲಿ. ಇಂದು ಬಪ್ಪುದು ನಮಗೀಗಲೆ ಬರಲಿ. ಇದಕಾರಂಜುವರು? ಇದಕಾರಳುಕುವರು? "ಜಾತಸ್ಯ ಮರಣಂ ಧ್ರುವಂ" ಎಂದುದಾಗಿ, ನಮ್ಮ ಕೂಡಲ ಸಂಗಮದೇವ ಬರೆದ ಬರಹ ತಪ್ಪಿಸುವರೆ ಹರಿ ಬ್ರಹ್ಮಾದಿಗಳವಲ್ಲ.

೮೮. ಹೊನ್ನು ಹೆಣ್ಣು ಮಣ್ಣೆಂಬ ಕರ್ಮದ ಬಲೆಯಲ್ಲಿ ಸಿಲುಕಿ ವೃಥಾ ಬರುದೊರೆ ಹೋಹ ಕೆಡುಕ ಹಾರುವ ನಾನಲ್ಲ. ಹಾರುವೆನಯ್ಯ ಭಕ್ತರ ಬರವ ಗುಡಿಗಟ್ಟಿ. ಹಾರುವೆನಯ್ಯ ಶರಣರ ಬರವ ಗುಡಿಗಟ್ಟಿ. ಕೂಡಲ ಸಂಗಮ ದೇವನು ವಿಪ್ರಕರ್ಮವ ಬಿಡಿಸಿ ಅಶುದ್ಧನ ಶುದ್ಧನ ಮಾಡಿದನಾಗಿ.

೮೯. ಎಡದ ಕೈಯಲಿ ಕತ್ತಿ, ಬಲದ ಕೈಯಲಿ ಮಾಂಸ, ಬಾಯಲಿ ಸುರೆಯ ಗಡಿಗೆ, ಕೊರಳಲಿ ದೇವರಿರಲು ಅವರ ಲಿಂಗವೆಂಬೆ, ಸಂಗನೆಂಬೆ, ಕೂಡಲ ಸಂಗಮ ದೇವಾ ಅವರ ಮುಖಲಿಂಗಿಗಳೆಂಬೆ.

೯೦. ಹೊಕ್ಕಲ್ಲಿ ಹೊಕ್ಕು ನಿಮ್ಮೊಕ್ಕುದನುಂಬವನ ಕುಲವೇನೋ ದೇವ? ನೀನೊಲಿದವನ, ಸ್ವಾಮಿ ನೀ ಹಿಡಿದವನ, ಕುಲವೇನೋ? ಕುಲಕ್ಕೆ ತಿಲಕ ನಮ್ಮ ಮಾದಾರ ಚೆನ್ನಯ್ಯ ನಿಮ್ಮಿಂದಧಿಕ ಕೂಡಲ ಸಂಗಮ ದೇವಾ.

೯೧. ಆನೆ ಅಂಕುಶಕ್ಕಲ್ಲದೆ ಅಂಜುವುದೇ ಅಯ್ಯ, ಮಾಣದೆ ಸಿಂಹದ ನಖವೆಂದು ಅಂಜುವುದಲ್ಲದೆ? ಆನೀ ಬಿಜ್ಜಳಂಗಂಜುವೆನೆ ಅಯ್ಯ? ಕೂಡಲ ಸಂಗಮ ದೇವ, ನೀನು ಸರ್ವಜೀವದಯಾಪಾರಿಯಾದ ಕಾರಣ ನಿಮಗಂಜುವೆನಲ್ಲದೆ?

೯೨. ಆರು ಮುನಿದು ಎಮ್ಮನೇನ ಮಾಡುವರು? ಊರು ಮುನಿದು ಎಮ್ಮನೆಂತು ಮಾಡುವರು? ನಮ್ಮ ಕುನ್ನಿಗೆ ಕೂಸ ಕೊಡಬೇಡ. ನಮ್ಮ ಸೊಣಗಂಗೆ ತಳಿಗೆಯಲ್ಲಿಕ್ಕಬೇಡ. ಆನೆಯ ಮೇಲೆ ಹೋಹ ವನ ಶ್ವಾನ ಕಚ್ಚಬಲ್ಲುದೆ? ನಮಗೆ ನಮ್ಮ ಕೂಡಲ ಸಂಗಯ್ಯ ನುಳ್ಳನ್ನಕ್ಕ ನಮಗೇನಯ್ಯ?

೯೩. ಊರ ಮುಂದೆ ಹಾಲ ಹಳ್ಳ ಹರಿಯುತಿರಲಿ, ಒರೆಯಾವಿನ ಬೆನ್ನ ಹರಿಯಲದೇಕಯ್ಯ? ಲಜ್ಜೆಗೆಡಲೇಕೆ? ನಾಣುಗೆಡಲೇಕೆ? ಕೂಡಲ ಸಂಗಮ ದೇವಯ್ಯನುಳ್ಳನ್ನಕ್ಕ ಬಿಜ್ಜಳನ ಭಂಡಾರವೆನಗೇಕಯ್ಯ?

೯೪. ಹುತ್ತದ ಮೇಲಣ ರಜ್ಜು ಮುಟ್ಟಿದರೆ ಸಾವರು ಶಂಕಿತರಾದ ವರು. ಸರ್ಪದಷ್ಟವಾದರೆಯೂ ಸಾಯರು ನಿಶ್ಶಂಕಿತರಾದವರು. ಕೂಡಲ ಸಂಗಮ ದೇವಯ್ಯ, ಶಂಕಿತಂಗೆ ಪ್ರಸಾದ ಸಿಂಗಿ ಕಾಳ ಕೂಟ ವಿಷವು.

೯೫. ಅಹಂಕಾರ ಮನವನಿಂಬುಗೊಂಡಲ್ಲಿ ಲಿಂಗ ತಾನೆಲ್ಲಿಪ್ಪುದೋ? ಅಹಂಕಾರಕೆಡೆಗುಡದೆ ಲಿಂಗತನುವಾಗಿರಬೇಕು. ಅಹಂಕಾರರಹಿತ ನಾದಲ್ಲಿ ಸನ್ನಿಹಿತ ಕಾಣಾ ಕೂಡಲ ಸಂಗಮ ದೇವ.

೯೬. ಅರಿದರಿದು ಸಮಗಾಣಿಸಬಾರದು. ತ್ರಾಸಿನ ಕಟ್ಟಳೆಯಂತಿನಿ ತಿನಿತು ವೆಗ್ಗಳವಾದರೆ ಈಶ್ವರನು ಒಡೆಯಿಕ್ಕದೆ ಮಾಣುವನೆ? ಪಾತ್ರಾಪಾತ್ರವೆಂದು ಕಂಡರೆ ಶಿವನೆಂತು ಮೆಚ್ಚುವನು? ಜೀವ ಜೀವಾತ್ಮನ ಸರಿ ಎಂದು ಕಂಡರೆ ಸಮವೇದಿಸದಿಪ್ಪನೇ ಶಿವನು? ತನ್ನ ಮನದಲ್ಲಿ ಯತ್ರ ಜೀವಸ್ತತ್ರ ಶಿವನೆಂದು ಸರ್ವ ಜೀವ ದಯಾಪಾರಿಯಾದರೆ, ಕೂಡಲ ಸಂಗಮ ದೇವನು ಕೈಲಾಸ ದಿಂದ ಬಂದು ಎತ್ತಿಕೊಳ್ಳದಿಪ್ಪನೇ?

೯೭. ಉಳ್ಳವರು ಶಿವಾಲಯವ ಮಾಡುವರು. ನಾನೇನ ಮಾಡುವೆ? ಬಡವನಯ್ಯಾ! ಎನ್ನ ಕಾಲೇ ಕಂಬ. ದೇಹವೇ ದೇಗುಲ· ಶಿರವೇ ಹೊನ್ನ ಕಳಶವಯ್ಯ. ಕೂಡಲ ಸಂಗಮ ದೇವಯ್ಯ ಕೇಳಯ್ಯಾ, ಸ್ಥಾವರಕ್ಕಳಿವುಂಟು ಜಂಗಮಕ್ಕಳಿವಿಲ್ಲ.

೯೮. ಕಾಲೇ ಕಂಬಗಳಿನ್ನ ದೇಹವೇ ದೇಗುಲವಾಯಿತ್ತಯ್ಯ! ಎನ್ನ ನಾಲಗೆಯೆ ಗಂಟೆ, ಶಿರ ಸುವರ್ಣದ, ಕಳಸ, ಇದೇನಯ್ಯಾ! ಸರವೆ ಲಿಂಗಕ್ಕೆ ಸಿಂಹಾಸನವಾಗಿ ಇರ್ದುದು. ಗುಹೇಶ್ವರಾ ನಿಮ್ಮ ಪ್ರಾಣಲಿಂಗ ಪ್ರತಿಷ್ಠೆ ಪಲ್ಲಟವಾಗಿರ್ದನಯ್ಯಾ.

೯೯. ಲಗ್ನವೆಲ್ಲಿಯದೋ ವಿಘ್ನವೆಲ್ಲಿಯದೋ ಸಂಗಯ್ಯ? ದೋಷವೆಲ್ಲಿಯದೋ ದುರಿತವೆಲ್ಲಿಯದೋ ಸಂಗಯ್ಯ? ನಿಮ್ಮ ಮಾಣದೆ ನೆನೆವಂಗೆ ಭವಕರ್ಮವೆಲ್ಲಿಯದೋ ಕೂಡಲ ಸಂಗಮ ದೇವಾ?

೧೦೦. ಗ್ರಹ ಬಂದು ಆವರಿಸಲೊಡನೆ ತನ್ನ ಮರೆಸುವುದು, ಮತ್ತೊಂದಕ್ಕಿಂಬುಗೊಡಲೀಯದಯ್ಯಾ! ಕೂಡಲ ಸಂಗಮ ದೇವನ ಅರಿವು ಅನುಪಮವಾಗಲೊಡನೆ ಬೆವಹಾರದೊಳಗಿರಲೀಯದಯ್ಯ.

೧೦೧. ಏನನಾದರೆಯೂ ಸಾಧಿಸಬಹುದು; ಮತ್ತೆ ಏನನಾದರೆಯೂ ಸಾಧಿಸಬಹುದಯ್ಯ. ತಾನಾರೆಂಬುದ ಸಾಧಿಸಬಾರದಯ್ಯ ಕೂಡಲ ಸಂಗಮ ದೇವರ ಕರುಣವುಳ್ಳವಂಗಲ್ಲದೆ.

೧೦೨. ಜ್ಯೋತಿಮುಟ್ಟಿದ ಬತ್ತಿ ಎಲ್ಲ ಜ್ಯೋತಿಯಪ್ಪುವಯ್ಯಾ. ಸಾಗರವ ಮುಟ್ಟಿದ ನದಿಗಳೆಲ್ಲ ಸಾಗರವಪ್ಪುವಯ್ಯಾ. ಪ್ರಸಾದ ಮುಟ್ಟಿದ ಪದಾರ್ಥವೆಲ್ಲ ಪ್ರಸಾದವಪ್ಪುವಯ್ಯಾ. ಲಿಂಗವ ಮುಟ್ಟಿದ ಅಂಗವೆಲ್ಲ ಲಿಂಗವಪ್ಪುವಯ್ಯಾ. ಸಕಳೇಶ್ವರ ದೇವ, ನಿಮ್ಮ ಮುಟ್ಟಿದವರೆಲ್ಲ ನಿಮ್ಮಂತಪ್ಪರಯ್ಯಾ.

೧೦೩. ಘಟವನೊಡೆದು ಬಯಲ ನೋಡಲದೇಕೆ? ಘಟದೊಳಗಿಪ್ಪುದೇ ಬಯಲೆಂದರಿದಡೆ ಸಾಲದೇ? ಪಟವ ಹರಿದು ತಂತುವ ನೋಡಲದೇಕೆ? ಆ ಪಟವ ತಂತುವೆಂದರಿದಡೆ ಸಾಲದೇ? ಕಟಕವ

ಮುರಿದು ಕಾಂಚನವ ನೋಡಲದೇಕೆ? ಆ ಕಟಕವೇ ಕಾಂಚನ ವೆಂದರಿದಡೆ ಸಾಲದೇ? ತನ್ನನಳಿದು ಘನವ ನೋಡಲದೇಕೆ? ತಾನೇ ಘನವೆಂದರಿದಡೆ ಸಾಲದೇ ಹೇಳಾ ರಾಮನಾಥಾ?

೧೧೪. ಆತ್ಮತೇಜವ ಬಿಟ್ಟಾಗಲೇ ಗುರುವನರಿದ. ಮನವಿಕಾರವ ಬಿಟ್ಟಾಗಲೇ ಲಿಂಗವನರಿದ. ಧನವಿಕಾರವ ಬಿಟ್ಟಾಗಲೇ ಜಂಗಮವ ನರಿದ. ಇಂತು ತ್ರಿವಿಧ ನಾಸ್ತಿಯಾದಂಗಲ್ಲದೆ ನಿಃಕಳಂಕ ಮಲ್ಲಿಕಾರ್ಜುನನಲ್ಲಿ ಸಹಜ ಭಕ್ತನಲ್ಲ.

೧೧೫. ತನುವಿನಲ್ಲಿ ನಿರ್ಮೋಹ, ಮನದಲ್ಲಿ ನಿರಹಂಕಾರ, ಪ್ರಾಣದಲ್ಲಿ ನಿರ್ಭಯ, ಚಿತ್ತದಲ್ಲಿ ನಿರಪೇಕ್ಷೆ, ವಿಷಯದಲ್ಲಿ ಉದಾಸೀನ, ಭಾವ ದಲ್ಲಿ ದಿಗಂಬರ, ಜ್ಞಾನದಲ್ಲಿ ಪರಮಾನಂದ ನೆಲೆಗೊಂಡ ಬಳಿಕ, ಸೌರಾಷ್ಟ್ರ ಸೋಮೇಶ್ವರ ಲಿಂಗ ಬೇರಿಲ್ಲ ಕಾಣಿರೋ.

೧೧೬. ತಾಯ ಗರ್ಭದಲ್ಲಿ ಶಿಶು ತಾಯ ಕುರುಹನರಿಯದು. ಆ ತಾಯಿ ಶಿಶುವಿನ ಕುರುಹನೆಂದೂ ಅರಿಯಳು. ಮಾಯಾ ಮೋಹದಲ್ಲಿಪ್ಪ ಭಕ್ತರು ದೇವರನರಿಯರು. ಆ ದೇವರು ಭಕ್ತರನೆಂದೂ ಅರಿ ಯನು ಕಾಣಾ ರಾಮನಾಥಾ.

೧೧೭. ಲಿಂಗತನುವಿಂಗೆ ಶೃಂಗಾರವಪ್ಪ ತೆರನದೆಂತೆಂದೊಡೆ, ಕಾಮ ಕ್ರೋಧ ಲೋಭ ಮೋಹಾದಿಗಳಲ್ಲಿ ತೆರಪುಗೊಡದಿಪ್ಪುದು. ಲಿಂಗವೇ ಅಂಗವಾಗಿ, ಧ್ಯಾನಧಾರಣ ನಿಜನಿವಾಸವಾಗಿ, ನಿಶ್ಚಯ ನಿಜತತ್ತ್ವವಾಗಿ ನಿಂದುದೇ ಆಭರಣವೆಂದನಂಬಿಗರ ಚೌಡಯ್ಯ.

೧೧೮. ಗರ್ವದಿಂದ ಮಾಡುವ ಭಕ್ತಿ ದ್ರವ್ಯದ ಕೇಡು. ನಡೆ ಇಲ್ಲದ ನುಡಿ ಅರಿವಿಗೆ ಹಾನಿ. ಕೊಡದೆ ತ್ಯಾಗಿ ಎನಿಸಿಕೊಂಬುದು ಮುಡಿ ಇಲ್ಲದ ಶೃಂಗಾರ. ದೃಢವಿಲ್ಲದ ಭಕ್ತಿ ಅಡಿ ಒಡೆದ ಕುಂಭದಲ್ಲಿ ಸುಜಲವ ತುಂಬಿದಂತೆ, ಅಮಳೇಶ್ವರ ಲಿಂಗವ ಮುಟ್ಟದ ಭಕ್ತಿ.

೧೧೯. ಕತ್ತೆ ಬಲ್ಲುದೆ ಕತ್ತುರಿಯ ವಾಸನೆಯ? ತೊತ್ತು ಬಲ್ಲಳೆ ಗುರು ಹಿರಿಯರುತ್ತಮರೆಂಬುದ? ಭಕ್ತಿಯರಿಯದ ವ್ಯರ್ಥಜೀವಿಗಳು ನಿಮ್ಮನೆತ್ತ ಬಲ್ಲರೈ ರಾಮನಾಥಾ.

೧೧೦. ಒರು ಶಠಗನ ಭಕ್ತಿ ದಿಟವೆಂದು ನೆಚ್ಚಲು ಬೇಡ. ಮಠದೊಳಗಣ ಬೆಕ್ಕು ಇಲಿಯ ಕಂಡು ಪುಟನೆಗೆದಂತಾಯಿತ್ತು ಕಾಣಾ ರಾಮನಾಥಾ.

೧೧೧. ಭಕ್ತಿಯ ಬಲ್ಲವರು ನಚ್ಚಿ ಮಚ್ಚಿ ಮನವನೊಚ್ಚತಗೊಡುವರು. ಭಕ್ತಿಯನರಿಯದ ಬಲು ಪಾಪಿ ಜೀವಿಗಳು ಕಚ್ಚುವರು ಬಗುಳುವರು ರಾಮನಾಥಾ.

೧೧೨. ನೆರೆ ಕೆನ್ನೆಗೆ ತೆರೆ ಗಲ್ಲಕ್ಕೆ ಶರೀರ ಗೂಡಹೋಗದ ಮುನ್ನ, ಹಲ್ಲು ಹೋಗಿ ಬೆನ್ನು ಬಾಗಿ ಅನ್ಯರಿಗೆ ಹಂಗಾಗದ ಮುನ್ನ, ಕಾಲ ಮೇಲೆ ಕಯ್ಯನೂರಿ ಕೋಲ ಹಿಡಿಯದ ಮುನ್ನ, ಮುಪ್ಪಿಂದೊಪ್ಪವಳಿಯದ ಮುನ್ನ, ಮೃತ್ಯು ಮುಟ್ಟದ ಮುನ್ನ, ಪೂಜಿಸು ಕೂಡಲ ಸಂಗಮ ದೇವನ.

೧೧೩. ಮನವೇ ಸರ್ಪ ತನುವೇ ಹೇಳಿಗೆ. ಹಾವಿನೊಡತಣ ಹುದುವಾಳಿಗೆ. ಇನ್ನಾವಾಗ ಕೊಂದಹುದೆಂದರಿಯೆ. ಇನ್ನಾವಾಗ ತಿಂದಹುದೆಂದರಿಯೆ. ನಿಚ್ಚಕ್ಕೆ ನಿಮ್ಮ ಪೂಜಿಸಬಲ್ಲಡೆ, ಅದೇ ಗಾರುಡ ಕೂಡಲ ಸಂಗಮ ದೇವಾ.

೧೧೪. ಕುರಿಯೊಡೆಯ ಹಲವರ ನಡುವೆ ನಿಂದರೆ, ತನ್ನೊಡೆಯನನರಿವಂತೆ, ಸಕಲೇಂದ್ರಿಯ ಬಹು ದುಃಖದಲ್ಲಿದ್ದರೂ ತತ್ಕಾಲಕ್ಕರ್ಚನೆ ನೇಮ ಕೃತ್ಯ ತಪ್ಪದೆ ಮಾಡಬೇಕು. ಇದು ನಿಶ್ಚಯದಿರವು. ಸದಾಶಿವ ಮೂರ್ತಿ ಲಿಂಗವನರಿವುದಕ್ಕೆ ಇದೇ ಗೊತ್ತು.

೧೧೫. ಅರೆತುದಯ್ಯ ಅಂಗಗುಣ. ಒರೆತುದಯ್ಯ ಭಕ್ತಿರಸ. ಆವರಿಸಿತಯ್ಯ ಅಂಗ ಲಿಂಗವನು. ಏನೆಂದರಿಯೆನಯ್ಯ ಲೋಕ ಲೌಕಿಕದ ಮದವ. ಲಿಂಗಭ್ರಾಂತನಾದೆನಯ್ಯ ಕೂಡಲ ಸಂಗಮ ದೇವಾ, ನಿಮ್ಮ ಕರುಣ ಎನ್ನನೆಡೆಗೊಂಡಿತ್ತಾಗಿ.

೧೧೬. ಗಾಳಿ ಬೀಸಿದಲ್ಲಿ ತೂರಿಕೊಳ್ಳಿರಯ್ಯ. ಗಾಳಿ ನಿನ್ನ ಅಧೀನವಲ್ಲ ಕಂಡಯ್ಯ. ನಾಳೆ ತೂರಿಹೆನೆಂದಡೆ ಇಲ್ಲ ಕಂಡಯ್ಯ. ಶಿವ ಶರಣೆಂಬುದೊಂದು ಗಾಳಿ ಹೊಡೆದಲ್ಲಿ ಬೇಗ ತೂರಿದನಂಬಿಗರ ಚೌಡಯ್ಯ.

೧೧೭. ನಿಷ್ಠೆಯುಳ್ಳ ಭಕ್ತ ನಟ್ಟಡವಿಯಲ್ಲಿರ್ದಡೇನು ? ಅದು ಪಟ್ಟಣವೆಂದೆನ್ನಿಸುವುದು. ನಿಷ್ಠೆಯಿಲ್ಲದ ಭಕ್ತ ಪಟ್ಟಣದಲ್ಲಿದ್ದರೂ ಅದು ನಟ್ಟಡವಿ ಕಾಣಾ ರಾಮನಾಥಾ.

೧೧೮. ನೇಮಸ್ಥನೆಂಬ ಕರ್ಮಿ, ಶೀಲವಂತನೆಂಬ ಸಂದೇಹಿ, ಭಾಷ್ಯವಂತನೆಂಬ ಬ್ರಹ್ಮೇತಿಕಾರ. ಇವರು ಮೂವರು ಕುಳಿತಲ್ಲಿ ಕುಳ್ಳಿರಲಾಗದು, ನಿಂದಲ್ಲಿ ನಿಲ್ಲಲಾಗದು, ಹೋಹ ಬಟ್ಟೆಯಲ್ಲಿ ಹೋಗಲಾಗದು. ಇವರು ಮೂವರಿಗೆ ಗುರುವಿಲ್ಲ, ಲಿಂಗವಿಲ್ಲ ಎಂದಾತ ನಮ್ಮ ಅಂಬಿಗರ ಚೌಡಯ್ಯ.

೧೧೯. ದಾಸನ ಕುಲವಾದಾತ ಈಶಂಗಲ್ಲದೆ ಶರಣೆನ್ನ. ಆಸೆಮಾಡ ನೋಡಾ ಅನ್ಯದೈವಂಗಳಿಗೆ. ದೇಶದ ಪಿಶಾಚಂಗಳಿಗೆ ಆಸೆಮಾಡ ನೋಡಾ. ಆಸೆಮಾಡಿದನಾದಡೆ, ಅವ ದಾಸನ ಕುಲವಲ್ಲ. ಅವ ಅನ್ಯಕುಲ ಕಾಣಾ ರಾಮನಾಥಾ.

೧೨೦. ಹರಸಿ ಮಾಡುವುದು ಹರಕೆಯ ವಂಡ. ನೆರಸಿಮಾಡುವುದು ಡಂಬಿನ ಭಕ್ತಿ. ಹರಸಬೇಡ, ನೆರಸಬೇಡ. ಬಂದ ಬರವನರಿದಡೆ ಕೂಡಿಕೊಂಡಿಪ್ಪ ನಮ್ಮ ಕೂಡಲ ಸಂಗಮ ದೇವ.

೧೨೧. ಆರುವನೊಲ್ಲೆನೆಂದು ಅರಣ್ಯಕ್ಕೆ ಹೋಗುವದು ಮರುಳತನ. ಊರೊಳಗಿರ್ದಡೆ ನರರ ಹಂಗು. ಅರಣ್ಯದೊಳಗಿರ್ದಡೆ ತರುಗಳ ಹಂಗು. ಬಂದ ಪದಾರ್ಥವ ಲಿಂಗಾರ್ಪಿತವ ಮಾಡಿಕೊಂಬ ಶರಣನೇ ಜಾಣ ಸಕಳೇಶ್ವರಾ.

೧೨೨. ಆಕಾಶದಲ್ಲಿಯ ಮೇಘದಂತೆ, ಜಲದಲ್ಲಿಯ ತೆರೆಯಂತೆ ಬರುತ್ತದೆ ನೋಡಾ. ಈ ಘಟ ಬಂದದ್ದರಿಯೆ ಹೋದದ್ದರಿಯೆ. ನಿಂದ ವಸ್ತುವದು ನಿಜವೆಂದರಿದೆ ನೋಡಾ ಕಪಿಲ ಸಿದ್ಧ ಮಲ್ಲಿಕಾರ್ಜುನಾ.

೧೨೩. ಆದಿಯಲ್ಲಿ ಬಯಲು, ಅಂತ್ಯದಲ್ಲಿ ಬಯಲು, ಮಧ್ಯದಲ್ಲಿ ತೋರಿ ಕೆಡುವದದು ನೋಡಾ. ಈ ಘಟವು ತೋರಿ ತೋರಿ ಕೆಡುವುದಕ್ಕೆ ಈ ಜಗದಲ್ಲಿ ಇದೆ ದೃಷ್ಟ ನೋಡಾ, ಕಪಿಲ ಸಿದ್ಧ ಮಲ್ಲಿಕಾಜುನಾ.

೧೨೪. ಕರಡಿಗೆಯೊಳೊಬ್ಬ ಕುರುಡ ಮೂರುತಿ ತೋರುತ್ತಾನೆ. ಒಡನೊಡನೆ ನಡೆದರೆ ಮೈಯೆಲ್ಲಾ ಚಕ್ಷುವಾಗಿ ತೋರುತ್ತಾನೆ. ನಡೆಯದಿರ್ದರೆ ಕಪಿಲ ಸಿದ್ಧ ಮಲ್ಲಿಕಾರ್ಜುನನು ಕುರುಡ, ಇವನೂ ಕುರುಡ ನೋಡಾ.

೧೨೫. ಬ್ರಹ್ಮಪಾಶ ವಿಷ್ಣುಮಾಯೆ ಎಂಬ ಬಲೆಯ ಬೀಸಿ ಹೊನ್ನು ಹೆಣ್ಣು ಮಣ್ಣೆಂಬ ಭ್ರಾಂತಿಯ ತೋರಿ ಮುಕ್ಕಣ್ಣನಾಡಿದ ಬೇಂಟೆಯ. ಆಸೆಯೆಂಬ ಗುಟುಕನಿಕ್ಕಿ ಹೇಸದೆ ಕೊಂದೆಯಲ್ಲ ಗುಹೇಶ್ವರಾ.

೧೨೬. ಆಸೆಗೆ ಸತ್ತುದು ಕೋಟಿ. ಆಮಿಷಕ್ಕೆ ಸತ್ತುದು ಕೋಟಿ. ಹೊನ್ನು ಹೆಣ್ಣು ಮಣ್ಣಿಂಗೆ ಸತ್ತುದು ಕೋಟಿ. ಗುಹೇಶ್ವರಾ, ನಿನಗಾಗಿ ಸತ್ತವರನಾರನೂ ಕಾಣೆ.

೧೨೭. ಹೊತ್ತಾರೆ ಪೂಜಿಸಲು ಬೇಡ ಕಂಡ್ಯಾ! ಬೈಗೆ ಪೂಜಿಸಲು ಬೇಡ ಕಂಡ್ಯಾ! ಇರುಳುವನು ಹಗಲುವನು ಕಳೆದು ಪೂಜೆಯನು ಪೂಜಿಸಲು ಬೇಕು ಕಂಡ್ಯಾ! ಇಂತಪ್ಪ ಪೂಜೆಯ ಪೂಜಿಸುವವರ ಎನಗೆ ತೋರಯ್ಯ ಗುಹೇಶ್ವರಾ.

೧೨೮. ಮನದ ಸುಖವ ಕಂಗಳಿಗೆ ತಂದರೆ, ಕಂಗಳ ಸುಖವ ಮನಕ್ಕೆ ತಂದರೆ ನಾಚಿತ್ತು ಮನ ನಾಚಿತ್ತು. ಸ್ಥಾನಪಲ್ಲಟವಾದ ಬಳಿಕ ವ್ರತಕ್ಕೆ ಭಂಗ ಗುಹೇಶ್ವರಾ.

೧೨೯. ತುಂಬಿದ ತೊರೆಯ ಹಾಯ್ದವೆಂದು ಹರಿಗೋಲನೇರುವ ಅಣ್ಣಗಳು ನೀವು ಕೇಳಿರೆ! ತೊರೆಯೊಳಗಣ ನೆಗಳು ಹರಿಗೋಲ ನುಂಗಿದಡೆ ಗತಿಯಿಲ್ಲ. ಎಚ್ಚತ್ತು ನಡಸಿರೆ. ನಡುದೊರೆಯಲ್ಲಿ ಹುಟ್ಟುಹಾಕಿ ದಡೆ ಹರಿಗೋಲು ಮುಳುಗದೆ ಏರಿದವರು ಸತ್ತರು. ಇದರೊಳ ಹೊರಗನರಿದಾತನಲ್ಲದೆ ಗುಹೇಶ್ವರ ಲಿಂಗದಲ್ಲಿ ಅಚ್ಚ ಶರಣನಲ್ಲ.

೧೩೦. ಅಂಡಾದಿ ಬಿಂದುವಿನ ಹೊಂದಿದ ಹುಟ್ಟು. ಆ ಹುಟ್ಟನೇ ಹಿಡಿದು, ಅಂದಗೇಡಿಗ ಅಂದ ಚೆಂದದಲ್ಲಿ ತೊಳಲಾಡುತ್ತಿದ್ದಿತು ಜಗವೆಲ್ಲ. ಅಂದಗೇಡಿಗ ಳೆಲ್ಲ ಬಂದೇರಿಹರು. ಇದನೊಂದೇ ಹುಟ್ಟಿನಲ್ಲಿ ಇಳುಹುವೆನೆಂದ ಅಂಬಿಗರ ಚೌಡಯ್ಯ.

೧೩೧. ಮುಂದಣೂರಿಗೆ ಬಟ್ಟೆ ಇದೆ ಹೋಗೆಂದಡೆ ಅಂಧಕನೇನು ಬಲ್ಲನು ಹೇಳಾ! ಸಂಗ್ರಾಮದಲ್ಲಿ ಓಡಿದ ಹಂದೆ ಗೆಲಬಲ್ಲನೆ ಹೇಳಾ! ನಿಂದ ನಿಲವಿನ ಮಡುವ ಕಂದನೀಸಾಡಬಲ್ಲನೆ ಹೇಳಾ! ಗುಹೇಶ್ವರನೆಂಬ ನಿರಾಳದ ಘನವ ಪಂಚೇಂದ್ರಿಕನೆತ್ತಬಲ್ಲನು ಹೇಳಾ!

೧೩೨. ಹೊರಗನೆ ಕೊಯ್ದು ಹೊರಗನೆ ಪೂಜಿಸಿದವರ ಕಂಡು ನಾಚಿದೆನಯ್ಯಾ! ಒಳಗೊಂದು ಅನಿಮಿಷ ಲಿಂಗವ ಕಂಡು ಎನ್ನ ಮನಃಪುಷ್ಪದಲ್ಲಿ ಪೂಜೆಯ ಮಾಡಿದರೆ ನಾಚಿಕೆ ಮಾದು ನಿಸ್ಸಂದೇಹಿಯಾದೆನು ಗುಹೇಶ್ವರಾ.

೧೩೩. ಅರಗಿನ ದೇಗುಲದಲ್ಲಿ ಒಂದು ಉರಿಯಲಿಂಗವ ಕಂಡೆ. ಮತ್ತೆ ದೇವರ ಪೂಜಿಸುವವರಾರೂ ಇಲ್ಲ. ಉತ್ತರ ಪಥದ ದರ್ಶನಾದಿಗಳಿಗೆ ಸುತ್ತಿದ ಮಾಯೆ ಎತ್ತಲಿಕ್ಕೆ ಹೋಯಿತ್ತು. ಮರನೊಳಗಣ ಕಿಚ್ಚು ಮರನ ಸುಟ್ಟುದ ಕಂಡೆ. ಗುಹೇಶ್ವರನೆಂಬ ಲಿಂಗವಲ್ಲಿಯೇ ನಿಂದಿತ್ತು.

೧೩೪. ಒಂದು ಇಲ್ಲದ ಬಿಂದುವ, ತಂದೆಯಿಲ್ಲದ ಕಂದನ, ಮಾತೆಯಿಲ್ಲದ ಜಾತನ, ಗಮನವಿಲ್ಲದ ಗಮ್ಯನ, ಮೂವರರಿಯದ ಮುಗ್ಧನ ಠಾವ ತೋರಿಸು ಗುಹೇಶ್ವರಾ.

೧೩೫. ನೆಳಲ ಹೂಳಿಹೆನೆಂದು ಬಳಲುತ್ತಿದೆ ಜಗವೆಲ್ಲ. ನೆಳಲು ಸಾಯಬಲ್ಲುದೆ ಅಂಗಪ್ರಾಣಿಗಳಿಗೆ? ಸಮುದ್ರದಾಚೆಯ ತಡಿಯಲ್ಲಿ ಕಳ್ಳನ ಕಂಡು ಇಲ್ಲಿಂದ ಮುನಿದು ಬೈದರೆ ಅವ ಸಾಯ ಬಲ್ಲನೆ? ಭಾವದಲ್ಲಿ ಹೊಲಿದ ಹೊಲಿಗೆಯ ಭೇದವನರಿಯರು. ಕಾಮಿಸಿದರುಂಟೇ ನಮ್ಮ ಗುಹೇಶ್ವರ ಲಿಂಗವ?

೧೩೬. ರಂಗ ಒಂದೇ, ಕಂಬ ಒಂದೇ, ದೇಗುಲ ಒಂದೇ ಗುಹೇಶ್ವರಾ, ನಿಮ್ಮ ಮನ್ನಣೆಯ ಶರಣರೇ ದೇವರೆಂಬೆ.

೧೩೭. ಆದಿಯಾಧಾರ ಉಳ್ಳನ್ನಕ್ಕ ಉಪಚಾರ. ಎರಡು ಒಂದಾದರೆ ಶಿವಾಚಾರ. ಆ ಶಿವಾಚಾರ ಸ್ವಯವಾದರೆ ಬ್ರಹ್ಮಾಚಾರ. ಗುಹೇಶ್ವರನನರಿದಡೆ ಅನಾಚಾರ.

೧೩೮. ಕಾಯದ ಕಳವಳವ ಗೆಲಿದರೇನು ಮಾಯದ ತಲೆಯನರಿಯುದನ್ನಕ್ಕ? ಮಾಯೆಯ ತಲೆಯನರಿದರೇನು, ಜ್ಞಾನದ ನೆಲೆಯನರಿಯುದನ್ನಕ್ಕ? ಜ್ಞಾನದ ನೆಲೆಯನರಿದರೇನು ತಾನು ತಾನಾಗದನ್ನಕ್ಕ? ತಾನು ತಾನಾದ ಶರಣನ ನಿಲವಿಂಗೆ ಒಂದು ದಾರಿ ಮೇರೆಯುಂಟೇ ಗುಹೇಶ್ವರಾ?

೧೩೯. ಅಜ್ಞಾನಿಯಾದವಂಗೆ ಅರಿವು ತಾನೆಲ್ಲಿಹುದೋ? ಸುಜ್ಞಾನಿಯಾದವಂಗೆ ಮರಹು ತಾನೆಲ್ಲಿಹುದೋ? ನಾನರಿದೆನೆಂಬಾತ ಇದಿರ ಕೇಳಲುಂಟೆ? ಭ್ರಾಂತಿನ ಭ್ರಮೆಯೊಳಗೆ ಬಳಲುತ್ತಿರಲು ಮಾತಿನ ಮಾಲೆಯೊಳಗೆ ಅರಿವೆಂಬುದುಂಟೆ? ಸೂತಕ ಹಿಂಗದೆ, ಸಂದೇಹವಳಿಯದೆ, ಮುಂದಣ ಸೂಕ್ಷ್ಮವ ಕಾಂಬ ಪರಿಯೆಂತೋ? ಜ್ಯೋತಿಯ ಬಸಿರೊಳಗೆ ಜನಿಸಿದ ಕಾಂತಿಯ ಪ್ರಭೆಯ ಬೆಳಗು ಗುಹೇಶ್ವರಾ, ನಿಮ್ಮ ಶರಣ.

೧೪೦. ಭಸ್ಮವ ಹೂಸಿದಲ್ಲಿ ಶರಣನೆ? ಅಲ್ಲಲ್ಲ. ಮಾಡುವ ಕ್ರಿಯೆ ಭಸ್ಮವಾದರೆ ಶರಣ, ನೋಡುವ ಕೃತ್ಯ ರುದ್ರಾಕ್ಷಿಯಾದರೆ ಶರಣ, ನೋಡಾ ಕಪಿಲ ಸಿದ್ಧ ಮಲ್ಲಿಕಾರ್ಜುನಾ.

೧೪೧. ಲೀಲೆಯದು ಪರಬ್ರೊಮ್ಮದ ಇಚ್ಛೆ. ಇಚ್ಛೆಯದು ಸಕಲ ಜೀವಜಾಲೋತ್ಪತ್ತಿ. ಸಕಲ (ಜೀವ) ಜಾಲೋತ್ಪತ್ತ್ಯವದು ಜಗದ್ರಚನೆ. ಜಗದ್ರಚನೆಯದು ಜಗತ್ಪ್ರಳಯ ನೋಡಾ ಕಪಿಲ ಸಿದ್ಧ ಮಲ್ಲಿಕಾರ್ಜುನಾ.

೧೪೨. ಮನ ಬುದ್ಧಿ ಚಿತ್ತ ಅಹಂಕಾರ ಜ್ಞಾನವೆಂಬ ಪಂಚಕರಣಗಳಿರವ ಹೇಳಿಹೆ ಕೇಳಿರಯ್ಯಾ. ಮನವೆಂಬುದು ಸಂಕಲ್ಪ ವಿಕಲ್ಪಕ್ಕೊಳಗಾಯಿತ್ತು. ಇಲ್ಲದುದ ಕಲ್ಪಿಸುವುದೇ ಸಂಕಲ್ಪ. ಇದ್ದುದ ಅರಿಯದುದೆ ವಿಕಲ್ಪ. ಕಲ್ಪಿಸಿ ರಚಿಸುವುದೇ ಬುದ್ಧಿಯಯ್ಯಾ. ಕಲ್ಪಿಸಿ ಮಾಡುವವದು ಚಿತ್ತವಯ್ಯಾ. ಮಾಡಿದುದಕ್ಕೆ ನಾನೆಂಬುದು ಅಹಂಕಾರವಯ್ಯಾ. ಮಾಡುವ ನೀಡುವ ಭಾವ ಶಿವಕೃತ್ಯವೆಂದರೆ

ಜ್ಞಾನ ವೈರಾಗ್ಯವಯ್ಯ. ಅರಿಯದ ಅರಿವು ಮಹಾಜ್ಞಾನ ಮೋಕ್ಷದ ಇರವು ನೋಡಾ, ಕಪಿಲ ಸಿದ್ಧ ಮಲ್ಲಿಕಾರ್ಜುನನ ಯೋಗ ನೋಡಾ.

೧೪೩ ಮನವಿದ್ದಲ್ಲಿ ಮಹಾದೇವನಿಪ್ಪ ! ಮನವಿದ್ದಲ್ಲಿ ಮಹಾದೇವನಿಲ್ಲವೋ ಅಯ್ಯಾ. ಯಾತ್ರಾರ್ಥವಾಗಿ ಬಂದವರು ಬಯಲಲ್ಲಿ ಬಯಲ ಬಿಟ್ಟು ಬಯಲಾರಿಸುವಂತೆ ಮನೋವ್ಯಾಪಾರಕ್ಕದರಂತೆ ಇಪ್ಪ ನೋಡಾ ಕಪಿಲ ಸಿದ್ಧ ಮಲ್ಲಿಕಾರ್ಜುನ.

೧೪೪ ನಿರ್ಮಲಕರ್ಮವದು ಸದ್ಗತಿಗೆ ಸಾಧ್ಯ ನೋಡಾ. ನಿರ್ಮಲ ಕರ್ಮವದು ಜ್ಞಾನಕ್ಕೆ ವರ್ಧನ ನೋಡಾ. ನಿರ್ಮಲಕರ್ಮವದು ಕಪಿಲ ಸಿದ್ಧ ಮಲ್ಲಿಕಾರ್ಜುನನ ಕೂಡುವ ಕೂಟ ನೋಡಾ.

೧೪೫. ಮನವೆಂಬುದು ಬೇರಿಲ್ಲ· ಮಹಾದೇವನ ಮಹಾ ಅರುಹು ನೋಡ. ಸಂಕಲ್ಪ ವಿಕಲ್ಪಂಗಳ ಧರಿಸಿದಲ್ಲ ಮನವೆನಿಸಿತ್ತು. ಅದು ಅಳಿದಲ್ಲಿ ಮಹಾಜ್ಞಾನವೆನಿಸಿತ್ತು. ಅಳಿದ ಭಾವ ತಲೆದೋರಿದಲ್ಲಿ ಕಪಿಲ ಸಿದ್ಧ ಮಲ್ಲಿಕಾರ್ಜುನನೆನಿಸಿತ್ತು.

೧೪೬. ನೆಲೆಗೊಳ್ಳದು ಎಂದು ಬಿಡಬಾರದಯ್ಯ. ನೆಲೆಯದು, ನೆಲೆಯದು, ಎಂದು ಅನುಭವಿಸಬೇಕಯ್ಯ. ನೆಲೆ ಇಲ್ಲದದು ನೆಲೆಯಲ್ಲಿಹುದಯ್ಯ ಕಪಿಲ ಸಿದ್ಧ ಮಲ್ಲಿಕಾರ್ಜುನಾ.

೧೪೭. ಶಾಸ್ತ್ರವ ಹೇಳುವವರೊಂದು ಕೋಟಿ. ವೇದ ವೇದಾಂತವ ಹೇಳುವವರೊಂದು ಕೋಟಿ. ನ್ಯಾಯಾನ್ಯಾಯವ ಹೇಳುವವ ರೊಂದು ಕೋಟಿ. ಕಪಿಲ ಸಿದ್ಧನ ಮಾಯಾಕೀಲವ ಹೇಳುವವ ರೊರ್ವರೂ ಇಲ್ಲ ಎಲ್ಲಾದರೂ.

೧೪೮. ವೇಷವ ಧರಿಸಿ ಫಲವೇನಯ್ಯ, ವೇಷದಂತಾಚರಣೆ ಇಲ್ಲದನ್ನಕ್ಕ? ವೇದಾಂತವನೋದಿ ಫಲವೇನಯ್ಯ, ಬ್ರಹ್ಮ ತಾವಾಗದನ್ನಕ್ಕ? ನಾನು ಕೆರೆಯ ತೋಡಿ ಫಲವೇನಯ್ಯ, ಪುಣ್ಯ ತೀರ್ಥಗಳು ಬರದನ್ನಕ್ಕ ಕಪಿಲ ಸಿದ್ಧ ಮಲ್ಲಿನಾಥಾ?

೧೪೯. ಆಗುವುದ ನಾ ತಪ್ಪಿಸಿಹೆನೆಂದರೆ ತಪ್ಪಲರಿಯದು. ಆಗು ಭೋಗಂಗಳ ತಪ್ಪಿಸುವಡೆ ಸಚ್ಚಿದಾನಂದ ಶಿವಯೋಗಿಗಲ್ಲದೆ ನರರಿಗೆಲ್ಲಿಯದೋ ಕಪಿಲ ಸಿದ್ಧ ಮಲ್ಲಯ್ಯ?

೧೫೦. ಸಂಚಿತಾದಿ ಕರ್ಮತ್ರಯಂಗಳು ಜೀವನಿಗಲ್ಲದೆ ಶಿವಸ್ವರೂಪನಿಗೆಲ್ಲಿಹುದೊ? ಆಡುವ ಗೊಂಬೆಯನು ಆಡಿಸುವಾತಂಗಲ್ಲದೆ ಆಡುವ ಗೊಂಬೆಗೆಲ್ಲಿಹುದೊ ಸ್ವತಂತ್ರತೆಯು? ಕಪಿಲ ಸಿದ್ಧ ಮಲ್ಲಯ್ಯ ಇದರಿರವು ಸ್ವತಂತ್ರನಿಗಲ್ಲದೆ ಅಸ್ವತಂತ್ರನಿಗೆಲ್ಲಿಹದೊ?

೧೫೧. ಹೃದಯ ಕಮಲದಲ್ಲಿರ್ಪ ದೇವನ ದೇಹಾರವ ಮಾಡಲರಿಯರು ನೋಡಾ. ದೇಹ ನಿರ್ದೇಹ ಆಗದನ್ನಕ್ಕ ದೇಹಾರವಿನ್ನೆಲ್ಲಿಹದೋ? ಅನಂತ ಮುಖದಲ್ಲಿ ದೇಹಾರವ ಮಾಡಲು ದೇವನಲ್ಲಿಲ್ಲ ನೋಡಾ. ಅಸತ್ಯವಿಡಿದು, ಹುಸಿಯ ಪೂಜಿಸಿ ಗಸಣಿಗೊಳಗಾದರು ನೋಡಾ ಅನಂತ ಹಿರಿಯರೆಲ್ಲರು. ಎಲೆಲೆ ಕೂಡಲ ಚೆನ್ನಸಂಗ, ನಿಮ್ಮ ಶರಣ ಏಕೋಗ್ರಾಹಿಯಾಗಿ ಸಚ್ಚಿದಾನಂದ ಸ್ವರೂಪವಾದ ನಿಶ್ಚಿಂತ ನಿಜೈಕ್ಯನು ನೋಡಯ್ಯ.

೧೫೨. ಆದಿಯಾಧಾರವಾಗಿಹುದೆ ಘನ. ಆ ಘನ ವೇಧಿಸಿಹುದೆ ಮನ. ಆ ಮನವು ಮಹದಲ್ಲಿ ನಿಂದುದೆ ಭಕ್ತಿ. ಭಿನ್ನಭಾವದಿಚ್ಛೆ ತಲೆದೋರದಿಹುದೆ ಆಚಾರ. ತಟ್ಟು ಮುಟ್ಟು ತಾಗು ನಿರೋಧವಿಲ್ಲದಿಹುದೆ ಪೂಜೆ. ಆಶೆ ರೋಷವಿಲ್ಲದಿಹುದೆ ಪ್ರಸಾದ. ಕರಣ ಮಥನವಿಲ್ಲದಿಹುದೆ ಅನುಭಾವ. ಇಂತೀ ಸರ್ವಾಂಗದಲ್ಲಿ ಸರ್ವಾಚಾರ ಸನ್ನಿಹಿತವಾದ ನಿಜಲಿಂಗೈಕ್ಯಂಗೆ ನಮೋ ನಮೋ ಎಂಬೆನಯ್ಯ ಕೂಡಲ ಸಂಗಮ ದೇವಾ.

೧೫೩. ಒಡಲ ಧರ್ಮಂಗಳು ಬಿಡದನ್ನಕ್ಕ, ಎರಡನರಿಯದ ಪೂಜೆಯ ಮಾಡಿಹೆನೆಂಬ ನರಕಿಗಳವರೆತ್ತ ಬಲ್ಲರೋ? ಉದಯದಲ್ಲಾದ ಪೂಜೆ ಅಸ್ತಮಾನದಲ್ಲಿ ಎಂಜಲೆಂಬ ಭಂಗಿತರ ಮುಖವ ನೋಡಲಾಗದಯ್ಯ. ಅಗ್ನಿ ಎಂಜಲನುಂಡು ಲಿಂಗದಲ್ಲಿ ಸ್ವಯವ ನರಸುವ ಭಂಗಿತರನೇನೆಂಬೆನಯ್ಯ ಕೂಡಲ ಚೆನ್ನಸಂಗಮ ದೇವಾ?

೧೫೪. ನಿಷ್ಠೆಯುಳ್ಳಾತಂಗೆ ನಿತ್ಯ ನೇಮದ ಹಂಗೇಕೋ? ಅರಿವುಳ್ಳಾತಂಗೆ ಅಗ್ಘವಣಿಯ ಹಂಗೇಕೋ? ಮನಶುದ್ಧವುಳ್ಳಾತಂಗೆ ಮಂತ್ರದ ಹಂಗೇಕೋ? ಭಾವಶುದ್ಧವುಳ್ಳಾತಂಗೆ ಪುಷ್ಪದ ಹಂಗೇಕೋ? ಕೂಡಲ ಚೆನ್ನಸಂಗಯ್ಯ ನಿಮ್ಮನರಿದಾತಂಗೆ ಇದಿರಿಟ್ಟರಿಯ ಬೇಕೆಂಬ ಹಂಗೇಕೋ?

೧೫೫. ತಿಳಿಯದೆ ಪೂಜಿಸಿದರಾಗುವುದೇನೋ ಅಯ್ಯಾ? ತಿಳಿದು ತಿಳಿದು ಮಾಡಬೇಕು. ಜಂಗಮಾರ್ಚನೆಯ ತಿಳಿದು ಮಾಡಬೇಕು. ತಿಳಿಯದೆ ಮಾಡಲು ನಿನ್ನ ಸಿದ್ಧಿಗಳಿಗೆ ಸಿದ್ಧರಲ್ಲದೆ ನಿನ್ನಂಗ ದೊರೆಕೊಂಬ ಪರಿಯೆ ನೋಡಾ, ಕಪಿಲ ಸಿದ್ಧ ಮಲ್ಲಿಕಾರ್ಜುನಾ?

೧೫೬. ಗಿರಿಯಲ್ಲದೆ ಹುಲ್ಲು ಮೊರಡಿಯಲ್ಲಾಡುವುದೇ ನವಿಲು? ಕೊಳನಲ್ಲದೆ ಕಿರಿವಳ್ಳಕ್ಕೆಳಸುವುದೆ ಹಂಸೆ? ಮಾಮರ ತಳಿತಲ್ಲದೆ ಸ್ವರಗೈವುದೆ ಕೋಗಿಲೆ? ಪರಿಮಳವಿಲ್ಲದ ಪುಷ್ಪಕ್ಕೆಳಸುವುದೇ ಭ್ರಮರ? ಎನ್ನ ದೇವ ಚೆನ್ನ ಮಲ್ಲಿಕಾರ್ಜುನನಲ್ಲದೆ ಅನ್ಯಕ್ಕೆಳಸುವುದೇ ಎನ್ನ ಮನ? ಕೇಳಿರೆ ಕೆಳದಿಯರಿರಾ.

೧೫೭. ಎನ್ನ ಕಾಯ ಮಣ್ಣು, ಜೀವ ಬಯಲು. ಆವುದ ಹಿಡಿವೆನಯ್ಯಾ ದೇವಾ? ನಿಮ್ಮನಾವ ಪರಿಯಲ್ಲಿ ನೆನೆವೆನಯ್ಯ? ಎನ್ನ ಮಾಯವನು ಮಾಣಿಸಯ್ಯ ಚೆನ್ನ ಮಲ್ಲಿಕಾರ್ಜುನಯ್ಯ.

೧೫೮. ಕಿಡಿ ಕಿಡಿ ಕೆದರಿದಡೆ, ಎನಗೆ ಹಸಿವು ತೃಷೆ ಅಡಗಿತೆಂಬೆನು. ಮುಗಿಲು ಹರಿದು ಬಿದ್ದರೆ, ಎನಗೆ ಮಜ್ಜನಕ್ಕೆರೆದರೆಂಬೆನು. ಗಿರಿ ಮೇಲೆ ಬಿದ್ದರೆ ಎನಗೆ ಪುಷ್ಪವೆಂಬೆನು. ಚೆನ್ನ ಮಲ್ಲಿಕಾರ್ಜುನಯ್ಯಾ, ಶಿರ ಹರಿದು ಬಿದ್ದರೆ ಪ್ರಾಣ ನಿಮಗರ್ಪಿತವೆಂಬೆನು.

೧೫೯. ಚಂದನವ ಕಡಿದು ಕೊರೆದು ತೇದೊಡೆ, ನೊಂದೆನೆಂದು ಕಂಪು ಬಿಟ್ಟಿತ್ತೆ? ತಂದು ಸುವರ್ಣವ ಕಡಿದೊರೆದೊಡೆ, ಕಳಂಕ ಹಿಡಿದಿತ್ತೆ? ತಂದು ತಂಸು ಕಬ್ಬ ಗಾಣದಲಿಕ್ಕಿದೊಡೆ ಬೆಂದು

ಸಾಕಾಗುಳ್ಳ ಸಕ್ಕರೆಯಾಗಿ ನೊಂದೆನೆಂದು ಸವಿಯ ಬಿಟ್ಟತ್ತೆ? ನಾ ಹಿಂದೆ ಮಾಡಿದ ಹೀನಂಗಳೆಲ್ಲವ ತಂದು ಮುಂದಿಳುಹಲು ನಿಮಗೆ ಹಾನಿಯೆ? ಎನ್ನ ತಂದೆ ಚೆನ್ನಮಲ್ಲಿಕಾರ್ಜುನ ದೇವಯ್ಯಾ, ಕೊಂದಡೆ ಶರಣೆಂಬುದ ಮಾಣೆ.

೧೬೦. ಕಾಯ ಕರ್ರನೆ ಕಂದಿದರೇನು? ಕಾಯ ಮಿರ್ರನೆ ಮಿಂಚಿದರೇನು? ಅಂತರಂಗ ಶುದ್ಧವಾದ ಬಳಿಕ, ಚೆನ್ನ ಮಲ್ಲಿಕಾರ್ಜುನನೊಲಿದ ಕಾಯ ಎಂತಾದೊಡೆನಿಮಗೇನಯ್ಯ?

೧೬೧. ತನು ನಿಮ್ಮ ರೂಪಾದ ಬಳಿಕ ನಾನಾರಿಗೆ ಮಾಡುವೆ? ಮನ ನಿಮ್ಮ ರೂಪಾದ ಬಳಿಕ ನಾನಾರ ನೆನೆವೆ? ಪ್ರಾಣ ನಿಮ್ಮ ರೂಪಾದ ಬಳಿಕ ನಾನಾರನಾರಾಧಿಸುವೆ? ಅರಿವು ನಿಮ್ಮಲ್ಲಿ ಸ್ವಯವಾದ ಬಳಿಕ ನಾನಾರನರಿವೆ? ಚೆನ್ನ ಮಲ್ಲಿಕಾರ್ಜುನಾ, ನಿಮ್ಮಲ್ಲಿ ನೀವಾಗಿ ನಿಮ್ಮಿಂದ ನಿಮ್ಮ ಮರೆದೆನಯ್ಯಾ.

೧೬೨. ನಿನ್ನರಿಕೆಯ ನರಕವೇ ಮೋಕ್ಷ ನೋಡಯ್ಯ! ನಿನ್ನನರಿಯದ ಮುಕ್ತಿಯೇ ನರಕ ಕಂಡಯ್ಯ! ನೀನೊಲ್ಲದ ಸುಖವೇ ದುಃಖ ಕಂಡಯ್ಯ! ನೀನೊಲಿದ ದುಃಖವೇ ಪರಮ ಸುಖ ಕಂಡಯ್ಯ! ಚೆನ್ನ ಮಲ್ಲಿಕಾರ್ಜುನಯ್ಯ, ನೀ ಕಟ್ಟಿ ಕೆಡಹಿದ ಬಂಧನವೇ ನಿರ್ಬಂಧನವೆಂದಿಪ್ಪೆನು.

೧೬೩. ಎಲ್ಲ ಎಲ್ಲವನರಿದು ಫಲವೇನಯ್ಯ, ತನ್ನ ತಾನರಿಯಬೇಕಲ್ಲದೆ? ತನ್ನಲ್ಲಿ ಅರಿವು ಸ್ವಯವಾಗಿರಲು, ಅನ್ಯರ ಕೇಳಲುಂಟೆ? ಚೆನ್ನ ಮಲ್ಲಿಕಾರ್ಜುನ ನೀ ಅರಿವಾಗಿ ಮುಂದುದೋರಿದ ಕಾರಣ, ನಿಮ್ಮಿಂದ ಲರಿದೆನಯ್ಯ ಪ್ರಭುವೇ.

೧೬೪. ಕೋಟ್ಯನುಕೋಟಿ ಜಪವನ್ನು ಮಾಡಿ ಕೋಟಲೆಗೊಳಲೇಕೆ ಮನವೇ? ಕಿಂಚಿದ್ಗೀತವನಂತಕೋಟಿ ಜಪ. ಜಪವೆಂಬುದೇಕೆ ಮನವೇ? ಕೂಡಲ ಸಂಗನ ಶರಣರ ಕಂಡು ಆಡಿ ಹಾಡಿ ಬದುಕು ಮನವೇ.

೧೬೫ ಕಲ್ಲನಾಗರ ಕಂಡರೆ ಹಾಲನೆರೆ ಎಂಬರು. ದಿಟದ ನಾಗರ ಕಂಡರೆ ಕೊಲ್ಲೆಂಬರಯ್ಯ. ಉಂಬ ಜಂಗಮ ಬಂದರೆ ನಡೆ ಎಂಬರು, ಉಣ್ಣದ ಲಿಂಗಕ್ಕೆ ಬೋನವ ಹಿಡಿ ಎಂಬರಯ್ಯ. ನಮ್ಮ ಕೂಡಲ ಸಂಗನ ಶರಣರ ಕಂಡು ಉದಾಸೀನವ ಮಾಡಿದರೆ, ಕಲ್ಲ ತಾಗಿದ ಮಿಟ್ಟೆಯಂತಪ್ಪರಯ್ಯಾ.

೧೬೬. ಕಣ್ಣ ಮುಚ್ಚಿ ಕನ್ನಡಿಯ ತೋರುವಂತೆ ಇರುಳು ಹಗಲಿನ ನಿದ್ರೆ ಸಾಲದೇ? ಬೆರಳನೆಣಿಸಿ ಪರಮಾತ್ಮನ ಹಡೆವುದು ಚೋದ್ಯವಲ್ಲವೇ ಹೇಳಾ? ಮೂಗ ಮುಚ್ಚಿ ಮುಕ್ತಿಯನರಸುವರ ನಾನೇನೆಂಬೆ ಕೂಡಲ ಸಂಗಮ ದೇವಾ?

೧೬೭. ತಪವೆಂಬುದು ತಗೆಹು, ನೇಮವೆಂಬುದು ಬಂಧನ, ಶೀಲವೆಂಬುದು ಸೂತಕ, ಭಾಷೆ ಎಂಬುದು ಪ್ರಾಣಘಾತಕ. ಇಂತೀ ಚತುರ್ವಿಧ ದೊಳಗಿಲ್ಲ ಗುಹೇಶ್ವರಾ, ನಿಮ್ಮ ಶರಣರು ಅಗ್ರಗಣ್ಯರು.

೧೬೮. ತುಂಬಿದುದು ತುಳುಕದು ನೋಡಾ. ನಂಬಿದುದು ಸಂದೇಹಿಸದು ನೋಡಾ. ಒಲಿದುದು ಓಸರಿಸದು ನೋಡಾ. ನೆರೆಯರಿದುದು ಮರೆಯದು ನೋಡಾ. ಚೆನ್ನಮಲ್ಲಿಕಾರ್ಜುನಯ್ಯ, ನೀನೊಲಿದ ಶರಣಂಗೆ ನಿಸ್ಸೀಮಸುಖವಯ್ಯ.

೧೬೯ ಭೂಮಿ ನಿನ್ನದಲ್ಲ, ಹೇಮ ನಿನ್ನದಲ್ಲ, ಕಾಮಿನಿ ನಿನ್ನವಳಲ್ಲ. ಅದು ಜಗಕ್ಕಿಕ್ಕಿದ ವಿಧಿ. ನಿನ್ನೊಡವೆ ಎಂಬುದು ಜ್ಞಾನರತ್ನ. ಅಂತಪ್ಪ ದಿವ್ಯ ರತ್ನವ ಕೆಡೆಗುಡದೆ, ಆ ರತ್ನವ ನೀನಲಂ ಕರಿಸಿದೆಯಾದಡೆ, ನಮ್ಮ ಗುಹೇಶ್ವರಲಿಂಗದಲ್ಲಿ ನಿನ್ನಿಂದ ಬಿಟ್ಟು ಸಿರಿವಂತರಿಲ್ಲ ಕಾಣಾ ಎಲೆ ಮನವೇ.

೧೭೦. ಬೆಲ್ಲಕ್ಕೆ ಚದುರ ರಸವಲ್ಲದೆ ಸಿಹಿಗೆ ಚದುರ ರಸ ಉಂಟೇ? ಕುರುಹಿಗೆ ಪೂಜೆಯಲ್ಲದೆ ಅರುಹಿಗೆ ಪೂಜೆಯುಂಟೇ? ಅರಿವು ಕರಿಗೊಂಡಲ್ಲಿ ಕಯ್ಯ ಕುರುಹು ಅಲ್ಲಿ ಲೋಪವೆಂದನಂಬಿಗರ ಚೌಡಯ್ಯ.

೧೭೧. ಕ್ರಿಯೆಯೇ ಅಧಿಕವೆಂಬ ದೊಡ್ಡ ಸಿದ್ಧಾಂತಿಗಳ ಮಾತು ಸೊಗಸದಯ್ಯ ಎನಗೆ. ಅದೇನು ಕಾರಣವೆಂದರೆ, ಆವುದಾನೊಂದು ಪಕ್ಷಿ ಉಭಯ ರೆಕ್ಕೆಯಿಂದ ಗಗನಕ್ಕೆ ಹಾರುವಂತೆ, ಅಂತರಂಗದಲ್ಲಿ ಸಮ್ಯಗ್‌ಜ್ಞಾನ, ಬಹಿರಂಗದಲ್ಲಿ ಶಿವಸತ್ಕ್ರಿಯಾ ಸನ್ನಿಹಿತವಿಲ್ಲದೆ ಪರವಸ್ತುವ ಕೂಡ ಬಾರದಾಗಿ, ಇದು ಕಾರಣ ಸತ್ಕ್ರಿಯಾ ಸಮ್ಯಗ್‌ಜ್ಞಾನ. ಸಂಪನ್ನರಾದ ಶರಣರ ತೋರಿ, ಬದುಕಿಸಯ್ಯ ಎನ್ನ ಅಖಂಡೇಶ್ವರಾ.

೧೭೨. ಅಗ್ನಿ ಸುಡಲಲ್ಲದೆ ಸುಳಿಯಲರಿಯದು. ವಾಯು ಸುಳಿವುದಲ್ಲದೆ ಸುಡಲರಿಯದು. ಆ ಅಗ್ನಿ ವಾಯುವ ಕೂಡಿದಲ್ಲದೆ ಅಡಿ ಇಡಲರಿಯದು. ಈ ಪರಿಯಂತೆ ನರರರಿವರೆ ಕ್ರಿಯಾ ಜ್ಞಾನ ಭೇದ ರಾಮನಾಥಾ.

೧೭೩. ಕ್ರಿಯೆ ಮರೆದಲ್ಲಿ ಅರಿವು ಹೀನವಾಗಿಪ್ಪುದು. ಅರಿವು ಮರೆದಲ್ಲಿ ಜ್ಞಾನ ಹೀನವಾಗಿಪ್ಪುದು. ಜ್ಞಾನವ ಮರೆದಲ್ಲಿ ಬೆಳಗಿನ ಕಳೆ ಹೋಯಿತ್ತು. ಈಶಾನ್ಯಮೂರ್ತಿ ಮಲ್ಲಿಕಾರ್ಜುನ ಲಿಂಗ ಅವರಿಗೆ ಮರೆಯಾಗಿ ತೊಲಗಿತ್ತು.

೧೭೪. ಆಪ್ಯಾಯನಕ್ಕೆ ಅನ್ನವ ನೀಡುವೆ. ಲಾಂಛನಕ್ಕೆ ಶರಣೆಂಬೆ. ಲಾಂಛನಕ್ಕೆ ತಕ್ಕ ಆಚಾರವಿಲ್ಲದಿದ್ದರೆ, ನೀ ಸಾಕ್ಷಿಯಾಗಿ 'ಛೀ' ಎಂಬೆನು, ಕೂಡಲ ಸಂಗಮ ದೇವಾ.

೧೭೫. ವೇದ ಕಲಿತಲ್ಲಿ ಪಾಠಕನಲ್ಲದೆ ಜ್ಞಾನಿಯಲ್ಲ, ನಿಲ್ಲು. ಶಾಸ್ತ್ರ ಪುರಾಣವನೋದಿದಲ್ಲಿ ಪಂಡಿತನಲ್ಲದೆ ಜ್ಞಾನಿಯಲ್ಲ, ನಿಲ್ಲು. ವ್ರತ ನೇಮ ಕೃತ್ಯ ಪೂಜಕನಾಪಡೇನು ? ದಿವ್ಯಜ್ಞಾನದ ಠಾವನರಿಯಬೇಕು. ಈ ಭೇದವ ತಿಳಿದರಿದಲ್ಲಿ ಮನ ಸಂದಿತ್ತು ಮಾರೇಶ್ವರಾ.

೧೭೬. ಸಕಲಾಗಮಂಗಳ ಕಲಿತು ಸರ್ವರಿಗೆ ಹೇಳಿ ತಾ ನಿಃಕರುಣಿಯಾಗಿ, ತ್ರಿವಿಧಮಲಕ್ಕೆ ಹೊರಗಾಗೆಂದು ತಾನೊಳಗಾಗಿ, ಬರಿ ಮಾತಿನ ಭಟನಂತೆ, ಅದೇತರರಿಕೆ ಸಗರದ ಬೊಮ್ಮನೊಡೆಯ ತನುಮನ ಸಂಗಮೇಶ್ವರಾ ?

೧೭೭. ಈಶ್ವರನನ್ನು ಕಾಂಬುದೊಂದಾಸೆಯುಳ್ಳೊಡೆ ಪರದೇಶಕ್ಕೆ ಹೋಗಿ ಬಳಲದಿರು. ಕಾಶಿಯಲ್ಲಿ ಕಾಯುವ ವಿನಾಶವ ಮಾಡಲು ಬೇಡ. ನಿನ್ನಲ್ಲಿ ನೀ ತಿಳಿದು ನೋಡಾ. ಜಗವು ನಿನ್ನೊಳಗೆಂದಾತ ಅಂಬಿಗರ ಚೌಡಯ್ಯ.

೧೭೮. ಎಲ್ಲವ ಕಳೆದುಳಿದ ಹೂವ ತಂದು, ಗೆಲ್ಲ ಸೋಲಕ್ಕೊಳಗಾಗದ ನೀರನೆ ತುಂಬಿ, ಕರಣಂಗಳೆಲ್ಲವು ಕಂಗಳು ತುಂಬಿ, ನಿಂದು ನೋಡಿ, ತನ್ನಂಗದಿಚ್ಛೆಯ ಮರೆದು, ಲಿಂಗವ ಪೂಜಿಸಬೇಕೆಂದ ಅಂಬಿಗರ ಚೌಡಯ್ಯ.

೧೭೯. ಅರಿಯದ ಗುರು ಅರಿಯದ ಶಿಷ್ಯ. ಇವರಿಬ್ಬರಿಗೇನಪ್ಪುದೋ? ಕುರುಡ ಕುರುಡನ ಕೈಯ ಪಿಡಿದು ಪಥವ ನಡೆಯ ಬಲ್ಲರೆ? ತೊರೆಯಲದ್ದಿ ಹೋಹವನ ಈಸಲರಿಯದವ ತೆಗೆದಂತಾಯಿತ್ತೆಂದನಂಬಿಗರ ಚೌಡಯ್ಯ.

೧೮೦. ಮಾಡುವ ಭಕ್ತಂಗೆ ಮನವೇ ಸಾಕ್ಷಿ. ಹೊರ ಹೊಮ್ಮಿ ಬಯಲ ಹೊರಲೇಕೆ? ಹಮ್ಮಿಲ್ಲದೆ ಮಾಡಿ ಮನದಲ್ಲಿ ಮರುಗದಿರ್ದಡೆ, ಅಲ್ಲಿ ತಾ ಹೆರಹಿಂಗದಿರ್ಪನಂಬಿಗರ ಚೌಡಯ್ಯ.

೧೮೧. ಎತ್ತ ಸುತ್ತಿಬಂದಡೂ ಊರಿಗೆ ಬಪ್ಪದು ತಪ್ಪದು. ಹಲವು ಮಾತನಾಡಿದಡೇನು? ಮೂರು ಮಲವ ಮರೆದಿರಬೇಕು. ಹೊಲಬುದಪ್ಪಿದ ಮೃಗ ಬಲೆಯೊಳಗೆ ಬಿದ್ದಂತಾಗಬೇಡ. ಇದನರಿತು ಬದುಕೆಂದ ಅಂಬಿಗರ ಚೌಡಯ್ಯ.

೧೮೨. ಮೂರುವ ಮುಟ್ಟದೆ, ನಾಲ್ಕುವನಂಟದೆ, ಐದುವ ನೆಚ್ಚಲು ಬೇಡ ಕಂಡ್ಯಾ. ಆರುವ ಜಾರದೆ, ಏಳುವ ಹಿಡಿಯದೆ, ಎಂಟುವ ಗಂಟಿಕ್ಕ ಬೇಡ ಕಂಡ್ಯಾ. ಒಂಬತ್ತು ಬಾಗಿಲು ಹಿಂದಿಕ್ಕಿ ಹೋದರೆ ಅಂಬಿಗರ ಚೌಡಯ್ಯನ ಉಪದೇಶವಯ್ಯ.

೧೮೩. ಕೋಪಿ ಮಜ್ಜನಕ್ಕೆರೆದರೆ ರಕ್ತದ ಧಾರೆ. ಪಾಪಿ ಹೂವನೇರಿಸಲು ಮಸೆದಾಯುಧದ ಗಾಯ. ಕೂಪರನಾರನೂ ಕಾಣೆ ಮಾದಾರ ಚೆನ್ನಯ್ಯನಲ್ಲದೆ. ಕೂಪರನಾರನೂ ಕಾಣೆ ಡೋಹರ ಕಕ್ಕಯ್ಯನಲ್ಲದೆ. ವ್ಯಾಪ್ತಿಯುಳ್ಳವ ನಮ್ಮ ಮಡಿವಾಳ ಮಾಚಯ್ಯ. ನಿನ್ನ ಪತ್ತಿಗರಿವರಯ್ಯ ಕೂಡಲ ಸಂಗಯ್ಯಾ.

೧೮೪. ಶ್ವಪಚನಾದರೇನು ? ಲಿಂಗಭಕ್ತನೇ ಕುಲಜನು. ನಂಬಿ ನಂಬದಿದ್ದರೆ ಸಂದೇಹಿ ನೋಡಾ. ಕಟ್ಟಿದರೇನು ಮುಟ್ಟಿದರೇನು ಹೂಸಿದರೇನು ಮನ ಮುಟ್ಟದನ್ನಕ್ಕ? ಭಾವ ಶುದ್ಧವಿಲ್ಲದವರಿಗೆ ಭಕ್ತಿ ನೆಲೆಗೊಳ್ಳದು ಕೂಡಲ ಸಂಗಮದೇವನೊಲಿದವರಿಗಲ್ಲದೆ.

೧೮೫. ಬ್ರಾಹ್ಮಣನಾಗಲಿ, ಕ್ಷತ್ರಿಯನಾಗಲಿ, ವೈಶ್ಯನಾಗಲಿ, ಶೂದ್ರನಾಗಲಿ, ಆವ ಜಾತಿಯಲ್ಲಿ ಹುಟ್ಟಿದಾತನಾದರೂ ಆಗಲಿ. ಗುರುಕಾರುಣ್ಯವ ಪಡೆದು ಅಂಗದ ಮೇಲೆ ಲಿಂಗವ ಧರಿಸಿದವನು, ಆಚಾರ ಸಂಪನ್ನ ಸತ್‌ಕ್ರಿಯನಾದ ಮಹಾತ್ಮನೇ, ಮೂರು ಲೋಕಕ್ಕೆ ಅಧಿಕಾರಿ ನೋಡಾ ಅಖಂಡೇಶ್ವರಾ.

೧೮೬. ನೀರು ಗಟ್ಟಿಗೊಂಡು ಮುತ್ತಪ್ಪುದಲ್ಲದೆ, ಮುತ್ತು ನೀರಪ್ಪುದೇನಯ್ಯ? ಹಾಲು ಹೆಪ್ಪುಗೊಂಡು ತುಪ್ಪ ಆಗುವುದಲ್ಲದೆ ತುಪ್ಪ ಹಾಲಪ್ಪುದೇನಯ್ಯ ? ಹೀನಜಾತಿಯಲ್ಲಿ ಜನಿಸಿದ ನರನು ಗುರುವಿನ ಕಾರುಣ್ಯದಿಂದ ಶಿವಜಾತಾಭರಣನಾದ ಬಳಿಕ ಮರಳಿ ನರನಪ್ಪನೇನಯ್ಯ ಅಖಂಡೇಶ್ವರಾ ?

೧೮೭. ಮಡದಿಯ ಪ್ರಾಣಕ್ಕೆ ಮೊಲೆ ಮುಡಿ ಇದ್ದಿತ್ತೆ? ಒಡೆಯರ ಪ್ರಾಣಕ್ಕೆ ಇದ್ದಿತ್ತೆ ಯಜ್ಞೋಪವೀತ? ಕಡೆಯಲ್ಲಿರ್ದ ಅಂತ್ಯಜನು ಹಿಡಿದಿದ್ದನೇ ಪ್ರಾಣದಲ್ಲಿ ಹಿಡಿಗೋಲ? ನೀನಿಕ್ಕಿದ ತೊಡಕನೀ ಲೋಕದ ಜಡರೆತ್ತ ಬಲ್ಲರೈ ರಾಮನಾಥಾ.

## (iv) ಸದಾಚಾರ

೧೮೮. ಓಡೆತ್ತ ಬಲ್ಲುದು ಅವಲಕ್ಕಿಯ ಸವಿಯ? ಕೋಡಗವೆತ್ತ ಬಲ್ಲುದು ಸೆಳೆಮಂಚದ ಸುಖವ? ಕಾಗೆ ನಂದನವನದೊಳಗಿದ್ದರೇನು ಕೋಗಿಲೆಯಾಗಬಲ್ಲುದೇ ಹೇಳಾ? ಕೊಳನ ತಡಿಯಲ್ಲೊಂದು ಬಕ ಕುಳಿತಿದ್ದರೇನು, ಕಳಹಂಸನಾಗಬಲ್ಲುದೇ ಕೂಡಲ ಸಂಗಮ ದೇವಾ?

೧೮೯. ಹುತ್ತವ ಬಡಿದಡೆ ಹಾವು ಸಾಯ ಬಲ್ಲುದೇ ಅಯ್ಯ? ಅಘೋರ ತಪವ ಮಾಡಿದಡೇನು? ಅಂತರಂಗ ಆತ್ಮಶುದ್ಧವಿಲ್ಲದವರನೆಂತು ನಂಬುವನಯ್ಯ ಕೂಡಲ ಸಂಗಮ ದೇವ?

೧೯೦. ಸಾರ ಸಜ್ಜನರ ಸಂಗ ಲೇಸು ಕಂಡಯ್ಯ. ದೂರ ದುರ್ಜನರ ಸಂಗವದು ಭಂಗವಯ್ಯ. ಸಂಗವೆರಡುಂಟು. ಒಂದ ಬಿಟ್ಟು ಒಂದ ಹಿಡಿ, ಕೂಡಲ ಸಂಗನ ಶರಣರ.

೧೯೧. ಎಲ್ಲಿ ನೋಡಿದಡಲ್ಲಿ ಮನವೆಳಸಿದಡೆ ಆಣೆ, ನಿಮ್ಮಾಣೆ, ನಿಮ್ಮ ಪ್ರಮಥರಾಣೆ. ಪರವಧುವನು ಮಹಾದೇವಿ ಎಂಬೆ ಕೂಡಲ ಸಂಗಮ ದೇವಾ.

೧೯೨. ಒಡೆಯರಾಡುವ ಮಾತ ಕಡೆಯ ಪರಿಯಂತರ ಕೇಳಿ, ಇದಿರ ಹೋಗಿ, ಕಿಂಕರನಾಗಿ ನಡುಗುತ್ತ, ಬಿನ್ನಹವ ಮಾಡುವ ಸದ್ಭಕ್ತನ ತೋರಯ್ಯ! ಒಡೆಯರಾಡುವ ಮಾತ ಕಂಡು, ಕರೆವಲ್ಲಿ ಕೆಡೆ ಮೆಟ್ಟಿ ಬಾಯಿ ಘನವೆಂದು ಆಡುವವನ ತೋರದಿರಯ್ಯ! ಅವನ ಸಂಗದಲಿ ಇರಿಸದಿರಯ್ಯ! ಅವನ ಸಹಪಂಕ್ತಿಯಲ್ಲಿ ಕುಳ್ಳಿರಿಸದಿರಯ್ಯ! ಕೂಡಲ ಸಂಗಮ ದೇವಯ್ಯ, ನಿಮ್ಮ ಬೇಡುವುದೊಂದೇ ವರವ.

೧೯೩. ಸಂಚಲವಿಲ್ಲದ ಭಕ್ತಿ ವಂಚನೆಯಿಲ್ಲದ ಮಹಂತನ ತೋರಾ! ತನುಶುಚಿಗಳ ಮನಶುಚಿಗಳ ತೋರಾ! ಇಂತಪ್ಪ ಶಿವಲಿಂಗೈಕ್ಯರ ತೋರಿ ಬದುಕಿಸು ಕೂಡಲ ಸಂಗಮ ದೇವಾ.

೧೯೪. ಹರಿವ ನದಿಯ ತೆರನ ಹೋಲ ಬಲ್ಲರೆ ಭಕ್ತ. ಕೂಡೆ ಸುಯಿಧಾನವ ನೀಡ ಬಲ್ಲರೆ ಭಕ್ತ. ನೀಡಿ ಮಿಕ್ಕುದ ಕಾಯ್ದುಕೊಂಡಿರ ಬಲ್ಲಡೆ ಕೂಡಿಕೊಂಡಿಪ್ಪ ನಮ್ಮ ಕೂಡಲ ಸಂಗಮ ದೇವ.

೧೯೫. ಬೇವಿನ ಬೀಜವ ಬಿತ್ತಿ ಬೆಲ್ಲದ ಕಟ್ಟೆಯ ಕಟ್ಟಿ ಆಕಳ ಹಾಲ ನೆರೆದು, ಜೇನತುಪ್ಪವ ಹೊಯ್ದರೆ, ಸಿಹಿಯಾಗಬಲ್ಲುದೆ ಕಹಿಯ ಹುದಲ್ಲದೇ? ಶಿವಭಕ್ತರಲ್ಲದವರ ಕೂಡೆ ನುಡಿಯಲಾಗದು ಕೂಡಲ ಸಂಗಮ ದೇವಾ.

೧೯೬. ತನುಶುಚಿ ಇಲ್ಲದವನ ದೇಹಾರವೇಕೆ? ದೇವರು ಕೊಡನೆಂಬ ಭ್ರಾಂತಿಯದೇಕೆ? ಮನಕ್ಕೆ ಮನವೇ ಸಾಕ್ಷಿ ಸಾಲದೇ ಲಿಂಗ ತಂದೆ? ಹೇಗೆ ಮನ ಹಾಗೆ ಘನ ತಪ್ಪದು ಕೂಡಲ ಸಂಗಮ ದೇವಾ.

೧೯೭. ಸದಾಚಾರ ಸದ್ಭಕ್ತಿ ಇಲ್ಲದವರನೊಲ್ಲನಯ್ಯ. ಅವರಾರಾಧನೆ ದಂಡ, ನಿಚ್ಚ ನಿಚ್ಚ ಪ್ರಾಯಶ್ಚಿತ್ತರನೊಲ್ಲ ಕೂಡಲ ಸಂಗಮ ದೇವ ಭೂಭಾರಕರನು.

೧೯೮. ನೂರನೋದಿ ನೂರ ಕೇಳಿದರೇನು. ಆಸೆ ಹರಿಯದು, ರೋಷ ಬಿಡದು. ಮಜ್ಜನಕ್ಕೆರೆದು ಫಲವೇನು? ಮಾತಿನಂತೆ ಮನವಿಲ್ಲದ ಜಾತಿ ಡೊಂಬರ ನೋಡಿ ನಗುವ ನಮ್ಮ ಕೂಡಲ ಸಂಗಮ ದೇವ.

೧೯೯. ಕೋಣನ ಹೇರಿಂಗೆ ಕುನ್ನಿ ಬಸುಗುತ್ತ ಬಾಲವ ಬಡಿವಂತೆ ತಾವು ನಂಬರು, ನಂಬುವರನು ನಂಬಲೀಯರು, ತಾವು ಮಾಡರು, ಮಾಡುವರನು ಮಾಡಲೀಯರು. ಮಾಡುವ ಭಕ್ತರ ಕಂಡು ಸೈರಿಸಲಾರದವರ ಕೂಗಿಡೆ ಕೂಗಿಡೆ ನರಕದಲ್ಲಿಕ್ಕುವ ಕೂಡಲ ಸಂಗಮ ದೇವ

೨೦೦. ಕೊಲ್ಲೆನಯ್ಯ ಪ್ರಾಣಿಗಳ. ಮೆಲ್ಲೆನಯ್ಯ ಬಾಯಿಚ್ಛೆಗೆ. ಒಲ್ಲೆನಯ್ಯಾ ಪರಸತಿಯರ ಸಂಗವ. ಬಲ್ಲೆನಯ್ಯ ಮುಂದೆ ತೊಡಕುಂಟೆಂಬುದ. ಬಳ್ಳದ ಬಾಯಂತೆ ಒಂದೇ ಮನವ ಮಾಡಿ, ನಿಲ್ಲೆಂದು ನಿಲಿಸಯ್ಯ, ಕೂಡಲ ಸಂಗಮ ದೇವಾ.

೨೦೧. ಈ ಲೋಕದ ಭೀತರು ಆ ಲೋಕದ ಕಲಿಗಳು. ಸಾಲೋಕ್ಯ, ಸಾಮೀಪ್ಯ, ಸಾರೂಪ್ಯ, ಸಾಯುಜ್ಯರೆಲ್ಲರು ಅಜನಿತಂಗೆ ಸರಿಯೆ? ಮೂಜಗದಲ್ಲಿ ನಿರತರು ಕೂಡಲ ಸಂಗನ ಶರಣರು ತ್ರಿವಿಧವ ನರಿಯರು.

೨೦೨. ಹೊಲೆಯರ ಬಾವಿಯಲ್ಲೊಂದು ಎಲು ನಟ್ಟಿದ್ದರೆ ಹೊಲೆ ಹೊಲೆ ಎಂಬುದೀ ಲೋಕವೆಲ್ಲ. ಹಲವೆಲುವಿದ್ದ ಬಾಯಲ್ಲಿ ಅಲ್ಲದುದ ನುಡಿದರೆ, ಅದು ಹೊಲೆಯರ ಬಾಯಿಂದ ಕರ ಕಷ್ಟ ಕಾಣಾ ರಾಮನಾಥಾ.

೨೦೩. ಸತ್ಯದಲ್ಲಿ ನಡೆವುದು ಶೀಲ. ಸತ್ಯದಲ್ಲಿ ನುಡಿವುದು ಶೀಲ. ಸಜ್ಜನ ಸದಾಚಾರದಲ್ಲಿ ವರ್ತಿಸಿ, ಸತ್ಯವನರಿವುದೇ ಶೀಲ ಕಾಣಿರೋ ಮಹಾಲಿಂಗ ಗುರು ಶಿವ ಸಿದ್ಧೇಶ್ವರ ಪ್ರಭುವೇ.

೨೦೪. ನಾನೊಂದು ಸುರಗಿಯನೇನೆಂದು ಹಿಡಿವೆನು? ಏನ ಕಿತ್ತೇನನರಿವೆನು? ಜಗವೆಲ್ಲಾ ನೀನಾಗಿಪ್ಪೆ ಕಾಣಾ ರಾಮನಾಥಾ.

೨೦೫. ಒಂದಾಗಿಹವೈದು ಭೂತ. ಚಂದ್ರ, ಸೂರ್ಯ, ನಂದಿವಾಹನ ನಿಮ್ಮ ತನುವಲ್ಲವೇ? ನಿಂದು ನೋಡಲು ಜಗಭರಿತನಾಗಿಪ್ಪೆ. ಇನ್ನು ನೋಯಿಸುವೆನಾರನಯ್ಯ ರಾಮನಾಥಾ?

೨೦೬. ಕಾಯವೆಂಬ ಢಕ್ಕೆಯ ಮೇಲೆ, ಜೀವವೆಂಬ ಹಿಡಿಚೆಂಡು ಬೀಳೆ, ತ್ರಿವಿಧವ ತಾ, ತಾ, ಎಂಬಾಸೆ ಹಿಂ, ಡಿ, ಡಿಂ, ಡಿ, ಎನ್ನುತ್ತಿದೆ. ಇಂತೀ ಉಲುಹಿನ ಭೇದದಲ್ಲಿ ಹೊಲಬುದಪ್ಪದೆ ಗೆಲಬೇಕು ಕಾಲವೆಂಬ ಮಾರಿಯ, ಕಾಲಾಂತಕ ಭೀಮೇಶ್ವರ ಲಿಂಗವನರಿಯ ಬಲ್ಲಡೆ.

೨೦೭. ನೀನೀಶನೀಯದೆ ಮಾನೀಶನೀವನೇ? ನೀನೀಸುವ ಕಾರಣ ಮಾನೀಶನೀವನು. ಆ ಮಾನೀಶನ ಹೃದಯದೊಳು ಪೊಕ್ಕು, ನೀನೀಸುವ ಕಾರಣದಿಂದ ನೀನೇ ಶರಣೆಂಬೆನಯ್ಯ ರಾಮನಾಥಾ.

೨೦೮. ಒಲೆಯ ಬೂದಿಯ ಬಳಿಯಲು ಬೇಡ. ಒಲೆಯಂತೆ ಹೊಸಿಕೊಂಡಿಪ್ಪದು ಹುಸಿ. ಏನು ಫಲ ಮನದಲ್ಲಿ ಲೇಸಿಲ್ಲದನ್ನಕ್ಕ? ಒಂದನಾಡ ಹೋಗಿ ಒಂಬತ್ತನಾಡುವ ಡಂಭಕರ ಮೆಚ್ಚ ಕೂಡಲ ಸಂಗಮದೇವ.

೨೦೯. ನಾ ನೀನೆಂಬ ಅಹಂಕಾರ ತಲೆದೋರಿದಲ್ಲಿ ಅಟಮಟ ಕುಟಿಲ ಕುಹಕವೆಂಬ ಬಿರುಗಾಳಿ ಹುಟ್ಟಿತ್ತು. ಬಿರುಗಾಳಿ ಹುಟ್ಟಲೊಡನೆ ಜ್ಞಾನಜ್ಯೋತಿ ಕೆಟ್ಟಿತ್ತು. ಜ್ಞಾನಜ್ಯೋತಿ ಕೆಡಲೊಡನೆ, ನಾಬಲ್ಲೆ ಬಲ್ಲಿದರೆಂಬ ಅರುಹಿರಿಯರೆಲ್ಲರೂ ತಾಮಸಕ್ಕೊಳಗಾಗಿ ಸೀಮೆದಪ್ಪಿ ಕೆಟ್ಟರು ಕಾಣಾ ಗುಹೇಶ್ವರಾ.

೨೧೦. ಸಂಸಾರದಲ್ಲಿ ಹುಟ್ಟಿ ಮತ್ತೊಂದ ಬಯಸಲೇಕಯ್ಯ? ನಗುವುದು ನುಡಿವುದು ಶಿವಭಕ್ತರೊಡನೆ. ಸುಮ್ಮನೆ ಹಮ್ಮು ಬಿಮ್ಮಾಗಿರಲೇಕಯ್ಯ?............ನಮ್ಮ ಕೂಡಲ ಸಂಗನ ಶರಣರೊಡನೆ ಮನದೆರೆದು ಮಾತನಾಡುವುದಯ್ಯ.

೨೧೧. ಬಲೀಂದ್ರನ ಸಿರಿಯಿಂದಧಿಕರ ನಾನಾರನೂ ಕಾಣೆ. ಅಂತಹ ಸಂಪತ್ತು ಮೂರಡಿಗೈದದೆ ಹೋಯಿತ್ತು. ಕೆಡುವಂತಿದ್ದುದೇ ಕೌರವನ ರಾಜ್ಯ? ಮಡಿವಂತಿದ್ದಿತೇ ರಾವಣನ ಬಲ್ಲಾಳಿಕೆ? ಪರಸ್ತ್ರೀ ಲಕ್ಷ್ಮೀ ದೇವಿಗೊಲಿದು ಒಂದು ನಿಮಿಷದಲ್ಲಿ ಮಡಿದ. ಇದು ಸತ್ಯ, ಇದು ಸತ್ಯ. ಸಿರಿ ಸೌಕರ್ಯವೆಂಬುದು ಆಕಾಶದ ರಚನೆ. ಇದನರಿದು, ದೇಹದಿಚ್ಛೆಯನತಿಗಳೆದು, ನಮ್ಮ ಸಕಳೇಶ್ವರ ದೇವಂಗೋತು ನಾನೆಂಬ ಭ್ರಮೆಯನಳಿಯಾ ಮರುಳೇ.

೨೧೨. ಬಲ್ಲವರು ಬೆಸಗೊಂಡರೆ, ಮೆಲ್ಲನಾರೈದು ಮೆಲ್ಲನೆ ನುಡಿಯಬೇಕು. ಕಲ್ಲು ಕಲ್ಲ-ತಾಗಿದಂತೆ ಸೊಲ್ಲು ಬಿರಿಯಾದಡೆ, ಅಲ್ಲಿ ನಿಲ್ಲನಯ್ಯ ಅಖಂಡೇಶ್ವರ.

೨೧೩. ಎತ್ತಪ್ಪೆ ಶರಣಂಗೆ. ತೊತ್ತಪ್ಪೆ ಶರಣಂಗೆ. ಭೃತ್ಯನಾಗಿ ಸದ್ಭಕ್ತರ ಮನೆಯ ಬಾಗಿಲ ಕಾಯ್ದಿಪ್ಪ ಸೊಣಗನಪ್ಪೆ. ಕರ್ತಾರ, ನಿನಗೆ ಕರವೆತ್ತಿ ಪೊಡೆವಡುವ ಭಕ್ತರ ಮನೆಯ ಹಿತ್ತಿಲ ಬೇಲಿಯಾಗಿಪ್ಪೆನೈ ರಾಮನಾಥಾ.

೨೧೪. 'ಇತ್ತಬಾ' ಎನ್ನದವನ ಹತ್ತೆ ಹೊದ್ದಲು ಬೇಡ. 'ಇತ್ತಬಾ' ಎಂದ ಸದ್ಭಕ್ತನ ಮನೆಯ ಬಾಗಿಲ ಹತ್ತಿರ್ಪೆ ಕಾಣಾ ರಾಮನಾಥಾ.

೨೧೫. ಶಿವನೇ ದೈವ, ಕೊಲ್ಲದಿರ್ಪುದೇ ಧರ್ಮ, ಅಧರ್ಮದಿಂದ ಬಂದುದನೊಲ್ಲದಿಪ್ಪುದೇನೇಮ. ಆಶೆಯಿಲ್ಲದಿಪ್ಪುದೇ ತಪ. ರೋಷವಿಲ್ಲದಿಪ್ಪುದೇ ಜಪ. ವಂಚನೆ ಇಲ್ಲದಿಪ್ಪುದೇ ಭಕ್ತಿ. ಹೆಚ್ಚುಕುಂದಿಲ್ಲದಿಪ್ಪುದೇ ಸಮಯಾಚಾರ. ಇದು ಸತ್ಯ. ಶಿವ ಬಲ್ಲ. ಶಿವನಾಣೆ ಉರಿ ಲಿಂಗ ಪೆದ್ದಿ ಪ್ರಿಯ ವಿಶ್ವೇಶ್ವರಾ.

೨೧೬. ನುಡಿಯಲ್ಲಿ ಕರ್ಕಶವಿಲ್ಲದೆ, ನಡೆಯಲ್ಲಿ ಬೇಸರವೋಗದೆ, ಹಿಡಿದ ಭಕ್ತಿಯ ಕಡೆತನಕ ಬಿಡದೆ, ಬಡತನ ಎಡರು ಕಂಟಕಗಳು ಬಂದಲ್ಲಿ ಚಿಂತೆಯಿಂದ ಕಾಂತಿಗುಂದದೆ, ಅಡಿಗಡಿಗೆ 'ಶಿವಶಿವಾ' ಎಂಬ ನುಡಿಯ ಮರೆಯದಿರ್ಪ ಸದ್ಭಕ್ತರಿಗೆ ಬೇಡಿದ ಪದವಿಯನೀವ ನಮ್ಮ ಅಖಂಡೇಶ್ವರ.

೨೧೭. ಆಶೆಯಿಂದ ಬಿಟ್ಟು ಕಿರಿಯರಿಲ್ಲ. ನಿರಾಸೆಯಿಂದ ಬಿಟ್ಟು ಹಿರಿಯರಿಲ್ಲ. ದಯದಿಂದ ಬಿಟ್ಟು ಧರ್ಮವಿಲ್ಲ. ವಿಚಾರದಿಂದ ಬಿಟ್ಟು ಸಹಾಯಿಗಳಿಲ್ಲ. ಸದ್ಭ್ಯರಾಚಾರಕ್ಕೆ ಸಕಳೇಶ್ವರ ದೇವರಿಂದ ಬಿಟ್ಟು ದೈವವಿಲ್ಲ.

೨೧೮. ಸಾವು ತಡವಿಲ್ಲ, ನರಕ ದೂರವಿಲ್ಲ. ದೇಹದಿಚ್ಛೆಗೆ ಹರಿದು ಕೆಮ್ಮನೆ ಕೆಡಬೇಡ. ದುರ್ವಿಷಯವ ಬಿಡು ಬೇಗ. ಗುರುಪದವ ನಂಬು. ನಮ್ಮ ಸಿಮ್ಮಲಿಗೆಯ ಚೆನ್ನರಾಮನಲ್ಲಿ ನೀನು ಸುಖಿಯಪ್ಪೆ ಮರುಳೇ.

೨೧೯. ದಯೆಯಿರಬೇಕು ಸಕಲ ಪ್ರಾಣಿಗಳಲ್ಲಿ. ಸ್ವಯವಿರಬೇಕು ಸಕಲ ಗುಣಗಳಲ್ಲಿ. ನಯವಿರಬೇಕು ನುಡಿಗಡಣದಲ್ಲಿ. ಇಂತೀ ಗುಣ ವಿಲ್ಲದವರ ಕಂಡಡೆ ಸೊಗಸದಯ್ಯ ಎನಗೆ ಅಖಂಡೇಶ್ವರಾ.

೨೨೦. ಎಳ್ಳಿಲ್ಲದ ಗಾಣದಲ್ಲಿ ಎಣ್ಣೆಯುಂಟೆ? ಜೊಳ್ಳು ತೂರಿದಲ್ಲಿ ಬತ್ತ ಉಂಟೇ ? ಕಳ್ಳ ಹಾದರಿಗರ ಸಂಪಾದನೆ ಹೊಳ್ಳ ಕುಟ್ಟಿ ಕೈ ಹೊಟ್ಟಾದಂತೆ ಕಾಣಾ ರಾಮನಾಥಾ.

೨೨೧. ಕಾಯದ ಕಳವಳವ ಗೆಲಲರಿಯದವರು ಮಾಯಾಪಾಶದಲ್ಲಿ ಬಂಧನವುಳ್ಳ ಸಂಸಾರಿಗಳಹರಲ್ಲದೆ ಅವರು ಜ್ಞಾನಿಗಳಾಗಲರಿ ಯರು. ಅವರಿಗಿನ್ನೆಂದಿಗೆ ಮುಕ್ತಿಯಹುದೋ ನಿಜಗುರು ಸ್ವತಂತ್ರ ಸಿದ್ಧಲಿಂಗೇಶ್ವರಾ.

೨೨೨. ಶಮೆ ದಮೆ ವಿವೇಕ ವೈರಾಗ್ಯ ಸಂಪೂರ್ಣಭಾವ ಶಾಂತಿ ಕಾರುಣ್ಯ ಶ್ರದ್ಧೆ ಸತ್ಯ ಸದ್ಭಕ್ತಿ ಶಿವಜ್ಞಾನ ಶಿವಾನಂದ ಉದಯವಾದ ಮಹಾಭಕ್ತನ ಹೃದಯದಲ್ಲಿ ಶಿವನಿಪ್ಪ. ಆತನ ದರ್ಶನ ಸ್ಪರ್ಶನ ಸಂಭಾಷಣೆಯಿಂದ ಕೇವಲ ಮುಕ್ತಿಯಪ್ಪುದು ತಪ್ಪದಯ್ಯ ನಿಜ ಗುರು ಸ್ವತಂತ್ರ ಸಿದ್ಧ ಲಿಂಗೇಶ್ವರಾ.

೨೨೩. ವೇಷವ ಧರಿಸಿ ಭಾಷೆಯ ಕಲಿತು ದೇಶವ ಸುತ್ತಿ ಬಳಲಬೇಡ. ಜಗದೀಶನ ಪಾದವನೊಲಿದು ಪೂಜಿಸಿರಣ್ಣಾ. ಸವಿಯೂಟ ದಾಶೆಗೆ ಮನವೆಳಸಬೇಡ. ಪರಮೇಶನ ಪಾದವನೊಲಿದು ಪೂಜಿಸಿ ರಣ್ಣಾ. ತರ್ಕ ಶಾಸ್ತ್ರ ಆಗಮ ಜಾಲದ ಹೋರಟೆಯ ಹೊಗದೆ ಮೂಲ ಮಂತ್ರವ ಮರೆಯದೆ ಸ್ಮರಿಸಿರಣ್ಣಾ. ಸಂಸಾರಿಗಳ ಸಂಗ ದೊಳಗಿರಬೇಡ. ಸದ್ಭಾವರ ಸಂಗದೊಳಿರ್ದು ನಿತ್ಯವ ಸಾಧಿಸಿ ಕೊಳ್ಳಿರಣ್ಣಾ. ಪರರ ಯಾಚಿಸಿ ತನುವ ಹೊರೆಯಬೇಡ. ಶಿವ ನಿಕ್ಕಿದ ಭಿಕ್ಷೆಯೊಳಗಿರ್ದು ನಿಜಗುರು ಸ್ವತಂತ್ರ ಸಿದ್ಧಲಿಂಗೇಶ್ವರನ ನೋಡಿರಣ್ಣಾ.

೨೨೪. ಮೊದಲು ಹುಸಿ ಲಾಭ ದಿಟವೇ? ನಿರೀಕ್ಷಣೆ ಇಲ್ಲದೆ ಪರೀಕ್ಷೆಯುಂಟೇ? ಈಯವಸರದಂಗವ ಗೌರೇಶ್ವರ ಲಿಂಗ ನೀನೇ ಬಲ್ಲೆ.

೨೨೫. ಎಡರಡಸಿದಲ್ಲಿ, ಮೃಡ, ನಿಮ್ಮ ನೆನೆವರು. ಎಡರಡಸಿದ ವಿಪತ್ತು ಕಡೆಯಾಗಲೊಡನೆ, ಮೃಡ, ನಿಮ್ಮನೆಡಹಿಯೂ ಕಾಣರು ರಾಮನಾಥಾ.

೨೨೬. ಹೊನ್ನು ಹೆಣ್ಣು ಮಣ್ಣೆಂಬ ಸೊಕ್ಕನಿಕ್ಕಿಸಿ ಕೆಡಹಿದನಯ್ಯ ಜೀವರ ಮುಕ್ಕಣ್ಣ ಶಿವನು. ಕಾಲನಿಗೊಪ್ಪಿಸಿ, ಜಗವ ಠಕ್ಕಿಸಿ, ಮಿಕ್ಕು ಮೀರಿ ಹೋದನಯ್ಯ ಶಿವನು, ನಿಜಗುರು ಸ್ವತಂತ್ರ ಸಿದ್ಧ ಲಿಂಗೇಶ್ವರನು.

೨೨೭. ಜೀವವುಳ್ಳನ್ನಕ್ಕ ಕ್ರೋಧದ ಮೂಲ. ಕಾಯವುಳ್ಳನ್ನಕ್ಕ ಕಾಮದ ಮೂಲ. ಸಂಸಾರ ವ್ಯಾಪ್ತಿಯ ಮೋಹವುಳ್ಳನ್ನಕ್ಕ ಆಶೆಯ ಮೂಲ. ಇಂತಪ್ಪ ಆಶೆಯ ಕೆಡಿಸಿ ಮೋಕ್ಷದ ಲೇಸ ತೋರಿ ಬದುಕಿಸು ಕಪಿಲ ಸಿದ್ಧ ಮಲ್ಲಿಕಾರ್ಜುನಯ್ಯ.

೨೨೮. ಮಾರಿಯ ಪೂಜಿಸಿ, ಮಸಣಕ್ಕೆ ಹೋಗಿ, ಗೋರಿಗೊಳಿಸಿ, ಕುರಿಯ ಕೊರಳನೇ ಕೊಯ್ವುದೆಂಬ ಕ್ರೂರಕರ್ಮಿಗಳನವರ ಶಿವಭಕ್ತರೆನ್ನ ಬಹುದೆ? ಆರಯ್ಯದೆ ಅವರ ಮನೆಯಲುಂಡ ಭಕ್ತ, ಅಘೋರ ನರಕಕ್ಕಿಳಿವ ಕಾಣಾ ರಾಮನಾಥಾ.

೨೨೯. ಒಬ್ಬರ ಮನವ ನೋಯಿಸಿ, ಒಬ್ಬರ ಮನೆಯ ಘಾತವ ಮಾಡಿ, ಗಂಗೆಯ ಮುಳುಗಿದರೆ ಆಗುವುದೇನಯ್ಯ? ಚಂದ್ರನು ಗಂಗೆಯ ತಡಿಯಲ್ಲಿದ್ದರೇನು ಕಲಂಕ ಬಿಡದಾಯಿತ್ತಯ್ಯ. ಅದು ಕಾರಣ ಮನವ ನೋಯಿಸದವನೇ ಘಾತವ ಮಾಡದವನೇ ಪರಮ ಪಾವನ ನೋಡಾ ಕಪಿಲ ಸಿದ್ಧ ಮಲ್ಲಿಕಾರ್ಜುನಾ.

೨೩೦. ಹಾವಾಡಿಗನು, ಮೂಕೊರತಿಯು ತನ್ನ ಕಯ್ಯಲ್ಲಿ ಹಾವು. ಮಗನ ಮದುವೆಗೆ ಶಕುನವ ನೋಡ ಹೋಹಾಗ, ಇದಿರಲೊಬ್ಬ ಮೂಕೊರತಿಯ, ಹಾವಾಡಿಗನ, ಕಂಡು ಶಕುನ ಹೊಲ್ಲೆಂಬ ಚದುರನ

ನೋಡಾ. ತನ್ನ ಸತಿ ಮೂಕೊರತಿ, ತನ್ನ ಕಯ್ಯಲ್ಲಿ ಹಾವು, ತನ್ನ ಖಿನ್ನತೆಯನರಿಯದೆ ಅನ್ಯರನೆಂಬ ಕುನ್ನಿಯನೇನೆಂಬೆ ಕೂಡಲ ಸಂಗಮ ದೇವಾ.

೨೩೧. ಆಸೆ ಎಂಬ ಕೂಸನೆತ್ತಲು, ರೋಷವೆಂಬ ತಾಯಿ ಮುಂದೆ ಬಂದಿರ್ಪಳು ನೋಡಾ! ಇಂತೀ ಎರಡಿಲ್ಲದ ಕೂಸನೆತ್ತ ಬಲ್ಲಡೆ ಆತನೇ ಲಿಂಗೈಕ್ಯನು ಗುಹೇಶ್ವರಾ.

೨೩೨. ಜಾತಿಗಾರನ ಕಾಲು ಮುಳ್ಳುತಾಗಿ ನೊಂದಿತ್ತೆಂಬಂತೆ, ಸೊನೆಗಾರನ ಮನೆಯಲ್ಲಿ ಹೆಣ ಹೋಗಿ ಅಳುವಂತೆ, ಕನ್ನಗಳ್ಳನ ಮನೆಯಲ್ಲಿ ಬಟ್ಟಲು ಹೋಗಿ ಮರುಗುವಂತೆ, ಠಕ್ಕನ ಪೂಜೆಗೆ ಮೆಚ್ಚುವನೇ ನಮ್ಮ ಗುಹೇಶ್ವರನು?

೨೩೩. ಬೆಲ್ಲದ ಪುತ್ತಳಿಯ ಕೈಯಲ್ಲಿ ಹಿಡಿದು ಎಲ್ಲಿ ಚುಂಬಿಸಿದಡೂ ಇನಿದಹುದು. ಬಳ್ಳಿಯ ಬೇವಿನ ಹಣ್ಣ ಮೆಲ್ಲನೆ ಚುಂಬಿಸಿದಡೆ ಇನಿದಹುದೇ? ಎಲ್ಲ ಮಿಥ್ಯೆಯನು ಬಲ್ಲೆವೆಂದೆಂಬರು. ಅವರು ಸಲ್ಲದೆ ಹೋದರಯ್ಯಾ ಗುಹೇಶ್ವರಾ!

೨೩೪. ಲೋಕ ತನ್ನೊಳಗಾದ ಬಳಿಕ ಲೋಕದ ಸೊಮ್ಮು ತನಗೇಕಯ್ಯ? ಪರುಷ ತಾನಾದ ಬಳಿಕ ಸುವರ್ಣದ ಸೊಮ್ಮು ತನಗೇಕಯ್ಯ? ಧೇನು ತಾನಾದ ಬಳಿಕ ಅನ್ಯಗೋವಿನ ಸೊಮ್ಮು ತನಗೇಕಯ್ಯ ಕಪಿಲ ಸಿದ್ಧ ಮಲ್ಲಿಕಾರ್ಜುನಾ?

೨೩೫. ತೋರಿ ಕೆಡುವ ದೇಹ ನಾನೆಂದು ನಂಬದಿರಾ ಮನವೆ. ತೋರುವ ಅರಿವು ನಾನೆಂದು ನಂಬು ಕಂಡ್ಯಾ ಮನವೆ. ತೋರಿ ಕೆಡುವುದು ಮಾಯಾತ್ಮಕವು ಮನವೆ. ತೋರಿ ತೋರುವದದು ನಿರುಪಾಧಿಕ ನಿಜಾನಂದ ಕಪಿಲ ಸಿದ್ಧ ಮಲ್ಲಿಕಾರ್ಜುನ ಕಂಡ್ಯಾ ಮನವೆ.

೨೩೬. ಕಾಯ ನಾನೆಂದರೆ ಕರ್ಮಕಾಂಡಿ. ಸಕಲಕ್ರಿಯೆ ಈಶಾರ್ಪಣವೆಂದರೆ ಭಕ್ತಿಕಾಂಡಿ. ಸಕಲಕರ್ಮಸಾಕ್ಷಿ ಎಂದರೆ ಜ್ಞಾನಕಾಂಡಿ. ಕಾಂಡತ್ರಯವಿಲ್ಲದಖಂಡನ ತೋರಾ ಕಪಿಲ ಸಿದ್ಧ ಮಲ್ಲಿಕಾರ್ಜುನಾ.

೩೩೭. ಜಗವಾಧರಿಸಿದ ಕಣ್ಣು ತನ್ನ ತಗುಳ್ವ * ಕಾಯ ಕಾಣದು. ತಿಳಿವ ಅರಿವು ತನ್ನ ತಗುಳ್ವ ಭವದ ಮೊನೆಯ ಕಾಣದು. ವಿವೇಕ ಪರನಾದರೆ ಕಾಣದುದು ಕಾಣುವುದು ನೋಡಾ ಕಪಿಲ ಸಿದ್ಧ ಮಲ್ಲಿಕಾರ್ಜುನಾ.

೩೩೮. ದೇಹ ನಾನೆಂದು ನಂಬಿದೆ ಎಲೆ ಮನವೆ! ದೇಹದಲ್ಲಿಹ ಗುಣಂಗಳು ನಿನ್ನಲ್ಲಿಲ್ಲ ಕಂಡಯ್ಯ ಮನವೆ. ಪೃಥ್ವಿಯ ಗುಣ ಶಾಂತಿ, ಉದಕದ ಗುಣ ಸ್ವಾದ, ಅಗ್ನಿಯ ಗುಣ ಸರ್ವಭಕ್ಷಣ, ವಾಯುವಿನ ಗುಣ ನಿರ್ಮಲತ್ವ, ಆಕಾಶದ ಗುಣ ನಿರ್ಭಯಲು. ಈ ಪಂಚತತ್ವದ ಗುಣ ನಿನ್ನಲ್ಲಿರಲು ನೀನೆ ಪಂಚಮುಖ ನೋಡಾ ಮನವೆ, ಕಪಿಲ ಸಿದ್ಧ ಮಲ್ಲಿಕಾರ್ಜುನಾ.

೩೩೯. ಲಿಂಗವೇ ಅಂಗವಾಗಿಹೆನೆಂಬವನ ಭಾವ ಇದರಲ್ಲೇ ನಿಶ್ಚಯ ನೋಡಾ. ಮನವೇ, ನಿಂಪಾಸ್ತುತಿಗಳಲ್ಲಿ ಹರ್ಷರೋಷಗಳಿಲ್ಲದಿರ ಬೇಕು. ನೀಚಾನೀಚ ಗುಣವ ನೋಡದೆ ನಮ್ರ ಭಾಷಾವಂತ ನಾಗಬೇಕು. ಸರ್ವ ಜೀವಿಗಳ ತನ್ನಂತೆ ತಿಳಿದು ನೋಡಬೇಕು. ಸಂಶಯಾಸಂಶಯುವಳಿದು ನಿಶ್ಚಿಂತನಾಗಬೇಕು. ಆಕಾಶದ ಬೆಳಗಿನ ಬೆಳಗು ನೋಡಿ ಬೆಳಗುಮಯನಾಗಬೇಕು ನೋಡಾ, ಎಲೆ ಮನವೆ ಕಪಿಲ ಸಿದ್ಧ ಮಲ್ಲಿಕಾರ್ಜುನನಲ್ಲಿ.

೩೪೦. ತನು ಕೊಟ್ಟ ಬಳಿಕ ದೇಹವೆಲ್ಲಿಹದೊ? ಧನ ಕೊಟ್ಟ ಬಳಿಕ ಭೋಗ ಗಳೆಲ್ಲಿಹವೊ? ಇವೆಲ್ಲ ಬರಿಯ ಭ್ರಮೆ. ಕೊಟ್ಟೆನೆಂಬರ ಮುಖವ ನೋಡಲಾಗದು. ಕೊಟ್ಟು ಭಕ್ತನಾದೆನೆಂಬ ನುಡಿ ಸಮನಿಸದಯ್ಯ ಗುರುವೆ, ನಿಮ್ಮ ಶರಣರ ಬುದ್ಧಿಗೆ ಕಪಿಲ ಸಿದ್ಧ ಮಲ್ಲಿಕಾರ್ಜುನಾ.

---

* ವಚನ ೬೧ ನೋಡಿ,

೨೪೧. ಮಂತ್ರದೇಹಿ ತಾನಾದ ಬಳಿಕ ಮಲತ್ರಯಕ್ಕೆ ಒಳಗಾಗಬಹುದೇನಯ್ಯ? ಸರ್ವದೇಹ ಅಂತರ್ಯಾಮಿ ತಾನೆಂದರಿದ ಬಳಿಕ ಕೊಲ್ಲುವುದಕ್ಕೆ ಒಳಗಾಗಬಹುದೇನಯ್ಯ ಕಪಿಲಸಿದ್ಧ ಮಲ್ಲಿಕಾರ್ಜುನಾ.

೨೪೨. ಲಿಂಗಾಂಗ ಒಂದಾದುದಕ್ಕೆ ಇದೆ ಕುರುಹು ನೋಡಾ. ಅಂಗ ಗುಣಂಗಳ ಬಿಟ್ಟು ಲಿಂಗ ಗುಣಂಗಳಾದಡೆ, ಅದೇ ಲಿಂಗಾಂಗ ಸಾಮರಸ್ಯ. ಲಿಂಗ ಗುಣಗಳ ಬಿಟ್ಟು ಅಂಗ ಗುಣಗಳಾದಡೆ ಅದೇ ಯಮಲೋಕಸಾದೃಶ್ಯ. ಇದು ಪುಸಿಯಲ್ಲ, ಪುಸಿಯಲ್ಲ. ಪುಸಿಯಾದರೆ ನೀನೇಕೆ ಒಲಿಯಲಿಲ್ಲೆಮ್ಮಣ್ಣ ಬೊಮ್ಮಯ್ಯಂಗೆ ಕಪಿಲ ಸಿದ್ಧ ಮಲ್ಲಿಕಾರ್ಜುನಾ?

೨೪೩. ಕಬ್ಬುನದ ಶುನಕನ ತಂದು ಪರುಷವ ಮುಟ್ಟಿಸಲೊಡನೆ ಹೊನ್ನ ಶುನಕನಪ್ಪುದಲ್ಲದೆ ಪರುಷವಾಗಲರಿಯದು ನೋಡಾ! ಲೋಕದ ಮಾನವನ ತಂದು ಭಕ್ತನ ಮಾಡಿದೊಡೆ, ವೇಷಲಾಂಛನಿಯಹನಲ್ಲದೆ ಭಕ್ತನಾಗಲರಿಯ ನೋಡಾ. ಇದು ಕಾರಣ ಕೂಡಲ ಚೆನ್ನ ಸಂಗಮ ದೇವಯ್ಯ ಮಜ್ಜನಕ್ಕೆರೆವ ಭವಿಗಳನೆಂತು ಭಕ್ತರೆಂಬೆನಯ್ಯ?

೨೪೪. ಮಾಟವಿಲ್ಲದ ಕೂಟವದೇಕೋ? ಕೂಟವಿಲ್ಲದ ಮಾಟವದೇಕೋ? ಮಾಟಕೂಟವೆರಡರನುವನರಿಯಬೇಕು. ಸಟೆಯಿಲ್ಲದೆ, ದಿಟವ ರೂಢಿಸಿ ಸಯವಾಗಬೇಕು. ಮಾಟಕೂಟವೆರಡರನುಮತದಿಂದವೆ ಭಕ್ತಿರತಿಯಯ್ಯಾ ಕೂಡಲ ಚೆನ್ನ ಸಂಗಮ ದೇವಾ.

೨೪೫. ಸೂತಕವಿರಹಿತ ಲಿಂಗಾರಾಧನೆ ತನುಮೂರ್ತಿಯಾದ ಲಿಂಗೈಕ್ಯ. ಪಾತಕವಿರಹಿತ ಜಂಗಮಾರಾಧನೆ ಮನಮೂರ್ತಿಯಾದ ಲಿಂಗೈಕ್ಯ. ಸೂತಕ ಪಾತಕ ಹಿಂಗಿತ್ತಯ್ಯ ನಮ್ಮ ಕೂಡಲ ಚೆನ್ನ ಸಂಗಯ್ಯನಲ್ಲಿ ಲಿಂಗೈಕ್ಯವು.

೨೪೬. ಅರ್ಥಮದ, ಅಹಂಕಾರಮದ, ಕುಲಮದ, ಛಲಮದ ಬಿಡದು. ಸಮಯಾಚಾರ, ಸಮಯೋಚಿತ ಭಕ್ತಿ ಇನ್ನಾರಿಗೆಯೂ ಅಳವಡದು. ನೋಡಾ ! ಮಲಿನದ ಮಾರಿಯ ಮಿಂಚಿನ ಢಾಳಕರಿಗೆ ಸಮಯಾಚಾರದ ಭಕ್ತಿ ಎಲ್ಲಿಹದೋ ಅಯ್ಯ ಕೂಡಲ ಚೆನ್ನ ಸಂಗಮ ದೇವಾ?

೨೪೭. ಬ್ರಹ್ಮೋಪದೇಶವಾಯಿತ್ತೆಂದು ಬ್ರಹ್ಮದೊಡನೆ ಧಿಕ್ಕರಿಸಬೇಡ. ಕಾಲಜ್ಞಾನವಾಯಿತ್ತೆಂದು ಕರ್ಮವ ಹಳಿಯಬೇಡ. ಶಿವಜ್ಞಾನ ದೀಪ್ತಿ ತಲೆದೋರಿತ್ತೆಂದು ಶಿವಶರಣರೊಡನೆ ಧಿಕ್ಕರಿಸಬೇಡ. ಈ ತ್ರಿವಿಧದುತ್ಪತ್ತಿ ಸಲ್ಲದು. ಈ ವೇಶಿಯ ಮಕ್ಕಳಿಗೆ ನಾನೇನೆಂಬೆನಯ್ಯಾ ಕೂಡಲ ಚೆನ್ನ ಸಂಗಮ ದೇವಾ.

೨೪೮. ಒಡೆಯರು ಮನೆಗೆ ಬಂದುದ ಕಂಡು ತೆರಹು ಮರಹಾಗಿಪ್ಪನೆ ಭಕ್ತನು ? ಹೊನ್ನುಳ್ಳ ದೊರೆಯಂತೆ ಭಾವಿಸಿಕೊಂಡು ಬಿಮ್ಮನಲ್ಲಿ ಇಪ್ಪನೆ ಭಕ್ತ ? ಜಂಗಮಪ್ರೇಮಿಗೆ ಜಡಮತಿಯುಂಟೆ ಅಯ್ಯ ? ನಿಮ್ಮೊಕ್ಕುದ ಕೊಂಡು ಮಿಕ್ಕುದನರಿಯದಿರ್ಪ ಮಹಾ ಮಹಿಮರ ಪಾದವ ತೋರಯ್ಯ ಕೂಡಲ ಚೆನ್ನ ಸಂಗಮ ದೇವಾ.

೨೪೯. ಸತ್ಯವಿಲ್ಲದ ಭಕ್ತಿ ಹತ್ತುಸಾವಿರ ಕಾಲ ಮಾಡಿದಡೇನು, ನಿಷ್ಠೆಯಿಲ್ಲದ ಪೂಜೆಯನೇಸು ಕಾಲ ಮಾಡಿದಡೇನು, ಭಾವ ನೆಲೆಗೊಳ್ಳದನ್ನಕ್ಕ? ನಿಜವಿಲ್ಲದ ಪ್ರಸಾದವನೇಸು ಕಾಲ ಕೊಂಡಡೇನು? ಅಭ್ಯಾಸವಾಯಿತ್ತಲ್ಲದೆ ಸಹಜವಲ್ಲ ಸಮ್ಮತವಲ್ಲ. ಒಬ್ಬರ ಕಂಡೊಬ್ಬರು ಮಾಡುವರಲ್ಲದೆ ತಮ್ಮ ತಾವು ವಿಚಾರಿಸಿಕೊಳ್ಳಲರಿಯರು. ಇಂತೀ ವಿವರವನರಿಯದ ಅಜ್ಞಾನಿಗಳಿಗೆ ಭಕ್ತಮಾಹೇಶ್ವರರೆನಲಾಗದಯ್ಯ ಕೂಡಲ ಚೆನ್ನ ಸಂಗಮ ದೇವಾ ನೀ ಸಾಕ್ಷಿಯಾಗಿ ಛೀ ಎಂಬೆನು.

೨೫೦. ಸಜ್ಜನ ಸದ್ಭಾವಿ ಅನ್ಯರ ಕೈಯ್ಯಾಂತು ಬೇಡ. ಲಿಂಗವ ಮುಟ್ಟಿದ ಕೈ ಮಿಾಸಲು. ಕಂಗಳಲ್ಲಿ ಒಸೆದು ನೋಡ ಪರವಧುವ. ಮನದಲ್ಲಿ ನೆನೆಯ ಪರಹಿಂಸೆಯ. ಮಾನವರ ಸೇವೆಯ ಮಾಡ. ಲಿಂಗವ ಪೂಜಿಸಿ ಲಿಂಗವ ಬೇಡ. ಆ ಲಿಂಗದ ಹಂಗನೊಲ್ಲ. ಕೂಡಲ ಚೆನ್ನ ಸಂಗಮ ದೇವಾ ನಿಮ್ಮೊಳು ಸಮರಸೈಕ್ಯವನರಿದ ನಿಜಶರಣನು.

೨೫೧. ವೇಷವ ಹೊತ್ತು ದೋಷದಲ್ಲಿ ನಡೆದಡೆ, ದೋಷಕ್ಕೆ ವೇಷ ಭಂಡ. ವೇಷವ ಕಂಡು, ಮೊದಲೇ ಲೇಸೆಂದು ಕೊಂಡಾಡುವ ದೋಷಿಗಳ ನರಕದಲ್ಲಿಕ್ಕುವ ಕಾಣಾ ರಾಮನಾಥ.

೨೫೨. ಸಮತೆ ಎಂಬ ಕಂಥೆಯ ತೊಟ್ಟು, ಸುಬುದ್ಧಿ ಎಂಬ ಟೊಪ್ಪರವ ನಿಕ್ಕಿ, ವಿಷಯವೆಂಬ ಹಾವುಗೆಯ ಮೆಟ್ಟಿ, ತಮಂಧವೆಂಬ ಕುಳಿಯ ಬೀಳದೆ, ವೈರಾಗ್ಯವೆಂಬ ಕೊರಡನೆಡಹದೆ, ಮರವೆ ಎಂಬ ಚಳ ಮೆಟ್ಟದೆ, ಗುಹೇಶ್ವರನ ಶರಣ ಬಂದೆನು (ಭಕ್ತಿ ಭಿಕ್ಷೆಯನಿಕ್ಕು ಬಸವಣ್ಣ.)

೨೫೩. ಕುಡಿವ ನೀರೆನ್ನಬಹುದೆ ನೀರಲದ್ದುವಾಗ? ಅಡುವ ಕಿಚ್ಚೆನ್ನಬಹುದೆ ಮನೆಯ ಸುಡುವಾಗ? ಒಡಲು ತನ್ನದೆನ್ನಬಹುದೆ ಪುಣ್ಯ ಪಾಪವ ನುಂಬಾಗ? ಜೀವ ತನ್ನದೆನ್ನಬಹುದೆ ಮಿಕ್ಕು ಹೋಹಾಗ? ಇವ ನೊಡೆಬಡಿದು ಕಳೆ ಎಂದಾತನಂಬಿಗರ ಚೌಡಯ್ಯ.

೨೫೪. ಅಡವಿಯ ಹೊಗಿಸಿತ್ತು, ನೀರಲದ್ದಿತ್ತು, ಜಡೆಗಟ್ಟಿ ಭಸ್ಮವ ತೊಡಿಸಿತ್ತು, ಹಿಡಿದೆತ್ತಿ ಕೇಶವ ಕೀಳಿಸಿತ್ತು, ಹುಡಿ ಹುಚ್ಚುಗೊಳಿಸಿತ್ತು ಊರೊಳಗೆಲ್ಲ. ಬೆಡಗಿನ ಮಾಯೆಗೆ ನಾಚುವೆನೆಂದನಂಬಿಗರ ಚೌಡಯ್ಯ.

೨೫೫. ದೇಹಾರವ ಮಾಡುವ ಅಣ್ಣಗಳಿರಾ, ಅಣ್ಣಗಳಿರಾ, ಒಂದು ತುತ್ತು ಆಹಾರವನಿಕ್ಕಿರಯ್ಯ! ದೇಹಾರಕ್ಕೆ ಆಹಾರವೇ ನಿಚ್ಚಣಿಕೆ. ದೇಹಾರವ ಮಾಡುತ್ತ ಆಹಾರವನಿಕ್ಕದಿರ್ದೊಡೆ, ಆಹಾರ ವಿಲ್ಲೆಂದನಂಬಿಗರ ಚೌಡಯ್ಯ.

## (v) ಶರಣರ ಮಹತ್ತ್ವ

೨೫೬. ಮಡಕೆಯ ಮಾಡುವರೆ ಮಣ್ಣೇ ಮೊದಲು. ತೊಡಿಗೆಯ ಮಾಡುವರೆ ಹೊನ್ನೇ ಮೊದಲು. ಶಿವಪಥವನರಿವಡೆ ಗುರುಪಥವೇ ಮೊದಲು. ಕೂಡಲ ಸಂಗಮ ದೇವರನರಿವಡೆ ಶರಣರ ಸಂಗವೇ ಮೊದಲು.

೨೫೭. ಅರ್ಥರೇಖೆ ಇದ್ದಲ್ಲಿ ಫಲವೇನೋ ಆಯುಷ್ಯರೇಖೆ ಇಲ್ಲದನ್ನಕ್ಕ? ಹಂದೆಯ ಕೈಯಲ್ಲಿ ಚಂದ್ರಾಯುಧವಿದ್ದು ಫಲವೇನು? ಅಂಧಕನ ಕೈಯಲ್ಲಿ ದರ್ಪಣವಿದ್ದು ಫಲವೇನು? ಮರ್ಕಟನ ಕೈಯಲ್ಲಿ ಮಾಣಿಕವಿದ್ದು ಫಲವೇನು? ನಮ್ಮ ಕೂಡಲ ಸಂಗನ ಶರಣರ ಅರಿಯದವರ ಕೈಯಲ್ಲಿ ಲಿಂಗವಿದ್ದು ಫಲವೇನು ಶಿವಪಥವನರಿಯದನ್ನಕ್ಕ?

೨೫೮. ದೂಷಕನವನೊಬ್ಬ ದೇಶವ ಕೊಟ್ಟಡೆ, ಆಸೆ ಮಾಡಿ ಆತನ ಹೊರೆಯಲ್ಲಿರಬೇಡ. ಮಾದರ ಶಿವಭಕ್ತನಾದರೆ ಆತನ ಹೊರೆಯಲ್ಲಿ ಭೃತ್ಯನಾಗಿಪ್ಪುದು ಕರ ಲೇಸಯ್ಯ. ಕಾಡಸೊಪ್ಪು ತಂದು ಓಡಿನಲ್ಲಿ ಹುರಿದಿಟ್ಟು ಕೂಡಿಕೊಂಬುದೀಗ ನಮ್ಮ ಕೂಡಲ ಸಂಗನ ಶರಣರ.

೨೫೯. ಹಾವಿನ ಡೊಂಕು ಹುತ್ತಕ್ಕೆ ಸಸಿನ. ನದಿಯ ಡೊಂಕು ಸಮುದ್ರಕ್ಕೆ ಸಸಿನ. ನಮ್ಮ ಕೂಡಲ ಸಂಗನ ಶರಣರ ಡೊಂಕು ಲಿಂಗಕ್ಕೆ ಸಸಿನ.

೨೬೦. ಆನೆ ಆ ದಾರಿಯಲ್ಲಿ ಹೋಯಿತ್ತೆಂದರೆ ಆಡು ಆ ದಾರಿಯಲ್ಲಿ ಹೋಯಿತ್ತೆನ್ನಬಹುದೆ? ಸಂಗನ ಶರಣರಿಗೆ ಆನು ಸರಿ ಎಂದು ಗಳಹ ಬಹುದೆ? ಜಂಗಮಕ್ಕೆ ಮಾಡುವ ಭಕ್ತರಿಗೆ ಆನು ಸರಿಯೆ ಹೇಳಾ ಕೂಡಲ ಸಂಗಮ ದೇವಾ.

೨೬೧. ಅರಸರ ಮನೆಯಲ್ಲಿ ಅರಸಿಯಾಗಿಪ್ಪುದರಿಂದ ಭಕ್ತರ ಮನೆಯಲ್ಲಿ ತೊತ್ತಾಗಿಪ್ಪುದು ಕರ ಲೇಸಯ್ಯಾ! ತಾರೌ ಅಗ್ಗವಣಿಯ, ನೀಡೌ ಪತ್ರೆಯ, ಲಿಂಗಕ್ಕೆ ಬೋನವ ಹಿಡಿಯೌ ಎಂಬರು. ಕೂಡಲ ಸಂಗನ ಮಹಾ ಮನೆಯಲ್ಲಿ ಒಕ್ಕುದನುಣ್ಣೌ ತೊತ್ತೇ ಎಂಬರು.

೨೬೨. ಲಾಂಛನವ ಕಂಡು ನಂಬುವೆ. ಅವರಂತರಂಗವ ನೀವೇ ಬಲ್ಲಿರಿ. ತೊತ್ತಿಂಗೆ ತೊತ್ತುಗೆಲಸವಲ್ಲದೆ ಅರಸರ ಸುದ್ದಿ ಎಮಗೇಕಯ್ಯ? ರತ್ನಮೌಕ್ತಿಕದಚ್ಚು ಕೂಡಲ ಸಂಗಮ ದೇವಾ ನಿಮ್ಮ ಶರಣರು.

೨೬೩. ಆರಾರ ಮನದಲ್ಲಿ ಏನೇನಿಹುದೆಂಬರರಿಯೆ. ಒಳ್ಳಿಹರೆಂದೆನಲಮ್ಮೆ ಹೊಲ್ಲಹರೆಂದೆನಲಮ್ಮೆ. ಶಿವಭಕ್ತರಾದಕಾರಣ ಜಂಗಮವೇ ಲಿಂಗ ಕೂಡಲ ಸಂಗಮ ದೇವಾ.

೨೬೪. ಸಂಗಸಹಿತ ಶರಣರು ಬಂದರೆ ನಂಬುವುದೆನ್ನ ಮನವು, ನಚ್ಚುವುದೆನ್ನ ಮನವು. ಹಾವು ನೇಣೆಂಬ ಭ್ರಾಂತುಳ್ಳನ್ನಕ್ಕ ನಾನು ಭಕ್ತನೆಂತಪ್ಪೆನು. ಅಂಗ ಲಿಂಗಸಹಿತವಾಗಿ ಬಂದರೆ ಸಂಗ ನೀನೆಂದು, ಮತ್ತೆ ಮನದಲ್ಲಿ ಸಂದೇಹ ಹೊಳೆದರೆ, ಬೆಂದೆನಲ್ಲಾ ನಾನು ಕೂಡಲ ಸಂಗಮ ದೇವಾ.

೨೬೫. ಬಂಜೆ ಬೇನೆಯನರಿಯದಂತೆ ಒಬ್ಬರೊಂದ ನುಡಿವಿರಿ ಕೇಳಿರಯ್ಯ? ಎನಗೆ ಆಯಷ್ಯ ಭವಿಷ್ಯ ಎನ್ನ ಭಕ್ತರು ಕಂಡಯ್ಯ! ಎನಗೆ ಆಯುಷ್ಯ ಭವಿಷ್ಯ ಎನ್ನ ಪ್ರಮಥರು ಕಂಡಯ್ಯ! ಕೂಡಲ ಸಂಗನ ಶರಣರು ಮುಖಲಿಂಗಿಗಳಯ್ಯ.

೨೬೬. ದೂರದಿಂದ ಬಂದ ಜಂಗಮವನಯ್ಯಗಳೆಂದು, ಸಾರಿದ್ದ ಜಂಗಮವ ಪರಿಚಾರಕನೆಂಬ ಕೇಡಿಂಗೆ ಬೆರಗಾದೆನಯ್ಯಾ! ಸಾರಿದ್ದವರು ದೂರದವರು ಎಂದು ಬೇರೆ ಮಾಡಿ ಕಂಡರೆ ಕೂಡಲ ಸಂಗಮ ದೇವ ಸಿಂಗಾರದ ಮೂಗ ಕೊಯ್ಯದೆ ಮಾಣ್ಬನೇ!

೨೬೭. ತಂದೆ ಮಕ್ಕಳಿಗೆ ಬುದ್ಧಿಯ ಹೇಳುವಲ್ಲಿ ತಪ್ಪಿಂಗೆ ಮುನಿವನಲ್ಲದೆ ಪ್ರಾಣಕ್ಕೆ ಮುನಿಯ. ಲಿಂಗವಂತನು ಲಿಂಗವಂತರಿಗೆ ಬುದ್ಧಿಯ ಹೇಳುವಲ್ಲಿ ಅವರ ಅವಗುಣಕ್ಕೆ ಮುನಿವನಲ್ಲದೆ ಲಾಂಛನಕ್ಕೆ ಮುನಿಯ. ಲಿಂಗಭಕ್ತನು ಲಿಂಗಪಥವ. ಹೇಳಿದರೆ ಮಚ್ಚರಿಸು ವವರ ಮೆಚ್ಚ ಕೂಡಲ ಸಂಗಮದೇವ.

೨೬೮. ಗುರೂಪದೇಶ ಮಂತ್ರವೈದ್ಯ. ಜಂಗಮೋಪದೇಶ ಶಸ್ತ್ರವೈದ್ಯ ನೋಡಾ! ಭವರೋಗವ ಕಳೆವ ಪರಿಯ ನೋಡಾ! ಕೂಡಲ ಸಂಗನ ಶರಣರ ಅನುಭಾವ ಮಡಿವಾಳನ ಕಾಯಕದಂತೆ.

೨೭೯. ಅಡಿಗಡಿಗೆ ದೇವರಾಣೆ, ಅಡಿಗಡಿಗೆ ಭಕ್ತರಾಣೆ, ಅಡಿಗಡಿಗೆ ಗುರುವಿನಾಣೆ ಎಂಬ ವಚನ ಹೊಲ್ಲ. ಮುಂದೆ ಪಥಕ್ಕೆ ಸಲ್ಲರು. ಆದಿಯಿಂದ ಬಂದ ವಚನವೆಂದು ಶರಣರ ಕೂಡೆ ಸರಸವಾಡಿದರೆ, ನಗುತಲಿರಿದು ಕೊಂಡರೆ ಅಲಗು ನೆಡದಿಹುದೇ ಕೂಡಲ ಸಂಗಮ ದೇವಾ.

೨೮೦. ಅರಗಿನ ಪುತ್ಥಳಿಯ ಉರಿಯ ನಾಲಗೆ ಹೊಯಿದು ಮಾತಾಡುವ ಸರಸ ಬೇಡ. ಬೆಣ್ಣೆಯ ಬೆನಕಂಗೆ ಕೆಂಡದುಂಡಲಿಗೆಯ ಮಾಡಿ ಚಲ್ಲವಾಡಿದರೆ ಹಲ್ಲು ಹೋಹುದು. ಕೂಡಲ ಸಂಗನ ಶರಣರೊಡನೆ ಸರಸವಾಡಿದರೆ ಅದು ವಿರಸ ಕಾಣಿರಯ್ಯ.

೨೮೧. ಹಾವಿನ ಹೆಡೆಗಳ ಕೊಂಡು ಕೆನ್ನೆಯ ತುರಿಸಿಕೊಂಬಂತೆ, ಉರಿವ ಕೊಳ್ಳಿಯ ಕೊಂಡು ಮಂಡೆಯ ಸಿಕ್ಕ ಬಿಡಿಸುವಂತೆ, ಹುಲಿಯ ಮೀಸೆಯ ಹಿಡಿದುಕೊಂಡು ಒಲಿದುಯ್ಯಲನಾಡುವಂತೆ, ಕೂಡಲ ಸಂಗನ ಶರಣರೊಡನೆ ಮರೆದು ಸರಸವಾಡಿದರೆ ಸುಣ್ಣದ ಕಲ್ಲು ಮಡಿಲಲ್ಲಿ ಕಟ್ಟಿಕೊಂಡು ಮಡುವ ಬಿದ್ದಂತೆ.

೨೮೨. ವೇದ ನಡುಗಿತ್ತು, ಶಾಸ್ತ್ರವಗಲಿ ಕೆಲಕ್ಕೆ ಸಾರಿದುದಯ್ಯ. ತರ್ಕ ತರ್ಕಿಸಲರಿಯದೆ ಮೂಗುವಟ್ಟಿದ್ದಿತಯ್ಯ. ಆಗಮ ಹೊರತೊಲಗಿ ಅಗಲಿದ್ದಿತಯ್ಯ, ನಮ್ಮ ಕೂಡಲ ಸಂಗಯ್ಯನು ಚೆನ್ನಯ್ಯನ ಮನೆಯ ಲುಂಡ ಕಾರಣ.

೨೮೩. ಆವಾವ ಭಾವದಲ್ಲಿ ಶಿವನ ನಂಬಿದ ಶರಣರು ಎಂತಿದ್ದರೇನಯ್ಯ? ಆವಾವ ಭಾವದಲ್ಲಿ ಶಿವನ ನಂಬಿದ ಮಹಿಮರು ಎಂತಿದ್ದರೇನಯ್ಯ? ಸುಚರಿತ್ರರೆಂತಿದ್ದರೇನಯ್ಯ? ಅವಲೋಹವ ಕಳೆವ ಪರುಷವೆಂತಿದ್ದ ರೇನಯ್ಯಾ? ಕೂಡಲ ಸಂಗನ ಶರಣರು ರಸದ ವಾರಿಧಿಗಳು ಎಂತಿದ್ದರೇನಯ್ಯ?

೨೭೪. ಜ್ಞಾನದ ಬಲದಿಂದ ಅಜ್ಞಾನದ ಕೇಡು ನೋಡಯ್ಯ! ಜ್ಯೋತಿಯ ಬಲದಿಂದ ತಮಂಧದ ಕೇಡು ನೋಡಯ್ಯ! ಸತ್ಯದ ಬಲದಿಂದ ಅಸತ್ಯದ ಕೇಡು ನೋಡಯ್ಯ! ಪರುಷದ ಬಲದಿಂದ ಅವಲೋಹದ ಕೇಡು ನೋಡಯ್ಯ! ಕೂಡಲ ಸಂಗನ ಶರಣರನುಭಾವದಿಂದ ಎನ್ನ ಭವದ ಕೇಡು ನೋಡಯ್ಯ.

೨೭೫. ಗಂಗೆಯೊಡನಾಡಿದ ಗಟ್ಟ ಬೆಟ್ಟಂಗಳು ಕೆಟ್ಟ ಕೇಡ ನೋಡಯ್ಯ! ಅಗ್ನಿಯೊಡನಾಡಿದ ಕಾಷ್ಠಂಗಳು ಕೆಟ್ಟ ಕೇಡ ನೋಡಯ್ಯ! ಜ್ಞಾನಿಯೊಡನಾಡಿದ ಅಜ್ಞಾನ ಕೆಟ್ಟ ಕೇಡ ನೋಡಯ್ಯ! ಇಂತೀ ಪರಶಿವಮೂರ್ತಿ ಹರನೇ, ನಿಮ್ಮ ಜಂಗಮಲಿಂಗದೊಡನಾಡಿ ಎನ್ನ ಭವಾದಿ ಭವಂಗಳು ಕೆಟ್ಟ ಕೇಡ ನೋಡಾ ಚೆನ್ನ ಮಲ್ಲಿಕಾರ್ಜುನಾ!

೨೭೬. ಮರುಳ ಕಂಡ ಕನಸಿನ ಪರಿಯಂತೆ ಶಿವಾಚಾರ. ಕರಿ ಕನ್ನಡಿಯೊಳಡಗಿದಂತಯ್ಯಾ! ಗುಣಿಯವಗುಣಿಯೊಡನಾಡಿದರೆ ಅದೇ ಆತನ ಕರ್ಮದ ಫಲ ನೋಡಾ! ಕೂಡಲ ಸಂಗಮ ದೇವನ ಶರಣರನುಭಾವ ಭವದುಃಖಿಗಳಿಗೆ ವೇದ್ಯವಾಗದು.

೨೭೭. ಉಂಬ ಬಟ್ಟಲು ಬೇರೆ ಕಂಚಲ್ಲ. ನೋಡುವ ದರ್ಪಣ ಬೇರೆ ಕಂಚಲ್ಲ. ಭಾಂಡ ಭಾಜನ ಒಂದೇ. ಬೆಳಗೆ ಕನ್ನಡಿ ಎನಿಸಿತ್ತಯ್ಯಾ. ಅರಿದರೆ ಶರಣ, ಮರೆದರೆ ಮಾನವ. ಮರೆಯದೆ ಪೂಜಿಸು ಕೂಡಲ ಸಂಗನ.

೨೭೮. ಕೆರೆ ಹಳ್ಳ ಬಾವಿಗಳು ಮೈದೆಗೆದರೆ ಗುಳ್ಳೆ, ಗೊರಚೆ, ಚಿಪ್ಪು ಕಾಣಬಹುದು. ವಾರಿಧಿ ಮೈದೆಗೆದರೆ ರತ್ನಂಗಳ ಕಾಣಬಹುದು. ಕೂಡಲ ಸಂಗನ ಶರಣರು ಮನದೆರೆದು ಮಾತನಾಡಿದರೆ ಲಿಂಗವ ಕಾಣಬಹುದು.

೨೭೯. ಅಯ್ಯಾ ನಿಮ್ಮಲ್ಲಿ ಆಯುಷ್ಯವ ಬೇಡುವೆನೆ? ಸಂಸಾರಕ್ಕಾಂಜುವೆನಯ್ಯ! ನಿಮ್ಮಲ್ಲಿ ಶ್ರೀಯ ಬೇಡುವೆನೆ? ಪರಾಂಗನೆಯ ಪಾಪ! ಅಯ್ಯ ನಿಮ್ಮಲ್ಲಿ ಮುಕ್ತಿಯ ಬೇಡುವೆನೆ? ಅದು ನಿಮ್ಮ ಪದವಿ. ಸಕಳೇಶ್ವರದೇವಾ, ನಾನೇನುವನೊಲ್ಲೆ. ನಿಮ್ಮ ಶರಣರ ಸಂಗವುಳ್ಳರೆ ಸಾಕು.

೨೮೦. ವಿಧಿ ನಿಷೇಧಗಳಿಲ್ಲದನಾದಿ ನೀ ನೋಡಯ್ಯ. ಜಪತಪವಿಲ್ಲದ ಮಹಾಮುನಿ ನೋಡಯ್ಯ. ಇಹಪರ ಸುಖದುಃಖಾತೀತನಯ್ಯ ನಿಮ್ಮ ಶರಣ ಕಪಿಲ ಸಿದ್ಧ ಮಲ್ಲಿಕಾರ್ಜುನಾ.

೨೮೧. ಕಲ್ಪವೃಕ್ಷ ಮರವೆನ್ನಬಹುದೇ? ಕಾಮಧೇನು ಪಶುವೆನ್ನಬಹುದೇ? ಪರುಷ ಪಾಷಾಣವೆನ್ನಬಹುದೇ? ನಮ್ಮ ಕಪಿಲ ಸಿದ್ಧ ಮಲ್ಲಿಕಾರ್ಜುನನ ನುಂಗಿದವರೆಲ್ಲ ಮಾನವರೆನ್ನಬಹುದೇ?

೨೮೨. ಶರಣನೆನಿಸಿಕೊಂಬುದು ಅರಿದರಿದು ನೋಡಯ್ಯ. ಸತ್ಯವುಳ್ಳ ಸದ್ಭಕ್ತರೊಳಗಡಗಿರ್ದು ತನ್ನ ಕುರುಹು ಲೋಕಕ್ಕೆ ತೋರದಂತಿರಬೇಕು. ಸಕಲ ಪ್ರಾಣಿಗಳ ಮೇಲೆ ರೋಷವಿಲ್ಲದಿರಬೇಕು. ಇಂತಪ್ಪ ಶಿವಶರಣರಲ್ಲಿ ಸನ್ನಿಹಿತನಯ್ಯಾ ನಮ್ಮ ಕೂಡಲ ಚೆನ್ನ ಸಂಗಮ ದೇವ.

೨೮೩. ಹರಿವ ನದಿಗೆ ಮೈಯೆಲ್ಲ ಕಾಲು. ಉರಿವಗ್ನಿಗೆ ಮೈಯೆಲ್ಲ ನಾಲಗೆ. ಬೀಸುವ ಗಾಳಿಗೆ ಮೈಯೆಲ್ಲ ಕೈ. ಗುಹೇಶ್ವರಾ, ನಿಮ್ಮ ಶರಣಂಗೆ ಸರ್ವಾಂಗ ಲಿಂಗ.

೨೮೪. ಬಿಸಜತಂತುವಿನ ಸಂಚದಿಂದ ಮದಗಜ ಬಂಧವಡೆಯಬಲ್ಲುದೇ? ತರಗೆಲೆ ಮುಸುಕಿದಡೆ ದಾವಾನಲ ಕೆಡಬಲ್ಲುದೇ? ಮಂಜಿನ ಫೌಜು ಸೂರ್ಯನ ಮುತ್ತಬಲ್ಲುದೇ? ನಿಮ್ಮನರಿದಾತಂಗೆ ಪುಣ್ಯ ಪಾಪಕರ್ಮ ಲೇಪಿಸಬಲ್ಲುದೇ ನಿಜಗುರು ಸ್ವತಂತ್ರ ಸಿದ್ಧ ಲಿಂಗೇಶ್ವರಾ?

# (vi) ಮುಕ್ತಿ, ಬಯಲು

೫. ರತಿಯಿಂದ ರತ್ನ, ಗತಿಯಿಂದ ವಾದ್ಯ, ಸದ್ಗತಿಯಿಂದ ಮುಕ್ತಿ, ನಿರ್ಗತಿಯಿಂದ ವಿರಕ್ತಿ. ಈ ನಾಲ್ಕರ ಮಿತಿಯ ತಿಳಿಯಬೇಕೆಂದ ಅಂಬಿಗರ ಚೌಡಯ್ಯ.

. ಲೋಕವಿಡಿದು ಲೋಕವ ಹಿಂಗದಂತಿಪ್ಪೆನು. ಆಕಾರವಿಡಿದು ಸಾಕಾರ ಸಹಿತ ನಡೆವೆನು. ಹೊರಗೆ ಬಳಸಿ, ಒಳಗೆ ಮರೆದಂತಿಪ್ಪೆನು. ಬೆಂದ ನುಲಿಯಂತೆ ಹುರಿಗುಂದದಂತಿಪ್ಪೆನು. ಎನ್ನ ದೇವ ಚೆನ್ನ ಮಲ್ಲಿಕಾರ್ಜುನಯ್ಯಾ, ಹತ್ತರೊಳಗೆ ಹನ್ನೊಂದಾಗಿ ನೀರ ತಾವರೆಯಂತಿಪ್ಪೆನು.

. ಮರದೊಳಗಣ ಕಿಚ್ಚು ಮರನ ಸುಟ್ಟಂತಾದೆನಯ್ಯಾ. ಬಯಲ ಗಾಳಿಯ ಪರಿಮಳ ನಾಸಿಕವನಪ್ಪಿದಂತಾದೆನಯ್ಯಾ. ಕರುವಿನ ಬೊಂಬೆಯನುರಿಕೊಂಡಂತಾದೆನಯ್ಯಾ. ಗುಹೇಶ್ವರನೆಂಬ ಲಿಂಗವ ಪೂಜಿಸಿ ಭವಗೆಟ್ಟೆನಯ್ಯಾ.

. ಒಳಗೆ ನೋಡಿಹೆನೆಂದರೆ ಒಳಗು ನಿರಾಳ. ಹೊರಗು ನೋಡಿಹೆನೆಂದರೆ ಹೊರಗು ನಿರಾಳ. ಹೊಲದಲ್ಲಿ ಆವಿಲ್ಲ, ಮನೆಯಲ್ಲಿ ಕರುವಿಲ್ಲ. ನೆಲಹಿನ ಮೇಲಣ ಬೆಣ್ಣೆ ಇದು ದಿಟವೋ! ನಾರಿವಾಣದ ಕಾಯೊಳಗಣ ತಿಳಲು ಒಡೆಯದೆ ನಿಲಬಲ್ಲರೆ ಜಡವು ಗುಹೇಶ್ವರಾ!

. ಕಂಗಳು ತುಂಬಿದ ಬಳಿಕ ನೋಡಲಿಲ್ಲ, ಕಿವಿ ತುಂಬಿದ ಬಳಿಕ ಕೇಳಲಿಲ್ಲ, ಕೈಗಳು ತುಂಬಿದ ಬಳಿಕ ಪೂಜಿಸಲಿಲ್ಲ, ಮನ ತುಂಬಿದ ಬಳಿಕ ನೆನೆಯಲಿಲ್ಲ, ಮಹಾಂತ ಕೂಡಲ ಸಂಗಮ ದೇವನ.

. ದಶದಿಕ್ಕು ಧರೆ ಗಗನ ಎಂಬುದ ನಾನರಿಯೆನಯ್ಯಾ! "ಲಿಂಗ ಮಧ್ಯೇ ಜಗತ್ಸರ್ವಂ" ಎಂಬುದನರಿಯೆನಯ್ಯಾ ಲಿಂಗ ಸೋಂಕಿನ ಸುಖದೊಳಗೆ.

೨೯೧. ಪಂಚಭೂತಸಂಗದಿಂದ ಜ್ಯೋತಿಯಾಯಿತ್ತು. ಪಂಚಭೂತ ಸಂಗದಿಂದ ಕರ್ಪುರವಾಯಿತ್ತು. ಎರಡರ ಸಂಗವೇನಾಯಿತ್ತು ಹೇಳಾ ವಾಙ್ಮನಕ್ಕತೀತ ಗುಹೇಶ್ವರಾ!

೨೯೨. ಎರಡೆಂಬರಯ್ಯ ಕರಣದ ಕಂಗಳಲ್ಲಿ ನೋಡಿದವರು! ಎರಡುವನತಿಗಳೆದು ಒಂದೆಂಬರಯ್ಯ! ಕಾಮಿಸುವುದಿಲ್ಲಾಗಿ, ಕಲ್ಪಿಸುವುದಿಲ್ಲಾಗಿ ಭಾವಿಸುವದಿಲ್ಲಾಗಿ, ಬಯಸುವದಿಲ್ಲಾಗಿ, ಗುಹೇಶ್ವರನೆಂಬುದಿಲ್ಲಾಗಿ ಮುಂಡೆ ಬಯಲೆಂಬುದಿಲ್ಲ.

೨೯೩. ಅರಿದೆನೆಂಬುದು ತಾ ಬಯಲು, ಅರಿಯೆನೆಂಬುದು ತಾ ಬಯಲು. ಅರುಹಿನ ಕುರುಹಿನ ಮರವೆಯೊಳಗೆ ಗುಹೇಶ್ವರನೆಂಬುದು ತಾ ಬಯಲು.

೨೯೪. ಹೊಸ ಮುತ್ತಿನ ಸುಪ್ಪಾಣಿಯಂತೆ ಲಿಂಗೈಕ್ಯವು. ಸ್ಫಟಿಕದ ಘಟದೊಳಗಣ ಪ್ರಭೆಯಂತೆ ಲಿಂಗೈಕ್ಯವು. ವಾಯುವಿನ ಸಂಚದ ಪರಿಮಳದ ನಿಲವಿನಂತೆ ಲಿಂಗೈಕ್ಯನ ಸಂಬಂಧವಿದು ಗುಹೇಶ್ವರಾ.

೨೯೫. ನೀ ನಾನೆಂಬ ಭಾವವಾರಿಂದಾಯಿತ್ತು ಹೇಳಾ? ನೀನೆಂಬುದು ಅಜ್ಞಾನ. ನಾನೆಂಬುದು ಮಾಯಾಧೀನ. ನೀನೆನ್ನದೆ ನಾನೆನ್ನದೆ ಇಪ್ಪ ಸುಖವ ಭಿನ್ನವಿಲ್ಲದೆ ಅರಿಯ ಬಲ್ಲರೆ ಆ ಸುಖವು ನಿಮಗರ್ಪಿತ ಕಾಣಾ ಗುಹೇಶ್ವರಾ.

೨೯೬. ಲೋಕದ ಹಚ್ಚು ಮಚ್ಚು ಬಿಟ್ಟು ನಿಶ್ಚಿಂತವಾಯಿತ್ತು. ಏನು ಹತ್ತಿತೆಂದರಿಯೆನಯ್ಯಾ! ಏನು ಹೊತ್ತಿತೆಂದರಿಯೆನಯ್ಯಾ! ಗುಹೇಶ್ವರನೆಂಬ ಗ್ರಹ ಒಳಕೊಂಡಿತ್ತಾಗಿ ನಾನೇನೆಂಬುದರಿಯೆನಯ್ಯಾ!

೨೯೭. ನಿಜವನರಿದ ನಿಶ್ಚಿಂತನೇ, ಮರಣವ ಗೆಲಿದ ಮಹಂತನೇ, ಘನವ ಕಂಡ ಮಹಿಮನೇ, ಪರವನೊಳಕೊಂಡ ಪರಿಣಾಮಿಯೇ, ಬಯಲ ಒದಗಿದ ಭರಿತನೇ, ಗುಹೇಶ್ವರ ಲಿಂಗ ನಿರಾಳವನೊಳಕೊಂಡ ಸಹಜನೇ.

೮. ನೆನಹು ಸತ್ತಿತ್ತು, ಭ್ರಾಂತು ಬೆಂದಿತ್ತು, ಅರಿವು ಮರೆಯಿತ್ತು, ಕುರುಹುಗೆಟ್ಟಿತ್ತು. ಗತಿಯನರಸಲುಂಟೆ? ಮತಿಯನರಸಲುಂಟೆ? ಅಂಗವೆಲ್ಲಾ ನಷ್ಟವಾಗಿ ಲಿಂಗಲೀನವಾಯಿತ್ತು. ಕಂಗಳಂಗದ ಕಳೆಯ ಬೆಳಗಿನ ಭಂಗ ಹಿಂಗಿತ್ತು ಗುಹೇಶ್ವರಾ.

೯. ಅರಿಯಲಿಲ್ಲದ ಅರಿವು, ಮರೆಯಲಿಲ್ಲದ ಮರಹು, ನೋಡಲಿಲ್ಲದ ಬೆರಗು, ನಿಂದುದು ಕೂಡಲ ಚೆನ್ನ ಸಂಗಯ್ಯ ಲಿಂಗೈಕ್ಯಂಗೆ.

೦. ಬೆಳಗು ಕತ್ತಲೆಯ ನುಂಗಿ ಒಳಗೆ ನಾನೊಬ್ಬನೇ ಅದೆ. ಕಾಂಬ ಕತ್ತಲೆಯ ಕಳೆದುಳಿದು ನಿಮಗಾನು ಗುರಿಯಾದೆ ಗುಹೇಶ್ವರಾ.

---

# ಶಬ್ದಕೋಶ

ಸಂ.=ವಚನ ಸಂಗ್ರಹ

## ಅ

| | | |
|---|---|---|
| ಅಕ್ಕೆ | ೪೦೨ | ದುಃಖ (ಅಳ್ಕೆ) |
| ಅಗ್ಗವಣಿ | ೧೧ | ಪವಿತ್ರವಾದ ನೀರು |
| ಅಟಮಟ | ಸಂ. ೨೦೯ | ಮೋಸ; ವಂಚನೆ |
| ಅದರು | ಸಂ. ೩೨ | ಏರು; ಹತ್ತು |
| ಅಡಸು | ಸಂ. ೨೨೫ | ಒಡ್ಡು; ಪ್ರಾಪ್ತವಾಗು |
| ಅಡಿಯ | ೪೩೨ | ಸೇವಕ; ದಾಸ; ಶರಣ |
| (ಹಿಂದಣ) ಅಡಿವಜ್ಜೆ | ೧೮೮ | ಹುಟ್ಟು; ಜನನ |
| ಅಣಕ | ೧೭ | ಹಾಸ್ಯದಿಂದ ಕಾಡುವುದು; (ಕಾಟ) |
| ಅತಿಗಳೆ | ೧೬೧ | ತಿರಸ್ಕರಿಸು |
| ಅನಾದಿ | ೧೧೬ | ಚಿಲ್ಲಿಂಗ |
| ಅನಾಮಕ | ೧೩೭ | ತಿಳಿಗೇಡಿ; ಅಪ್ರಸಿದ್ಧನಾದವನು. |
| ಅನ್ನಿಗ (ರು) | ೩೬೨ | ಅನ್ಯ (ರು); ಬೇರೆಯವ (ರು) |
| ಅನುವ | ೧೨೫ | ರೀತಿಯನ್ನು; ಯೋಗ್ಯಮಾರ್ಗವನ್ನು |
| ಅರತಲ್ಲದೆ | ೧೯೩ | ಬತ್ತಿಹೋದದ್ದಲ್ಲದೆ |
| ಅರಸು | ೮ | ಹುಡುಕು |
| ಅರಿ | ೬,೫೫ | ಕಡಿ (ದು ಹಾಕು) |
| ಅರಿ | ೧ | ತಿಳಿ |
| ಅರಿಕೆ | ಸಂ. ೧೬೨ | ತಿಳಿವು; ಜ್ಞಾನ |
| ಅರಿವೆ | ೩೨೨ | ಜ್ಞಾನ |
| ಅರುಹು | ಸಂ. ೧೪೫ | ಜ್ಞಾನ |
| ಅಲಸು | ೯೩ | ಬೇಸರಪಡು; ಆಯಾಸಪಡು |
| ಅವಗುಣಿ | ೭೬ | ಕೆಟ್ಟವನು; ದುರ್ಜನ |
| ಅಸಂಖ್ಯಾತರು | ೨೪೪ | ಶರಣರು; ಪುರಾತನರು |
| ಅಸು | ಸಂ. ೫೫ | ಪ್ರಾಣ |
| ಅಳಲು | ೨೨೭ | ದುಃಖ |

| | | |
|---|---|---|
| ಅಳುಕು | ಸಂ. ೮೭ | ಅಂಜಿಕೆ |
| ಅಳುಪು | ೧೩೪ | ಆಸೆಪಡು |
| ಅಳಿಗೊಳಲುಬೇಡ | ೨೧೧ | (ಮಾಯೆಯನ್ನೊಡ್ಡಿ) ಪರೀಕ್ಷಿಸಬೇಡ, ವಂಚಿಸಬೇಡ, ಧಿಕ್ಕರಿಸಬೇಡ |
| ಅಂಗರುಚಿ | ೩೦ | ದೇಹಕಾಂತಿ |
| ಅಂತು (ಪ) | ೨೫೫ | ಎಲ್ಲೆ (ಯನ್ನು); ಅಂತ್ಯ |
| ಅಂಬರ | ೪೧ | ಆಕಾಶ |

## ಆ

| | | |
|---|---|---|
| ಆಗುಮಾಡು | ೨೩೪ | ಜ್ಞಾನಿಯನ್ನಾಗಿಮಾಡು ; ಹದಕ್ಕೆ ತರು |
| ಆಣತಿ | ೧೨೫ | ಆಜ್ಞೆ ;ಅಪ್ಪಣೆ |
| ಆದ್ಯರು | ೧೦ | ಪುರಾತನರು |
| ಆದಿ | ೧೧೬ | ಮಹಾಲಿಂಗ |
| ಆಧಿ | ೧೧೯ | ಚಿಂತೆ |
| ಆಪ್ಯಾಯನ | ೧೨೨ | ತೃಪ್ತಿ; ಆನಂದ |
| ಆಱಯ್ | ೧೫೦ | ಆತ್ಮೈಕೆಮಾಡು ; ಕಾಪಾಡು |
| ಆರಯ್ | ಸಂ. ೨೧೨ | ಆಲೋಚಿಸು ; ವಿಚಾರಿಸು |
| ಆಮಿಷ | ಸಂ. ೧೨೬ | ಆಶೆ |
| ಆರೂಢ | ೧೬೭ | ಜ್ಞಾನಿ ; ಯೋಗಿ ; ಸಿದ್ಧಪದವಿಗೆ ಏರಿದವನು. |

## ಇ

| | | |
|---|---|---|
| ಇಕ್ಕೆ | ೧೧೨ | ವಾಸಸ್ಥಾನ; ಮನೆ (ಇರ್ಕೆ) |
| ಇಲ್ಲವೆ | ೩೦೯ | ಶೂನ್ಯ ; ಇಲ್ಲದಿರುವದು |

## ಈ

| | | |
|---|---|---|
| ಈರೇಳು | ೨೨೮ | ಹದಿನಾಲ್ಕು |
| ಈಳೆ | ಸಂ. ೫ | ಕಂಚೀ (ಗಿಡ;) ಹೇರಿಳೆ; ಕಿತ್ತಿಳೆ |

## ಉ

| | | |
|---|---|---|
| ಉಚ್ಚಹ | ೧೯೯ | ಸಂತೋಷ; ಉತ್ಸಾಹ |
| ಉಪಮಿಸು | ೭೩ | ಹೋಲಿಸು |
| ಉಪಾಧಿಕ | ೧೨೩ | ಸಂಸಾರಿ ; ಸಂಸಾರ ಪೋಷಣೆಯಲ್ಲಿ ನಿರತನಾದವನು. |

| | | |
|---|---|---|
| ಉರ | ೯೯ | ಎದೆ |
| ಉರುವಣೆ | ೧೮೦ | ಆತುರ; ಓಲಟಾಟ; ರಭಸದ ವರ್ತನೆ |
| ಉಂಡಿಗೆ | ಸಂ. ೪೮ | ಮುದ್ರೆ; ಠಸ್ಸೆ |
| ಉಲುಹು | ೧೨೨ | ಮಾತು; ಸ್ವರ |
| | | **ಎ** |
| ಎಡರು | ಸಂ. ೨೨೫ | ತೊಂದರೆ; ಸಂಕಟ; ವಿಘ್ನ |
| ಎರಗು | ೪೪ | ನಮಸ್ಕಾರಮಾಡು; ಬಾಗು |
| | | **ಐ** |
| ಐಕಾರ್ಥ | ೧೪೩ | ಒಂದುಗೂಡುವುದು; ಐಕ್ಯ |
| ಐರು | ೨೨೦ | ಗಾಯ |
| | | **ಒ** |
| ಒಕ್ಕುದ | ೮೪ | ಪ್ರಸಾದವನ್ನು; ಶೇಷಾನ್ನವನ್ನು |
| ಒಗೆತನ | ೨೪೪ | ಸಂಸಾರ; ಬಾಳುವೆ |
| ಒಚ್ಚತ | ಸಂ. ೧೧೧ | ಪ್ರಸನ್ನತೆ; ಸಮಾಧಾನ |
| ಒಡಲು | ೩೮ | ದೇಹ |
| ಒಪ್ಪಚ್ಚಿ | ೭೯ | ಸ್ವಲ್ಪ; ಒಂದು ಭಾಗ |
| ಒರೆತುದು | ಸಂ. ೧೧೫ | ಒಸರಿತು; ಉಕ್ಕಿತು |
| ಒರೆಯಾವು | ಸಂ. ೯೩ | ಹಾಲುಕರೆಯುವ ಹಸು |
| | | **ಓ** |
| ಓಗರ | ೧೫೦ | ಅನ್ನ |
| ಓರಂತೆ | ೧೯೪ | ಒಂದೇ ಸಮನಾಗಿ; ಹಿಗ್ಗುಕುಗ್ಗುಗಳಿಲ್ಲದೆ |
| ಓಸರಿಸು | ೨೪೨ | ಓಲು; |
| | | **ಕ** |
| ಕಕ್ಕುಲಿತೆ | ಸಂ. ೮೩ | ಅನುತಾಪ; ಪರಿತಾಪ; ಪ್ರೇಮ; ಆಶೆ |
| ಕಡನ | ೧೩೪ | ಸಾಲವನ್ನು |
| ಕಡಿಯಾಣಿ | ಸಂ. ೨೯ | ಗೆಜ್ಜೆ |
| ಕಣೆ | ೧೪೯ | ಕಲ್ಲುಚೂರು |
| ಕರ್ತೃ | ೧೩೫ | ಒಡೆಯ; ದೇವರು |

| | | | |
|---|---|---|---|
| ಕರಕಡೆ | | ೨೧೧ | ಬಹಳ ಕಡೆಯಾಗಿ; ನಿಕೃಷ್ಟವಾಗಿ |
| ಕರಿ | | ೧೫ | ಆನೆ |
| ಕರಿಗೊಂಡು | | ೧೧೨ | ಸುಟ್ಟು, ಕರಿಕಾಗಿ |
| ಕಾಳಿಕೆ | | ೧೯೪ | ಕಪ್ಪು; ಅಜ್ಞಾನ; ಮಲ |
| ಕಿಚ್ಚು | | ೩೮ | ಬೆಂಕಿ |
| ಕಿರುಕುಣಿ | | ೯ | ಕಿರುಬೆರಳು |
| ಕುಧರ | ಸಂ. | ೩೦ | ಮಣ್ಣಿನ ದಿಸ್ನೆ; ಮಣ್ಣಿನ ಗುಡ್ಡ |
| ಕುನ್ನಿ | ಸಂ. | ೯೨ | ನಾಯಿಮರಿ |
| ಕುರುಹು | | ೨೩ | ಗುರುತು |
| ಕೂರ್ತು | | ೩೫೯ | ಪ್ರೀತಿಯಿಂದ; ಶ್ರದ್ಧೆಯಿಂದ |
| ಕೂರದ | ಸಂ. | ೪೪ | ಪ್ರೀತಿಯಿಲ್ಲದವನು; ಶ್ರದ್ಧೆಯಿಲ್ಲದವನು |
| ಕೂಪರು | ಸಂ. | ೪೪ | ಪ್ರೀತಿಯುಳ್ಳವರು; ಶ್ರದ್ಧೆಯುಳ್ಳವರು |
| ಕೆಯಿ | ಸಂ. | ೨೨ | ಹೊಲ (ಗದ್ದೆ) |
| ಕೆಡೆವೊಡಲು | ಸಂ. | ೬೪ | ಬಿದ್ದುಹೋಗುವ ದೇಹ |
| ಕೈದು | | ೧೯೬ | ಆಯುಧ |
| ಕೈವಾರ | | ೩೫೫ | ಹೊಗಳಿಕೆ; ಸ್ತೋತ್ರ |
| ಕೋಡಗ | ಸಂ. | ೩೨ | ಕೋತಿ |
| ಕೋಲು | ಸಂ. | ೬೦ | ಬಾಣ |

### ಗ

| | | | |
|---|---|---|---|
| ಗಡಣ | | ೧೪ | ಸಮೂಹ |
| ಗರುವ | | ೨೨೮ | ಶ್ರೇಷ್ಠ; ಪರಮ |
| ಗಸಣಿ | | ೧೭೩ | ಬರಿಯ ತೊಂದರೆ |
| ಗೋಣು | | ೬೨ | ಕುತ್ತಿಗೆ |

### ಘ

| | | | |
|---|---|---|---|
| ಘಟ | ಸಂ. | ೧೦೩ | ಮಡಕೆ |
| ಘಟ | ಸಂ. | ೧೨೨ | ದೇಹ |

### ಚ

| | | | |
|---|---|---|---|
| ಚುಳುಕು | | ೨೨೪ | ಸೂಕ್ಷ್ಮ |
| ಚೋದ್ಯ | ಸಂ. | ೧೬೬ | ಆಶ್ಚರ್ಯ |

### ಜ

| | | |
|---|---|---|
| ಜಂಗುಳಿ | ೨೧೭ | ಗುಂಪು; ಸಾಮಾನ್ಯಜನ |

### ಡ

| | | |
|---|---|---|
| ಡಿಂಗರಿಗ | ೪೪೧ | ದಾಸ; ಸೇವಕ |

### ತ

| | | |
|---|---|---|
| ತಗಹು | ಸಂ. ೧೬೭ | ಅಡಚಣೆ |
| ತನೂರುಹ | ೩೦ | ಮೈಗೂದಲು |
| ತವರಾಜ | ೧೨ | ಸಕ್ಕರೆ |
| ತಂಡುಲ | ೧೯೦ | ಅಕ್ಕಿ |
| ತ್ರಿನಯನ | ೨೮ | ಮೂರು ಕಣ್ಣುಳ್ಳವನು: ಈಶ್ವರ |
| ತುಡುಗುಣಿ | ೬೫ | ತೊಂಡು ದನ; ಪೋಲಿ ಅಲೆಯುವ ನಾಯಿ, ದನ |
| ತೆತ್ತಿಗ | ೨೨೨ | ಸಂಬಂಧಿ, ಹೆಣ್ಣುಕೊಡುವವನು |
| ತೆರಹು | ೬೯ | ಬಿಡುವು; ವಿರಾಮ |
| ತೆರೆ | ೨೦೯ | ಚರ್ಮದ ಸುಕ್ಕು |
| ತೊಡಕು | ೧೭ | ತೊಂದರೆ; ಸಮಸ್ಯೆ |
| ತೊಡರು | ೨೩೩ | ಸಂಕೋಲೆ; ಆಭರಣ |
| ತೊರೆ | ೧೨ | ಹೊಳೆ |
| ತೊಳಲು | ೫ | ಸುತ್ತಾಡು |

### ದ

| | | |
|---|---|---|
| ದಳ್ಳುರಿ | ೩೪೧ | ದೊಡ್ಡ ಉರಿ |
| ದಂದುಗ | ೬೬ | ತೊಂದರೆ; ದುಃಖ |
| ದಾಯಗಾರಿಕೆ | ೩೯೯ | ಲಾಭ ಸಂಪಾದನೆ |
| ದಾಸೋಹ | ೫೨ | ಸೇವೆ |
| ದುರಿತ | ೨೫೬ | ಪಾಪ |
| ದೇಹಾರ | ಸಂ. ೧೫೧ | ದೇವಾಹಾರ; ದೇವರಿಗೆ ನೈವೇದ್ಯ |

### ಧ

| | | |
|---|---|---|
| ಧಾವತಿ | ೨೨೦ | ಶ್ರಮ |

## ನ

| | | |
|---|---|---|
| ನಜ್ಜು | ೨೨೭ | ನಂಬು |
| ನನ್ನಿ | ೧೮೪ | ಸತ್ಯ |
| ನನೆ | ಸಂ. ೯ | ಮೊಗ್ಗು |
| ನರವಿಂಧ್ಯ | ಸಂ. ೨೬ | ದೇಹಪಂಜರ |
| ನಲ್ಲ | ೧೩೮ | ಒಡೆಯ ; ಪತಿ |
| ನಂಜು | ಸಂ. ೨೨ | ವಿಷ |
| ನಾರಿವಾಳ | ಸಂ. ೫ | ತೆಂಗು |
| ನಿಗಳ | ೩೭೯ | ಸಂಕೋಲೆ |
| ನಿಚ್ಚ | ೭೯ | ನಿತ್ಯ; ಯಾವಾಗಲೂ |
| ನಿಡುಮುಳ್ಳು | ೧೯೫ | ಉದ್ದವಾದ ಮುಳ್ಳು |
| ನಿಧಾನ | ೩೭ | ಹುಗಿದಿಟ್ಟ ಹಣ ;ಐಶ್ವರ್ಯ |
| ನಿಬ್ಬಣಿಗರು | ೨೨೨ | ಮದುವೆಯಲ್ಲಿ ಎದುರುಗೊಳ್ಳುವ ನೆಂಟರು, ಬೀಗರು |
| ನಿರಾಳ | ೨೧ | ನಿಷ್ಕಲ ಲಿಂಗ (ತತ್ತ್ವ) |
| ನಿಲವು | ೧೯ | ಸ್ಥಿತಿ ; ನೆಲೆ |
| ನಿರ್ವಾಣ (ನಪ್ಪ) | ೧೧೯ | ಮೋಕ್ಷ (ಪಡೆದವನಾಗುವ) |
| ನಿಶ್ಶೂನ್ಯ | ೨೧ | ನಿಷ್ಕಲ ಲಿಂಗಕ್ಕೆ ಮೇಲಿನದು |
| ನೆಗಳು | ಸಂ. ೧೨೯ | ಮೊಸಳೆ |
| ನೆಲಗಟ್ಟು | ೧೧೯ | ಅಸ್ತಿಭಾರ |
| ನೆರಸಿ | ಸಂ. ೧೨೦ | ಒಟ್ಟುಗೂಡಿಸಿ ; ಶೇಖರಿಸಿಟ್ಟುಕೊಂಡು |
| ನೆಳಲು | ಸಂ. ೧೩೫ | ಮಾಯೆ |
| ನೇಣು | ೧೧ | ಹಗ್ಗ. |

## ಪ

| | | |
|---|---|---|
| ಪರಸಮಯ | ೧೩೪ | ಅನ್ಯಮತ ; ಇತರರ ಮತ, ಸಿದ್ಧಾಂತ |
| ಪರಾಕಿ | ೨೪೦ | ಹೊಗಳಿಕೆ ; ಹೊಗಳುಭಟ್ಟ |
| ಪವಣಿಸು | ೪೦೨ | ಜೋಡಿಸು |
| ಪಂಕ | ೬೫ | ಕೆಸರು |
| ಪಂಚೇಂದ್ರಿಕ | ಸಂ. ೧೩೧ | ಇಂದ್ರಿಯಾಧೀನನಾದವನು ; ವಿಷಯ ಲೋಲುಪ |

| | | |
|---|---|---|
| ಪ್ರಪಂಚ | ಸಂ. ೨೭ | ಸಂಸಾರ |
| ಪ್ರಪಂಚಿ | ೪೪೭ | ಸಂಸಾರಿ |
| ಪಾವಕ | ೪೬ | ಬೆಂಕಿ |
| ಪಾಷಾಣ | ೧೭೩ | ಕಲ್ಲು ; ಇಷ್ಟಲಿಂಗ |
| ಪಾಂಸೆ | ೧೯೫ | ಪಾವಸೆ; ಪಾಚಿ |
| ಪುತ್ಥಳಿ | ೪೯ | ಬೊಂಬೆ; ವಿಗ್ರಹ |
| ಪುಳಕ | ೭೭ | ರೋಮಾಂಚ |
| ಪೂರ್ವಾಶ್ರಯ | ೨೯೧ | ಹಿಂದಿನ ಲಕ್ಷಣಗಳು ; ಹಿಂದಿನಸ್ಥಿತಿ, ಸಂಬಂಧಗಳು |
| ಪೊಣ್ಮು | ೭೭ | ಹೊಮ್ಮು ; ಉಕ್ಕು |
| | | ಫ |
| ಫೇನ | ೪೪ | ನೊರೆ |
| | | ಬ |
| ಬಟ್ಟೆ | ೧೧ | ದಾರಿ; ಮಾರ್ಗ |
| ಬಣಬೆ | ಸಂ. ೬೮ | ಮೆದೆ |
| ಬರ | ೨೨೮ | ಕ್ಷಾಮ |
| ಬರುಕಾಯರು | ೨೮೭ | ಮನುಷ್ಯ ಮಾತ್ರದವರು ; ಭವಿಗಳು |
| ಬರುದೊರೆ | ಸಂ. ೮೮ | ಪ್ರವಾಹ |
| ಬಂಡು | ಸಂ. ೪೮ | ಮಕರಂದ |
| ಬಿತ್ತು | ೧೮೧ | ಬೀಜ |
| ಬಿಮ್ಮು | ೨೧ | ಸೊಕ್ಕು ; ಮಮಕಾರ |
| ಬುದ್ಬುದ | ೪೪ | ನೀರಗುಳ್ಳೆ |
| ಬೂಟಕ | ೬೫ | ರೂಪತಾಳಿದವನು ; ವೇಷಧಾರಿ |
| ಬೆಳ್ಳೆತ್ತು | ೪೪೫ | ಬಿಳಿಯ ಎತ್ತು |
| ಬೆವಹಾರ | ಸಂ. ೧೦೦ | ಲೋಕ ವ್ಯವಹಾರ |
| ಬೆಂತರ | ಸಂ. ೨೮ | ಪಿಶಾಚಿ ; ಭೂತ |
| ಬೆಂಗೋಲು | ೨೧೭ | ಚಾವುಟಿ ; ಹೊಡೆಯುವ ಕೋಲು |
| ಬೇಟ | ೪೪೮ | ವ್ಯಾಮೋಹ; ಬಯಕೆ |
| ಬೇಹ | ೧೨೮ | ಬೇಕಾದ; ಅವಶ್ಯಕವಾದ |
| ಬೈಗು | ಸಂ. ೧೨೭ | ಸಂಜೆ |

| | | | |
|---|---|---|---|
| | | | **ಭ** |
| ಭಂಗಗಾರ | | ೧೩೬ | ನಾಚಿಕೆಯಿಲ್ಲದವರು ; ಭಂಗಪಟ್ಟವರು |
| ಭವಭಾರಿ | | ೩೬೬ | ಹುಟ್ಟುಸಾವುಗಳುಳ್ಳವನು ; ಲೌಕಿಕ. |
| | | | **ಮ** |
| ಮರ್ಕಟ | | ೭೨ | ಕೋತಿ |
| ಮಚ್ಚರ | ಸಂ. | ೪೨ | ಮತ್ಸರ; ಹೊಟ್ಟೆಕಿಚ್ಚು |
| ಮಚ್ಚು | | ೨೨೭ | ಮೋಹ; ಪ್ರೀತಿ |
| ಮಜ್ಜನ | | ೯೧ | ಸ್ನಾನ |
| ಮಣಿಪ | | ೩೯೦ | ಸೇವೆ;(ದೇವರು ನೇಮಿಸಿದ) ಕರ್ತವ್ಯ, ಅಪ್ಪಣೆ |
| ಮನಧಾತು | ಸಂ. | ೮೩ | ಮನಸ್ಸಿನ ಧೈರ್ಯ |
| ಮರದ ಗೊಟಗೆ | ಸಂ. | ೭೮ | ಮರಗಳ ಗುಂಪು ; ತೋಪು |
| ಮಹ | | ೧೦೮ | ಪರಮಾತ್ಮ |
| ಮಹಂತ | | ೨೪೧ | ಶರಣ ; ಜ್ಞಾನಿ ; ಅನುಭಾವಿ |
| ಮಾದು | ಸಂ. | ೧೩೨ | ಇಲ್ಲವಾಗಿ, ಕೊನೆಗಂಡು; ಮರೆಯಾಗಿ ಮಾಣ್ದು |
| ಮಾರಾಂತಕ | ಸಂ. | ೩೫ | ಈಶ್ವರ |
| ಮಾಯಾಪ್ರಪಂಚಿ | | ೧೦೮ | ಮಾಯೆಗೊಳಗಾದ ಸಂಸಾರಿ |
| ಮಿಕ್ಕು | ಸಂ. | ೫೭ | (ಕೈಗೆ) ಸಿಕ್ಕದೆ, ತಪ್ಪಿಸಿಕೊಂಡು |
| ಮಿಂದು | ಸಂ. | ೩೧ | ಸ್ನಾನಮಾಡಿ |
| ಮೀಂಗುಲಿ | ಸಂ. | ೭೯ | ಮೀನುತಿನ್ನುವ, ಕೊಲ್ಲುವ, ಹಕ್ಕಿ ; ಬಕಪಕ್ಷಿ. |
| ಮುಕ್ಕಣ್ಣ | ಸಂ. | ೧೨೫ | ಮೂರು ಕಣ್ಣುಳ್ಳವನು : ಈಶ್ವರ |
| ಮುಡಿಗೆ | | ೩೨ | ತಲೆಯ ಟೊಪ್ಪಿಗೆ |
| ಮುರುಟು | | ೪೫ | ಮುದುಡು |
| ಮೆಲ್ಲಿದು | | ೨೧೧ | ಮೆಲ್ದು ; ತಿಂದು |
| ಮೊಟ್ಟೆ | | ೧೫೮ | ಗಂಟು |
| ಮೊರಡಿ | ಸಂ. | ೧೫೬ | ಸಣ್ಣ ಗುಡ್ಡ |
| | | | **ರ** |
| ರಜ್ಜು | ಸಂ. | ೯೪ | ಹಗ್ಗ |
| ರೂಹು | | ೨೯ | ರೂಪ |
| | | | **ಲ** |
| ಲೆಂಕ | | ೨೪೮ | ಸೇವಕ |
| ಲೋಗರು | | ೪೬ | ಲೋಕದವರು, ಸಾಮಾನ್ಯ ಜನರು |

## ವ

| | | |
|---|---|---|
| ವಾಚಾಳ | ೧೯ | ಹರಟೆಮಲ್ಲ; ಜಂಬಗಾರ |
| ವಿಕಳ | ಸಂ. ೫೨ | ವಿರಹ; ಅಗಲಿಕೆ |
| ವಿಗರ್ಭಣೆ | ಸಂ. ೮೪ | ನಿಂದೆ; ಗರ್ಹಣೆ |
| ವಿಸ್ಕಂಡ | ೪೨೬ | ಚಾಂಚಲ್ಯ; ಸಮತೆ ತಪ್ಪುವುದು |
| ವೈಶಿಕ | ಸಂ. ೨೭ | ಕಾಪಟ್ಯ; ಮೋಸ. |

## ಶ

| | | |
|---|---|---|
| ಶಠಗ | ಸಂ. ೧೧೦ | ದುಷ್ಟ; ಸುಳ್ಳ; ವಂಚಕ; |
| ಶಿರಃ ಪ್ರಧಾನರು | ೩೩೮ | ಮುಖ್ಯ ಪ್ರಧಾನಿಗಳು |
| ಶಿವದಾನ | ೮೪ | ಮಜ್ಜಿಗೆ |
| ಶೂನ್ಯ | ೨೧ | ನಿಷ್ಕಲ ಲಿಂಗ. |

## ಸ

| | | |
|---|---|---|
| ಸಕಲ ಲಿಂಗ | ೧೮೭ | ದೇವರ ರೂಪ, ಗುಡಿಯಲಿಂಗ, ಮೊದಲಾದುವು |
| ಸಕೀಲ | ೧೭೬ | ಸಂಬಂಧ (ಸೂಚಿಸುವ ಪಾರಿಭಾಷಿಕ ಪದ) |
| ಸಮುಧಾತು | ೧೭೮ | ಶಾಂತಿ; ಧೈರ್ಯ |
| ಸಮುನಿಸು | ೫೬ | ಒದಗು; ಉಂಟಾಗು |
| ಸಮುವೇದಿಸು | ಸಂ. ೯೬ | ಕೂಡಿಕೊಳ್ಳು; ಒಳಗೆ ಸೇರು |
| ಸವಣ | ೨೪೦ | ಜೈನ ಸಂನ್ಯಾಸಿ (ಕ್ಷಪಣ, ಶ್ರಮಣ) |
| ಸಯುವಪ್ಪ | ೨೪೪ | ತಕ್ಕ, ಮನಸ್ಸಿಗೆ ಪ್ರಿಯವಾದ |
| ಸ್ವೆಯುವಪ್ಪಂತೆ | ೧೮೭ | ಇಚ್ಛೆಯಿದ್ದಂತೆ |
| ಸಂಗ್ರಾಮು | ಸಂ. ೧೩೧ | ಯುದ್ಧ |
| ಸಂಚವ | ೧೪೨ | ಗುಂಪು |
| ಸಂದಣಿ | ೨೦ | ಗುಂಪು |
| ಸಿಡಿಗಂಟಿ | ಸಂ. ೨೦ | (?) |
| ಸೀಮೆ | ೧೩೫ | ಕೊನೆ (ಮುಟ್ಟಿದವನು); ಮುಕ್ತ |
| ಸುರಗಿ | ೨೭೭ | ಕತ್ತಿ |
| ಸುರಾಳ | ೨೧ | ಮಹಾಲಿಂಗ |
| ಸುಯಿಧಾನ | ೧೨೭ | ಶಾಂತಿ; ಸುಖ |

| | | |
|---|---|---|
| ಸೊಳ್ಳುನುಡಿ | ೧೫ | ಸತ್ಯದ, ತತ್ತ್ವದ, ಮಾತು |
| ಸೂಸಲು | ೧೫೯ | ಪಕ್ಷಿ ಮೊದಲಾದುವನ್ನು ಹಿಡಿಯಲು ಉಪಯೋಗಿಸುವ ಎರೆ |
| ಸ್ವೈವೆರಗು | ೩ | ಬಹಳ ಬೆರಗು, ಆಶ್ಚರ್ಯ |
| ಸೊಣಗ | ೩೩೬ | ನಾಯಿ |
| ಸೊನೆಗಾರ | ೨೫೪ | ಕಟುಕ |

## ಹ

| | | |
|---|---|---|
| ಹಕ್ಕೆ | ೧೧೨ | ಗೂಡು ; ವಿಶ್ರಾಂತಿಸ್ಥಾನ (ಪಕ್ಷಿ) |
| ಹಣ್ಣೆ | ೧೫೯ | ಸಿದ್ಧಮಾಡಿ |
| ಹದುಳ | ೩೬೧ | ಕ್ಷೇಮ |
| ಹಮ್ಮು | ೨೧ | ಅಹಂಕಾರ |
| ಹಂದೆ | ಸಂ. ೧೩೧ | ಹೇಡಿ |
| ಹಾರೆ | ಸಂ. ೮೬ | ಬಯಸೆನು, ನಿರೀಕ್ಷಿಸೆನು |
| ಹಾವಿಗೆ | ೯೫ | ಪಾದುಕೆ |
| ಹುಯ್ಯಲು | ೭೩ | ಬೊಬ್ಬೆ ; ಮೊರೆ ; ಗೋಳಾಟ |
| ಹೆರಸಾರು | ೧೪೨ | ಹಿಂದಕ್ಕೆ ಹೋಗು |
| ಹೆರಹಿಂಗು | ಸಂ. ೧೮೦ | ಅಳಿಸಿಹೋಗು ; ಮರೆತುಹೋಗು |
| ಹೇಳಿಗೆ | ಸಂ. ೧೧೩ | ಬುಟ್ಟಿ |
| ಹೊಟ್ಟು | ಸಂ. ೭೭ | ಬೊಬ್ಬೆ ; ಸಿಪ್ಪೆ |
| ಹೊಡೆಗೆಡೆ | ೧೪ | ಕೆಳಕ್ಕೆ ಬೀಳು, ಉರುಳು |
| ಹೊಲಬು | ೩೨೧ | ನೆಲೆ ; ದಾರಿ |
| ಹೊಳ್ಳು | ಸಂ. ೭೭ | ಜೊಳ್ಳು |
| ಹೋರಟೆ | ಸಂ. ೨೨೩ | ಇಂದ್ರಿಯಗಳಲ್ಲಿ ಸಿಕ್ಕಿ ಹೋರಾಟ |

---

ಬೆಂಗಳೂರು ಸಿಟಿ ಕೆ. ಪಿ. ಹೆಚ್. ಪ್ರೆಸ್ಸಿನಲ್ಲಿ
ಡಿ. ವಿ. ರಾಮರಾಯರಿಂದ ಮುದ್ರಿತವಾಗಿದೆ.

# PUBLICATIONS OF THE MYSORE UNIVERSITY

## I. ENGLISH

PRICE
Rs. A. P.

1. The Mysore Tribes & Castes. By H. V. NANJUNDAYYA. M. A., M. L., C. I. E., and DIWAN BAHADUR L. K. ANANTHAKRISHNA IYER, B.A., M.D. HON. (Bres.). Four Volumes: *Volume II, 1928; Volume III, 1930; Volume IV, 1931; Volume I, 1935.* Each Volume is profusely illustrated.
   Volume I .. .. ..
   Other Volumes each .. .. .. 15 0 0
   Appendix to the Four Volumes of the Mysore Tribes and Castes. .. 12 8 0

.2 Pramana Samuccaya of Acarya Dinnaga. CHAP. I. By H. R. RANGASWAMI IYENGAR, M.A. .. 3 0 0

3. Labour & Housing in Bangalore City. By C. NARASIMHA MOORTY, M.A., and R. K. SRINIVASAN, M.A. .. 8 0 0

4. The Munro System of British Statesmanship in India. By K. N. Venkatasubba Sastry, M.A., PH.D., F. R. Hist.s. .. .. .. .. 3 0 0

5. Sources of Karnataka History, Vol. I. By S. Srikanta Sastry, M.A. ... .. Ordinary .. 3 0 0
   Special .. 3 8 0

6. Dvaita Philosophy and Its Place in the Vedanta. By H. N. Raghavendrachar, M.A. .. .. .. 3 0 0

7 A Grammar of the oldest Kanarese Inscriptions by A. N. Narasimhia M.A. L.T. Ph. D. .. .. .. 2 12 0

8. Theory of Interest. by S. Laxminarasimhan M.A.

9. Metaphysics of value Vol I. by K. R. Sriniva Iyengar M.A., 5 0 0

## II. KANNADA

*(a) General*

1. History of Kannada Language.
2. History of Kannada Literature. By Praktanavimarsa Vichakshana Mahamahopadhyaya Rao Bahadur R. Narasimhachar, M.A., M.R.A.S. Each .. 1 0 0
3. Kannada Kaipidi, Vol. I .. Ordinary .. 1 4 0
   Special .. 1 12 0

*(b) Mysore University Kannada Publication Series*

1. Harischandrakavyasangraha. Abridged and-Edited by T. S. Venkannaiya, M.A., and A. R. Krishna Sastry, M.A., .. .. .. .. 0 12 0
2 Kadambari Sangraha. Abridged and Edited by T. S. Venkannaiya, M.A. .. .. .. .. 0 12 0
3. Prabhulingaleeleya Sangraha. Abridged and Edited by M. S. Basavalingayya, M.A, B.L., and M. R. Srinivasa Moorty, B.A. .. .. .. 0 12 0
4. Sakratisana Koneya Dinagalu. Translation of Four Socratic Dialogues with an Introduction. By A. N. Murty Rao, M.A. .. Ordinary .. 0 12 0
   Calico .. 1 0 0

| | | Price Rs. | A. | P. |
|---|---|---|---|---|
| 5. Sri Ramakrisha Paramahamsa. By K. V. Puttappa, M.A. .. .. | Ordinary .. | 0 | 12 | 0 |
| | Calico .. | 1 | 4 | 0 |
| 6. Rabindranath Tagore. By M. Venkatesa Iyengar, M.A. ... ... | Ordinary .. | 0 | 12 | 0 |
| | Calico .. | 1 | 4 | 0 |
| 7. Arogya: adara Jnana mattu Sadhana. By J. A. Iswara-Murty, B.A., L.M.S., B.S.c., | Ordinary .. | 0 | 12 | 0 |
| | Calico ... | 1 | 4 | 0 |
| 8. Pamparamayana Sangraha. By Astana Mahavidwan Tirivallur Srinivasaraghavachar and D. L. Narasimhachar, M.A. .. | Ordinary .. | 0 | 12 | 0 |
| | Calica .. | 1 | 0 | 0 |
| 9. Hana Prapancha. By V. Sitharamiah, M.A. | Ordinary .. | 0 | 12 | 0 |
| | Calico .. | 1 | 4 | 0 |
| 10. Sanskrit Drama. By A. R. Krishna Sastry, M.A. | Ordinarg .. | 0 | 12 | 0 |
| | Calico .. | 1 | 4 | 0 |
| 11. Jiva Vignana, By B. Venkatanaranappa, M A. | Ordinary .. | 0 | 12 | 0 |
| | Calico .. | 1 | 4 | 0 |
| 12. Hindu Darsanasara, By Mahamahopadhyaya. Panditaratnam L. Srinivasachar. | Ordinary .. | 0 | 12 | 0 |
| | Calico .. | 1 | 4 | 0 |
| 13. Rajanithi, By H Krishna Rao, M.A. | Ordinary .. | 0 | 12 | 0 |
| | Calico .. | 1 | 4 | 0 |
| 14. Hadibadeyadharma. By Sri D. Champabai, M.A. | Ordinary .. | 0 | 12 | 0 |
| | Calico .. | 1 | 4 | 0 |
| 15. Purana Nama Chudamani. By B. Rama Rao, M.A., LL.B. and Panyam Sundara Sastry Vidwan | Ordinary .. | 2 | 12 | 0 |
| | Calico .. | 3 | 4 | 0 |
| 16. Jannana Yasodharacharite, By K. V. Raghavachar, B.A., B.T. .. .. | Ordinary ... | 0 | 12 | 0 |
| | Calico .. | 1 | 4 | 0 |
| 17. Short History of Greek Philosophy. By K. R. Srinivasa Iyengar, M.A. .. .. | Ordinary .. | 1 | 0 | 0 |
| | Calico .. | 1 | 4 | 0 |
| [illegible] Indian Geology by Y. Nagappa, M.Sc, | Ordinary | 0 | 12 | 0 |
| | Calico | 1 | 4 | 0 |

Note—*The Publications are Available for Sale*

AT

THE ORIENTAL LIBRARY, MYSORE

